1992 ಬೆಲೆ ರೂ. 5/-

ನೆಮಂದಿಗೆಲ್ಲ ಮುದ ನೀಡುವ ಮಾಸಿಕ

# ಕಸ್ತೂರಿ

ಅನುಕ್ಷಣವೂ
ಅರ್ಥಪೂರ್ಣ
ಬದುಕು....

ಪುಸ್ತಕ ವಿಭಾಗ

ರಾಜ್‌ಕಪೂರ್
...ಗೂ ಅರಿಯದ
...ತ ನಿರ್ದೇಶಕ !

ಗಣೇಶ ಪೂಜೆಯ...
ಆದ...

ಆರೋಗ್ಯದಂಗಳ



ತಾಯಿ ಮತ್ತು ಎದೆಹಾಲು ಎಂಬ ಜೇನ...



ಮುತ್ತಿನಂತಹ ಜೋಳ ಕೊಟ್ಟೀತೆ ಈ ಸುಗ್ಗಿ?

## ಚಿಂತನೆ

ಸಪ್ಟೆಂಬರ್ ಎಂದರೆ 'ಕಸ್ತೂರಿ'ಗೆ ಎಲ್ಲಿಲ್ಲದ ಸಂಭ್ರಮ. ಆಗದು ಮತ್ತೆ ಹೊಸ ಹುರುಪು-ಹೆಮ್ಮೆಗಳೊಂದಿಗೆ ತನ್ನ ಅಭಿಮಾನಿ ಓದುಗರ ಸೇವೆಗೆ ಅಣಿಯಾಗುತ್ತದೆ. ಬದುಕಿನ ಎಲ್ಲ ಅದ್ಭುತಗಳನ್ನು, ವಾಸ್ತವಗಳನ್ನು, ಅವಾಂತರಗಳನ್ನು, ರಹಸ್ಯ-ಸಾಹಸ-ಸೋಜಿಗಗಳನ್ನು ತನ್ನದೇ ಆದ ವಿಶಿಷ್ಟ ರೀತಿಯಲ್ಲಿ ತಮ್ಮೆದುರು ತೆರೆದಿಡಲು ತವಕಿಸುತ್ತದೆ. ಕನ್ನಡಮ್ಮನ ಮಡಿಲಲ್ಲಿನ ಕಲೆ-ಸಾಹಿತ್ಯ-ಜನಜೀವನವನ್ನು ಪ್ರತಿಬಿಂಬಿಸುತ್ತಲೇ ಬಂದ 'ಕಸ್ತೂರಿ' ಈ ಸಂಚಿಕೆಯೊಂದಿಗೆ ತನ್ನ ಮೂವತ್ತೇಳನೆಯ ವರ್ಷದಲ್ಲಿ ಅಡಿಯಿಡುತ್ತಲಿದೆ.

ಪುಟಪುಟವೂ ಪುಟವ ಜ್ಞಾನಕಾರಂಜಿಯಾಗಬೇಕೆಂಬುದು 'ಕಸ್ತೂರಿ'ಯ ಮುಖ್ಯಧ್ಯೇಯ. ಎಲ್ಲ ಮೂಲಗಳಿಂದ ಮಾಹಿತಿ ಪೂರ್ಣ ಲೇಖನಗಳನ್ನಾಯ್ದು ನಿಮ್ಮ ಮಿದುಳಿಗೆ ಗ್ರಾಸವೊದಗಿಸುವ ಕೈಂಕರ್ಯವನ್ನು ಪ್ರಾಮಾಣಿಕವಾಗಿಯೇ ಮಾಡಿಕೊಂಡು ಬಂದಿದೆ. ಜತೆಗೆ ನಿಮ್ಮೆಲ್ಲರ ಆಸಕ್ತ ಪಾಲ್ಗೊಳ್ಳುವಿಕೆಯನ್ನೂ 'ಕಸ್ತೂರಿ' ಆಪ್ಯಾಯತೆಯಿಂದ ಬಯಸುತ್ತದೆ.

ಕಳೆದ ಜನೆವರಿಯಿಂದ ಹೊಸರೂಪ ಹೊತ್ತು ಬರುತ್ತಿರುವ ಈ ಪತ್ರಿಕೆಗೆ ನಿಮ್ಮೆಲ್ಲರ ಅಭಿಮಾನವೇ ಜೀವದ್ರುವ. ಮನೆಮಂದಿಗೆಲ್ಲ ಮುದ ನೀಡುತ್ತ ಬೆಳೆಯುತ್ತಿರುವ 'ಕಸ್ತೂರಿ' ಕನ್ನಡವಿರುವೆಡೆಯೆಲ್ಲ ತನ್ನ ಕಂಪನ್ನು ಸೂಸುತ್ತಿದೆ.

ಕಂಪನ್ನು ಹಂಚುವುದೆಂದರೆ ಆತ್ಮೀಯತೆಯ ಸಿಂಚನಗೈದಂತೆ. ಅಲ್ಲವೆ ?

● ವ್ಯವಸ್ಥಾಪಕ ಸಂಪಾದಕರು

# ಸಹ ಚಿಂತನ

ಗಡಿನಾಡಿನ ಅಂತರ್‌ಭಾಷಾ ವಿವಾಹದ ನಂತರದ (''ಸೀಮಾಭಾಗದಲ್ಲಿ ನರಳುತ್ತಿರುವ ಕನ್ನಡ'') ಸೀನರಿಗಳನ್ನು ವಿವರಿಸುತ್ತ ಲೇಖಕರು ವ್ಯಕ್ತಪಡಿಸಿದ ಅಭಿಪ್ರಾಯಕ್ಕೆ ವ್ಯತಿರಿಕ್ತವಾದ ನಿದರ್ಶನವನ್ನು ನೀಡಬಯಸುತ್ತೇನೆ.

ವಿಜಾಪುರದಲ್ಲಿ ವಕೀಲರಾಗಿರುವ, ಮರಾಠಿಯ ಗಂಧವಿಲ್ಲದ ನಮ್ಮ ಅಣ್ಣ ಕನ್ನಡ ಗೊತ್ತಿಲ್ಲದ ಅತ್ತಿಗೆಯನ್ನು ಮದುವೆಯಾದರು. ನಮ್ಮ ಮನೆಯಲ್ಲಿ ಯಾರಿಗೂ ಮರಾಠಿ ಬಾರದು. ಬಂದ ಹೊಸತರಲ್ಲಿ (1980) ಮರಾಠಿಯ ಉಚ್ಚಾರ ಕೆಟ್ಟೀತು ಎಂಬ ಕಾರಣದಿಂದ ಅತ್ತಿಗೆ ಕನ್ನಡ ಕಲಿಯಲು ನಿರಾಕರಿಸಿದರು. ಮನೆಯಲ್ಲಿ ಯಾರೂ ಒತ್ತಾಯಿಸಲಿಲ್ಲ ಕೂಡ. ಇಂದು ಕನ್ನಡವನ್ನು ಚೆನ್ನಾಗಿ ಮಾತನಾಡಲು ಬರೆಯಲು ಬಲ್ಲ ಅತ್ತಿಗೆಯ ಪರಮೋದ್ದೇಶವೆಂದರೆ ಕನ್ನಡದಲ್ಲಿ ಎಂ.ಎ. ಮಾಡುವುದು; ಶ್ರೇಷ್ಠ ಕನ್ನಡ ಕೃತಿಗಳನ್ನು ಮೂಲದಲ್ಲೇ ಓದುವುದು.

ಈ ಹನ್ನೆರಡು ವರ್ಷಗಳಲ್ಲಿ ನಮ್ಮ ಮನೆಯಲ್ಲಿ ಯಾರೂ ಮರಾಠಿ ಕಲಿಯಲಿಲ್ಲ. ಕಾಲೇಜಿನಲ್ಲಿ ಮರಾಠಿ ಬೋಧಿಸುವ ಅತ್ತಿಗೆ ಮನೆಯಲ್ಲಿ ಕನ್ನಡ ಮಾಧ್ಯಮ ಶಾಲೆಯ ತಮ್ಮ ಪುತ್ರನಿಗೆ ಕನ್ನಡ ಹೇಳಿಕೊಡುತ್ತಾರೆ!

**ಜಬಲಪುರ** **ಶ್ರೀನಿವಾಸ ಮ. ಕಟ್ಟಿ**

○

''ಸೀಮಾಭಾಗದಲ್ಲಿ ನರಳುತ್ತಿರುವ ಕನ್ನಡ'' (ಜುಲೈ 92) ಲೇಖನದಲ್ಲಿ ಬೆಳಗಾವಿ ನಗರದ ಕನ್ನಡಿಗರ ಸಂಖ್ಯೆ ಶೇಕಡಾ ಅರವತ್ತೈದು ಎಂದು ಹೇಳಲಾಗಿದೆ. ಆದರೆ ಜನಗಣತಿಯನ್ವಯ ಅಲ್ಲಿ ಶೇ.44 ಜನ ಮರಾಠಿಗರಿದ್ದಾರೆ. ಜೊತೆಗೆ ಕೊಂಕಣಿ, ಹಿಂದಿ ಮತ್ತು ಉರ್ದು ಭಾಷಿಕರೂ ಇದ್ದಾರೆ. ಅಂದಮೇಲೆ ಶೇ.65ರಷ್ಟು ಕನ್ನಡಿಗರಿರಲು ಹೇಗೆ ಸಾಧ್ಯ? ಕನ್ನಡಿಗರು ಸುಮಾರು ಶೇ.30ರಷ್ಟಿರಬಹುದಷ್ಟೆ !

ಅಫಘಾನಿಸ್ತಾನ ಕುರಿತ ಲೇಖನದಲ್ಲಿ ಈ ದೇಶ 1850ರಿಂದ 1947ರವರೆಗೆ ಬ್ರಿಟಿಷ್ ಸಾಮ್ರಾಜ್ಯದ ಭಾಗವಾಗಿತ್ತೆಂದು ತಿಳಿಸಲಾಗಿದೆ. ಐತಿಹಾಸಿಕ ಸತ್ಯವೆಂದರೆ ಅಫಘಾನಿಸ್ತಾನ ಒಂದು ದಿನವೂ ಬ್ರಿಟಿಷ್‌ರ ಆಡಳಿತಕ್ಕೆ ಒಳಪಟ್ಟಿರಲಿಲ್ಲ. !

**ಬೆಂಗಳೂರು** **ಕೆ.ದ್ವಾರಕಾನಾಥ್**

○

ಜುಲೈ ಸಂಚಿಕೆಯ 'ನೀತಿಕಥೆ' ಕುರಿತು ಆಳವಾಗಿ ಚಿಂತಿಸಿದಾಗ ಲೇಖಕರು (ಆಸ್ಕರ ವೈಲ್ಡ್) ಬೈಬಲನ್ನು ಸರಿಯಾಗಿ ಅಭ್ಯಸಿಸದೆ, ಮನರಂಜ, ನೆಗಾಗಿ ಚಿತ್ರಿಸಿದ ತತ್ವವಿಲ್ಲದ ಬರಹದಂತೆ ಕಾಣುತ್ತದೆ. !

**ದಾವಣಗೆರೆ** **ಜಾರ್ಜ್**

○

'ಭಾರತದ ಮಹಿಳೆ ಮತ್ತು ಅಂಬೇಡ್ಕರ' (ಜುಲೈ 92) ಲೇಖನದ ಕುರಿತು:

ಹೆಣ್ಣಿನ ಪೂಜೆ ಹಾಗೂ ಸ್ವಾತಂತ್ರ್ಯಹರಣ ಎರಡನ್ನೂ ಬೋಧಿಸಿದ ಮನು, ಗುದ್ದಿನಲ್ಲಿ ಹೆಗ್ಗಣವನ್ನಿಟ್ಟು ಮೇಲೆ ಸಾರಿಸಿದ. ಇದನ್ನೇ ಪೋಷಿಸಿಕೊಂಡುಬಂದ ಪುರೋಹಿತಶಾಹಿ ಸಂಸ್ಕೃತಿ ಹೆಣ್ಣನ್ನು ಹೆಣ್ಣಾಗಿ ಕಾಣಲೇಇಲ್ಲ. ಆದ್ದರಿಂದ ಎಲ್ಲ ಪುರುಷ ಪ್ರಧಾನ ಧರ್ಮಗಳನ್ನು ತಿರಸ್ಕರಿಸಿ ಮಾನವೀಯ ಧರ್ಮವನ್ನು ಕಟ್ಟಲು ಮಹಿಳೆ ಸಿದ್ಧಳಾಗಬೇಕೆನ್ನಿಸುತ್ತದೆ. !

**ದೇಗಾಂವ** **ಸೂರ್ಯಕಾಂತ ಎಸ್. ಸುಜ್ಯಾತ್**

○

ಮುಖಪುಟದಲ್ಲಿ ಪ್ರಕಟವಾದ ಓಂಕಾರ ಗಣಪತಿಯ ವರ್ಣಚಿತ್ರ, ಚುಕ್ಕೆ ಚಿತ್ರ ಕಲಾವಿದ ವಿಶ್ವನಾಥ ಬುರಾಣಪುರ ರಚಿಸಿದ್ದು.

'ಪ್ರೀತಿಸಲರಿಯದ ನಾವು' (ಅಗಸ್ಟ 92) ಲೇಖನದಲ್ಲಿ I Love you ಗೆ ಕನ್ನಡದಲ್ಲಿ ಸಂವಾದಿ ಪದವಿಲ್ಲವೆಂದು ತಿಳಿಸಲಾಗಿದೆ. ಕನ್ನಡದ ಪದಗಳಲ್ಲಿ ಆ 'ಪ್ರೀತಿ' ಇಲ್ಲದಿರಬಹುದು. ಆದರೆ ಕನ್ನಡಿಗರ ಭಾವನೆಗಳಲ್ಲಿ ಇಂಗ್ಲಿಷ್‌ಗಿಂತಲೂ ಹೆಚ್ಚಿನ ಪ್ರೀತಿ ಇದೆ!!

**ಓರಾದ (ಬ)** **ಶಿವಕುಮಾರ ಕಟ್ಟೆ**

'ದೇಶವನ್ನು ಪ್ರೀತಿ ಮಾಡುತ್ತೇನೆ' ಇತ್ಯಾದಿ ಮಾತುಗಳಲ್ಲಿ ಲೇಖಕರು ನಾಟಕೀಯತೆ ಗುರುತಿಸಿದ್ದಾರೆ. ಸ್ವಾಮೀ, ನಾಟಕೀಯತೆ ಶಬ್ದಗಳಲ್ಲಿದೆಯೋ, ಮಾತಿನ ಧಾಟಿಯಲ್ಲಿದೆಯೋ ವ್ಯಕ್ತಿಯ ಗುಣದಲ್ಲಿದೆಯೋ? ದೇಹ ನಶ್ವರ ಎಂದು ನಂಬಿದಾಕ್ಷಣ ನಮ್ಮಲ್ಲಿ ಪ್ರೀತಿ ಇಲ್ಲವೆಂದು ಭಾವಿಸುವುದು ಮೂರ್ಖತನ. ಮೋಕ್ಷದೆಡೆಗಿನ ಮೊದಲ ಮೆಟ್ಟಿಲೇ 'ಪ್ರೀತಿ' ಎಂದು ನಂಬುವವರು ನಾವು. ಆಂಗ್ಲರ I Love you ಪದವನ್ನು ಕೊಂಡಾಡುವ ಲೇಖಕರು ಅಲ್ಲಿನ ಅಧಿಕ ಸಂಖ್ಯೆಯ ವಿವಾಹ ವಿಚ್ಛೇದನಕ್ಕೆ ಏನನ್ನುತ್ತಾರೆ?

ನಮ್ಮಲ್ಲಿ ಆರೋಗ್ಯಕರ ಲೈಂಗಿಕ ವಾತಾವರಣವಿಲ್ಲವೆನ್ನುವುದು ಸತ್ಯ, ಜೊತೆಗೆ ನಮ್ಮಲ್ಲಿಯ ಸಹಭಾಗಿತ್ವದ ಕೊಂಡಿ ಸಡಿಲಗೊಂಡಿಲ್ಲವೆನ್ನುವುದೂ ಸುಳ್ಳಲ್ಲ.!

**ಬಾದಾಮಿ** **ನರಸಿಂಹ ಕೆರೂರ**

'ನಾನು ದೇವರನ್ನು ಕಂಡಿದ್ದೇನೆ' ಎಂದು ಖಂಡಿತವಾಗಿ ನುಡಿಯುವ ಪಿ.ಸಿ. ಸರ್ಕಾರ್ ಅವರ ಅಭಿಪ್ರಾಯಗಳಲ್ಲಿ (ಅಗಸ್ಟ 92) ಗೊಂದಲದ ಅಂಶಗಳಿವೆ. 'ನಾನೇ ದೇವರು' ಎಂಬುದನ್ನು ಒಪ್ಪಿಕೊಳ್ಳುವ ಅವರು 'ಜಗತ್ತು ಮಿಥ್ಯ' ಎಂಬುದನ್ನೂ ಮೆಚ್ಚಿಕೊಳ್ಳುವುದು ವಿಚಿತ್ರ. 'ದೇವರೇ ಮನುಷ್ಯನನ್ನು ಸೃಷ್ಟಿಸಿರಲಿ ಅಥವಾ ಮನುಷ್ಯನೇ ದೇವರನ್ನು ಸೃಷ್ಟಿಸಿರಲಿ, ನಾವು ವಿವಾದ ಬೆಳೆಸುವುದು ಬೇಡ' ಎನ್ನುವ ಅವರ ನಿಲುವಿನಲ್ಲಿ ಖಚಿತತೆ ಎಲ್ಲಿದೆ? ತಂದೆ-ತಾಯಿಯರನ್ನು ದೇವರೆಂದು ಭಾವಿಸುವ ಅವರ ನಿಲುವು ಭಾವಾತಿರೇಕದ್ದು ನಮ್ಮ ರಾಷ್ಟ್ರವನ್ನು ಹಾಳುಗೆಡಹುತ್ತಿರುವುದು 'R' ಬಾಂಬು (Religion Bomb) ಎಂಬುದನ್ನು ಒಪ್ಪಬಹುದಾಗಿದೆ. ಅವರು ದೇವರ ಬಗೆಗೆ ಐಂದ್ರಜಾಲಿಕ ಲಹರಿಯನ್ನು ಹರಿಸಿದ್ದಾರೆನ್ನಬಹುದು.!

**ಬೆಂಗಳೂರು** **ಅಡ್ಡಂಗಡಿ ಕೊಟ್ರಪ್ಪ**

○

'ಎನ್ಕೆ'ಯವರು ತಮ್ಮ ಲೇಖನದಲ್ಲಿ (ಮೇ 92) 'ತೀವ್ರ ದೈವತ್' ಎಂಬ ಪದಪ್ರಯೋಗ ಮಾಡಿದ್ದಾರೆ. ಹಿಂದೂಸ್ತಾನಿ ಸಂಗೀತದಲ್ಲಿ 'ತೀವ್ರ ದೈವತ್' ಎನ್ನುವ ಪದ್ಧತಿ ಇಲ್ಲ. ಅದು 'ಶುದ್ಧ ದೈವತ್' ಎಂದಾಗಬೇಕು.!

**ಬೊಳುವಾರು** **ಪುತ್ತೂರು ಮಾಧವ ನಾಯಕ್**

## ಶಿವರಾಮ ಕಾರಂತ ಪುರಸ್ಕಾರ, ಪ್ರಶಸ್ತಿ – 1992

5000ರೂ. ಜೊತೆಗೆ ನೀಡಲಾಗುವ 'ಶಿವರಾಮ ಕಾರಂತ ಪುರಸ್ಕಾರ'ಕ್ಕಾಗಿ ಈ ವರ್ಷದ ವಿಮರ್ಶೆ ಮತ್ತು ಸಂಶೋಧನಾ ಕೃತಿಗಳನ್ನು ಆಹ್ವಾನಿಸಲಾಗಿದೆ. ಕನ್ನಡ ಸಾಹಿತ್ಯಲೋಕಕ್ಕೆ ವಿಶೇಷ ಕೊಡುಗೆ ನೀಡಿಯೂ ಎಲ್ಲಿಯೂ ಸರಿಯಾದ ಮನ್ನಣೆ ಸಿಗದ ಲೇಖಕರಿಗೆ ಪ್ರತಿ ವರ್ಷ ನೀಡಲಾಗುವ ಕನಿಷ್ಠ 7000ರೂ. ಒಳಗೊಂಡ ಶಿವರಾಮ ಕಾರಂತ ಪ್ರಶಸ್ತಿಗಾಗಿ ಅಂಥ ಲೇಖಕರ ಸಾಧನೆ ಸಿದ್ಧಿಗಳ ವಿವರಗಳನ್ನು ಒದಗಿಸಲು ಕನ್ನಡ ಅಭಿಮಾನಿಗಳನ್ನು ಕೋರಲಾಗಿದೆ. ಸ್ವವಿಳಾಸದ ಲಕೋಟೆಯೊಂದಿಗೆ ಸಂಪರ್ಕಿಸಬೇಕಾದ ವಿಳಾಸ: ಪ್ರಧಾನ ಕಾರ್ಯದರ್ಶಿ, ಶಿವರಾಮ ಕಾರಂತ ಪ್ರತಿಷ್ಠಾನ (ರಿ), ಮಹಾವೀರ ಕಾಲೇಜು, ಮೂಡಬಿದ್ರೆ, - 574197.



# ಕಸ್ತೂರಿ

## ಕನ್ನಡ ಡೈಜೆಸ್ಟ್


ವ್ಯವಸ್ಥಾಪಕ ಸಂಪಾದಕ :

ಕೆ.ಶಾಮರಾವ್

○

ಸಂಪಾದಕ :

ಎನ್.ವಿ. ಜೋಶಿ

○

ನಿರ್ವಹಣೆ :

ರವಿ ಬೆಳಗೆರೆ


### ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ 1ನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳ 5ನೇ ದಿನಾಂಕ ದೊಳಗೆ ತಲುಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರ ವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

○○○○○

### ಹೊಸ ಚಂದಾ ದರಗಳು

| | | |
|---|---|---|
| ಬಿಡಿ ಸಂಚಿಕೆ | .......... | ರೂ. 5-00 |
| 1 ವರ್ಷಕ್ಕೆ | ಅಂಚೆ ಸೇರಿ | ರೂ.60-00 |
| 2 ವರ್ಷಕ್ಕೆ | ಅಂಚೆ ಸೇರಿ | ರೂ.110-00 |
| 3 ವರ್ಷಕ್ಕೆ | ಅಂಚೆ ಸೇರಿ | ರೂ.150-00 |

○○○○○


ಕಸ್ತೂರಿ ಕಾರ್ಯಾಲಯ,
ಕೊಪ್ಪೀಕರ ರಸ್ತೆ, ಹುಬ್ಬಳ್ಳಿ - 580020



ಸಂಪುಟ : 37 ಸಂಚಿಕೆ : 1

ಸಪ್ಟೆಂಬರ್ 1992


# ಅಂತರಂಗ

## ಚಿಳಕಿಂಡಿ

'ಶಾಂತಿಸಭೆ'ಗೆಂದು ಸೇರಿ, ಸಭೆಗೆ ಮೊದಲು ನೀಡಿದ ಚಹ ತಣ್ಣಗೆದೆಯೆಂದು ಮುಖ ಉಬ್ಬಿಸಿ, ಕಣ್ಣು ಕೆಕ್ಕರಿಸಿ ದರೆ..........

-ಡೋಂಗರೆ ಮಹಾರಾಜ್

ಎಲ್ಲ ಸತ್ಯಗಳು ಗೋಚರವಾದಂತೆ ಕಂಡ ಕನಸು ವ್ಯಕ್ತಿಯನ್ನು ಭಯಂಕರ ಪತನಕ್ಕೀಡಾಗಿಸುತ್ತದೆ.

-ಅಜ್ಞಾತ

'ಅಂತರಂಗವನು ಅರಳಿಸು ಒಲವೆ ಅಂತರಂಗವನು ಚಂದಗೊಳಿಸು' ಎಂಬುದೇ ನಿಜವಾದ ಪ್ರಾರ್ಥನೆ. -ಸುಕೃತ

ಕುಲವೇ ಎಲ್ಲವೂ ಅಲ್ಲ, ಚೆಲುವೇ ಎಲ್ಲವೂ ಅಲ್ಲ, ಒಲವೇ ಎಲ್ಲವೂ ಅಲ್ಲ, ಒಲವೇ ಎಲ್ಲವೂ ಅಲ್ಲ.....ಈ ಎಲ್ಲವೂ ಒದಗಿ ಬಂದಾಗಿನ ನಮ್ಮ ನಿಲುವೇ 'ಎಲ್ಲ'

-ಅನುಭವ ವಾಣಿ

ತಿಂಗಳ ವ್ಯಕ್ತಿ

# ನಮ್ಮ ರಾಷ್ಟ್ರಪತಿ ಶಂಕರ್‌ದಯಾಳ್‌ಜೀ

**ಎಪ್ಪತ್ತೆಂಟು ವರ್ಷಗಳಿಂದಲೂ ಅವರದು ಒಂದೇ ರೀತಿಯ ಬದುಕು. ಅಧಿಕಾರ ಅವರನ್ನು ಉಬ್ಬಿಸಿಲ್ಲ.**

**ಭೋ**ಪಾಳದ ಗುಲ್ಯಾದಾಯಿ ಮೊಹಲ್ಲಾದ ಒಂದು ಸಾಮಾನ್ಯ ಬೀದಿ. ಇಕ್ಕಟ್ಟು ರಸ್ತೆಯಲ್ಲಿ ಹಾಗೇ ಮುಂದೆ ಸಾಗಿ ಬಲಕ್ಕೆ ಹೊರಳುವ ಆ ಗಲ್ಲಿಯ ಮೂಲೆಗೊಂದು ಹಳೆಯ ಕಾಲದ ಎರಡಂತಸ್ತಿನ ಮನೆ. ಭಾಗಶಃ ಆಧುನಿಕ ಕವಚ ತೊಟ್ಟರೂ ಸಿಮೆಂಟ್ ಗಾರೆಯ ತೇಪೆ ಕಾಣದ ಇಟ್ಟಿಗೆ ಗೋಡೆಗಳು ನಿಮಗೆ ಆ ಮನೆಯನ್ನು ಅಂಥ ವಿಶೇಷವೇನಲ್ಲವೆಂದುಕೊಳ್ಳುವಂತೆ ಮಾಡುತ್ತವೆ. ಎದುರಿಗೆ ಕಾರು ಗ್ಯಾರೇಜಿನಂತೆ ತೋರಿಬರುವ ಅಂಗಳ. ಅದನ್ನು ದಾಟಿ ಒಳಗೆ ಅಡಿಯಿಟ್ಟರೆ ಅಲ್ಲಿ ಜನಸಾಮಾನ್ಯರದೊಂದು ಸರತಿಯ ಸಾಲು. ಕಾದಗದ ಪುಡಿಕೆಗಳಲ್ಲಿ ಕಟ್ಟಿ ಕೊಟ್ಟ ಪುಡಿ-ಮಾತ್ರೆ-ಚೂರ್ಣಗಳನ್ನು ಹಿಡಿದು ತೃಪ್ತ ಮುಖದ ಕೆಲವರು ಹೊರಬರುತ್ತಾರೆ. ಒಳಗೆ ದೃಷ್ಟಿ ಹಾಯಿಸಿದರೆ ಒಂದು ಕಟ್ಟಿಗೆಯ 'ದಿವಾನ್' ಮೇಲೆ ಆಸೀನ ಅಜ್ಜಿ ಕಾಣುತ್ತಾಳೆ. ಅಂತಃಕರಣ-ಮಮತೆ-ಶಾಂತಿಗಳೇ ಮೂರ್ತಿವೆತ್ತಂಥ, ಶ್ವೇತವಸನಧಾರಿ, ತೊಂಬತ್ತರ ಮಾಗಿದ ವಯಸ್ಸಿನ ವೃದ್ಧೆ. ಮನೆಯವರಿಗೂ ಊರವರಿಗೂ ಆಕೆ 'ಚಾಚೀ'.

ಭಾರತದ ಒಂಬತ್ತನೆಯ ರಾಷ್ಟ್ರಪತಿ ಶಂಕರ ದಯಾಳ ಶರ್ಮಾ ಪಾಂಡಿತ್ಯ - ಸಜ್ಜನಿಕೆಗಳನ್ನು ಧಮನಿವಾಹಿಯನ್ನಾಗಿಸಿಕೊಂಡು ಹುಟ್ಟಿ ಬೆಳೆದದ್ದೇ ಈ ಮನೆಯಲ್ಲಿ. ಆ ಮಮತಾಮಯಿ 'ಚಾಚೀ' ನಮ್ಮ ರಾಷ್ಟ್ರಪತಿಗಳ ತಾಯಿ, ಸಂಪತ್ ಬಾಯಿ. ಪತಿಯ ಕಾರ್ಯವನ್ನು ಮುಂದುವರಿಸಿಕೊಂಡು ಜನಸೌಖ್ಯದಲ್ಲೇ ತನ್ನ ಸುಖ ಕಾಣುತ್ತಿರುವ 'ಚಾಚೀ' ನಮ್ಮ ರಾಷ್ಟ್ರಪತಿಯ ವ್ಯಕ್ತಿತ್ವವಿಕಸನಕ್ಕೆ ನೀಡಿದ ಕೊಡುಗೆ ಅನುಪಮವಾದ್ದು. 'ಚಾಚೀ'ಯ ಬಲಗಡೆ ಮೂಲೆಯಲ್ಲಿ ಮೇಲಂತಸ್ತಿಗೆ ನಿಮ್ಮನ್ನು ಕರೆದೊಯ್ಯುವ ಕಟ್ಟಿಗೆಯ ಮೆಟ್ಟಿಲುಗಳಿವೆ. ಹೆಜ್ಜೆಯಿಡುವಾಗ ಅವು ಕಿರುಗುಟ್ಟಿದರೆ ಅಚ್ಚರಿಪಡಬೇಡಿ. ನಮ್ಮ ರಾಷ್ಟ್ರಪತಿಗಳು ತಮ್ಮ ಎಳವೆಯಲ್ಲಿ ಸರಭರನೆ ಇವುಗಳನ್ನೇರಿ ಇಳಿಯುತ್ತಿದ್ದರೆಂದರೆ ಅವೆಷ್ಟು ಹಳೆಯವೆಂಬುದರ ಅಂದಾಜು ನಿಮಗಾದೀತು. ಅವುಗಳನ್ನೇರಿ ಮೇಲೆ ಹೋದರೆ ದೊಡ್ಡ ಹಾಲ್ ಮತ್ತು ಇತರ ಕೋಣೆಗಳು. ಈ ಐತಿಹಾಸಿಕ ನಿವಾಸದ ವಾಸಿಗಳ ಊಟ-ವಿಶ್ರಾಂತಿ ಮತ್ತಿತರ ಕೆಲಸಗಳು ನಡೆಯುವುದೇ ಈ ಭಾಗದಲ್ಲಿ.

ಆ ಮನೆಯ ಎದುರು ಸಾಲಿನಲ್ಲೂ ಇಂಥವೇ ದುಮ್ಮಜಲಿನ ಕೆಲವು ಸೌಧಗಳಿವೆ. ಆದರೆ ಈ ಮನೆಗಿರುವ ಜೀವಂತಿಕೆ ಅವಕ್ಕಿಲ್ಲವೆನಿಸುತ್ತದೆ.

'The Telegraph Magazine'ನಿಂದ)

ಹಾಂ, ನಮ್ಮ ರಾಷ್ಟ್ರಪತಿಗಳ ಈ ಮನೆಯೆದುರಿಗೊಂದು ಕೊಳವೆಬಾವಿಯ ಕೈಪಂಪ್ ಇದೆ. ಆ ಓಣಿಯ ಎಲ್ಲರೂ ಸಾಮಾನ್ಯವಾಗಿ ನೀರು ತುಂಬಿಕೊಳ್ಳುವುದೇ ಇಲ್ಲಿ. ಕೊಡ ತುಂಬಿಕೊಂಡು, ಅದನ್ನು ಬಗಲಲ್ಲಿಟ್ಟುಕೊಂಡೇ 'ಚಾಚೀ'ಯೊಂದಿಗೆ ನಿಂತಲ್ಲಿಂದಲೇ ನಾಲ್ಕು ಮಾತನ್ನಾಡಿ ಹೊರಡುವ ಹೆಂಗಸರು ಹೇಳುತ್ತಾರೆ - ''ನಮಗಿದು 'ರಾಷ್ಟ್ರಪತಿಗಳ ಮನೆ' ಎನಿಸುವುದೇ ಇಲ್ಲ. ಅಂಥ ಬಿಗುಮಾನ ಆ ಮನೆಯ ಯಾರಲ್ಲೂ ಇಲ್ಲ. ವಿಶೇಷ ರಕ್ಷಣಾ ವ್ಯವಸ್ಥೆ, ಪೊಲೀಸರ ಕಾಟ, ಸೇವಕ ವರ್ಗದ 'ಕಣ್ಣುಮುಚ್ಚಾಲೆಯಾಟ' ಮುಂತಾದವು ಇಲ್ಲವೇ ಇಲ್ಲ. ನಾವು ಎಂದಿನಂತೆ ಆ ಮನೆಯಲ್ಲಿ ಅಡ್ಡಾಡಿ ಚಿಕ್ಕ ಪುಟ್ಟ ದೈಹಿಕ ತೊಂದರೆ, ಕಾಯಿಲೆ-ಕಸಾಲೆಗಳಿಗೆ ಮದ್ದು ಪಡೆದು ಬರುತ್ತೇವೆ.''

ನಮ್ಮ ರಾಷ್ಟ್ರಪತಿ ಭೋಪಾಳದ ನಿವಾಸಿಗಳ ಪಾಲಿಗೆ 'ಡಾಕ್ಟರ್ ಸಾಬ್.' ಅವರೊಂದಿಗೆ ಸ್ಕೂಲು-ಕಾಲೇಜಿನಲ್ಲಿ ಓದಿದ, ಸಮಾಜ ಸೇವಾ ಕಾರ್ಯಗಳಲ್ಲಿ - ಆಂದೋಲನಗಳಲ್ಲಿ ಜತೆಗೂಡಿ ಕೆಲಸ ಮಾಡಿದ, ರಾಜಕೀಯ ವಲಯದಲ್ಲಿ ಅವರೊಂದಿಗೆ ದುಡಿದ ಅನೇಕರು ಇಂದಿಗೂ ಭೋಪಾಳದಲ್ಲಿದ್ದಾರೆ. ಅವರೆಲ್ಲ ತುಂಬು ಅಭಿಮಾನದಿಂದ ಹೇಳುತ್ತಾರೆ. ''ಶರ್ಮಾಜಿ ಕೇವಲ ತಮ್ಮ ನಿಷ್ಠಾವಂತ ಪರಿಶ್ರಮದಿಂದ ಮೇಲಕ್ಕೇರಿದವರು. ಅವರ ಈ ಯಶಸ್ಸಿಗೆ ಹಿನ್ನೆಲೆಯಾಗಿ ನಿಂತದ್ದು ಆ ಮನೆಯ ಹಿರಿಯರ ಸುಸಂಸ್ಕಾರ. ಶರ್ಮಾಜಿ ಬಹುಭಾಷಾ ವಿಶಾರದರಾಗಿ, ಐಕಮತ್ಯದ ಹರಿಕಾರರಾಗಿ, ಅಕಳಂಕ ರಾಜಕಾರಣಿಯಾಗಿ ನಿಲ್ಲುವುದಕ್ಕೆ ನೆರವಾದದ್ದು ಅವರ ಪ್ರಾಂಜಲ ಮತ್ತು ನಿಸ್ಪೃಹ ವ್ಯಕ್ತಿತ್ವ. ಇಂಥ ವ್ಯಕ್ತಿತ್ವವನ್ನವರು ಬೆಳೆಸಿಕೊಳ್ಳಲು ಕಾರಣ ಶರ್ಮಾಜಿಯ ತಂದೆ-ತಾಯಿ.''

ಡಾ.ಶಂಕರದಯಾಳ ಶರ್ಮಾರಿಗೆ ಐವರು ತಮ್ಮಂದಿರು ಹಾಗೂ ಒಬ್ಬ ತಂಗಿ ಇದ್ದಾರೆ.

● ವೃಷಭೇಂದ್ರಯ್ಯ

ಪಂ.ಖುಶೀಲಾಲ್‌ಶರ್ಮಾ ಶಾಸ್ತ್ರೀ ಇವರ ತಂದೆ. ಅವರೊಬ್ಬ ಶ್ರೇಷ್ಠ ಆಯುರ್ವೇದ ವೈದ್ಯ. ಮಗನ ಬದುಕನ್ನವರು ವಿಶಿಷ್ಟಮಯವನ್ನಾಗಿಸಿದರು. ಚಿಕ್ಕಂದಿನಿಂದಲೇ ಮಗನಿಗೆ ಸ್ವಾಸ್ಥ್ಯವಿಚಾರವನ್ನು ಬೋಧಿಸಿದ ಪಂ.ಖುಶೀಲಾಲ್ ನಿತ್ಯ ಬೆಳಿಗ್ಗೆ ಈಜಲು ಶರ್ಮಾಜಿಯನ್ನು ಕರೆದೊಯ್ಯುತ್ತಿದ್ದರು.

ಪಂ.ಖುಶೀಲಾಲ್ ಶರ್ಮಾ ಸಂಸ್ಕೃತ, ಉರ್ದು, ಪಾರ್ಸಿ ಭಾಷೆಗಳಲ್ಲಿ ಪರಿಣಿತರು. ಮಗನಿಗೆ ಈ ಮೂರು ಭಾಷೆಗಳಲ್ಲಿ ಮೊದಲ ಪಾಠ ದೊರೆತದ್ದೆ ತಂದೆಯಿಂದ. ಆದರೆ ತಂಗಿ ರುಕ್ಮಿಣಿದೇವಿ ಹುಟ್ಟಿದ ಹೊಸತಿನಲ್ಲೇ ಶರ್ಮಾಜೀಗೆ ಮಾತೃವಿಯೋಗ. ಪಂ.ಖುಶೀಲಾಲರು ಎರಡನೆ ಮದುವೆಯಾದರು. ಈ ತಬ್ಬಲಿ ಮಕ್ಕಳಿಗೆ ತಾಯಿಯಾಗಿ ಮಾತೃಪ್ರೇಮದ ಕೊರತೆಯಾಗದಂತೆ ನೋಡಿಕೊಂಡು ಬಂದರು 'ಚಾಚೀ' ಸಂಪತ್‌ಬಾಯಿ. ಶಂಕರ್‌ದಯಾಳರ ಮೇಲೆ ಆಕೆಗೆ ಎಲ್ಲಿಲ್ಲದ ಪ್ರೀತಿ. ತನಗೆ ನಾಲ್ಕು ಮಕ್ಕಳಾದರೂ ಶಂಕರ್‌ಜೀ ಮತ್ತು ರುಕ್ಮಿಣಿಯನ್ನಾಕೆ ಕಣ್ಣುಗಳಂತೆ ನೋಡಿಕೊಂಡು ಬಂದರು. ಬ್ರಿಟನ್ನಿನಲ್ಲಿ ಶರ್ಮಾಜಿ ಓದುತ್ತಿದ್ದಾಗ ಉಂಟಾದ ಹಣದ ಕೊರತೆಯನ್ನು ನೀಗಲು ತನ್ನ ಒಡವೆಗಳನ್ನು ಒತ್ತೆಯಿಡಲೂ ಹಿಂದೆ ಮುಂದೆ ನೋಡಲಿಲ್ಲವಂತೆ ಆ ಮಹಾತಾಯಿ.

ಡಾ.ಶಂಕರ್‌ದಯಾಳ್‌ಜೀ ತಮ್ಮ ಮೊದಲ ಪತ್ನಿ ತೀರಿದಾಗ ಮರುಮದುವೆಯಾಗುವಂತೆ ದುಂಬಾಲು ಬಿದ್ದರು ಚಾಚೀ. ಶಂಕರ್‌ಜೀಯ ಹಿರಿಯ ಮಗ ಸತೀಶ್. ಜಬಲ್‌ಪುರದಲ್ಲಾತ ಒಳ್ಳೆಯ ವ್ಯವಹಾರಸ್ಥ. ಎರಡನೆಯ ಮಗ ದಿಲ್ಲಿಯಲ್ಲಿ ಮೋದಿ ಕಂಪನಿಯಲ್ಲಿ ಉನ್ನತ ಅಧಿಕಾರಿ. ದೊಡ್ಡ ಮಗಳು ಜಯಶ್ರೀ ಚಂಡಿಗಢದಲ್ಲಿದ್ದಾಳೆ. ಕಡೆಯ ಮಗಳು ಗೀತಾಂಜಲಿ

ರಾಜಕೀಯದಲ್ಲಿ ಆಸಕ್ತಿಯಿದ್ದವಳು. ಪತಿ ಲಲಿತ್ ಮಾಕನ್‌ರೊಂದಿಗೆ ಆಕೆ 1985ರಲ್ಲಿ ಉಗ್ರವಾದಿಗಳ ಗುಂಡೇಟಿಗೆ ಬಲಿಯಾದಳು. ಗೀತಾಂಜಲಿಯ ಏಕಮಾತ್ರಪುತ್ರಿ, ಅವಂತಿಕಾ ಅಜ್ಜ ಅಜ್ಜಿಯೊಂದಿಗೆ ವಾಸಿಸುತ್ತಾಳೆ.

ತಂದೆಯಿಂದ ಬಳುವಳಿಯಾಗಿ ಬಂದ ಜನಪ್ರೇಮ, ಸಂಸ್ಕೃತಿ ಪ್ರೇಮ, ಮತ್ತು ಭಾರತೀಯ ವೈದ್ಯಪದ್ಧತಿಯ ಬಗೆಗಿನ ಒಲವುಗಳನ್ನು ಡಾ.ಶರ್ಮಾ ಬೆಳೆಸಿಕೊಂಡೇ ಬಂದಿದ್ದಾರೆ. ಇಂದಿಗೂ ಅವರು ತಮ್ಮ ಮಂಡಿನೋವಿಗೆ ಔಷಧಿಯನ್ನು ಭೋಪಾಲದಲ್ಲಿರುವ ಚಾಚೀಯಿಂದಲೇ ತರಿಸಿಕೊಳ್ಳುತ್ತಾರೆ.

ಸ್ಥಳೀಯ ಹೈಸ್ಕೂಲಲ್ಲಿ ಪ್ರತಿಭಾವಂತ ವಿದ್ಯಾರ್ಥಿಯಾಗಿದ್ದ ಡಾ.ಶಂಕರ್‌ದಯಾಳ್‌ಜೀ ಮುಂದಿನ ಓದಿಗೆಂದು ಆಗ್ರಾಕ್ಕೆ ಹೋಗಲೇಬೇಕೆಂದು ಖುಶೀಲಾಲ್ ಬಯಸಿದರು. ಅಲ್ಲಿ ಟ್ಯೂಶನ್ ಹೇಳಿ ಕಾಲೇಜಿನ ವೆಚ್ಚಕ್ಕೆ ಹಣಹೊಂದಿಸಿಕೊಂಡರು ಶರ್ಮಾ. ಸದಾ ಓದಿನಲ್ಲೇ ಮುಳುಗಿರುತ್ತಿದ್ದ ಶಂಕರ್‌ಜೀ ಆ ಕಾಲೇಜಿನ ಅತ್ಯುತ್ತಮ ವಿದ್ಯಾರ್ಥಿ. ''ಯಾವುದರಲ್ಲೂ ಮೊದಲಿಗನಾಗೇ ಉಳಿಯಬೇಕು'' ಎಂಬುದೇ ಅವರ ಗುರಿ ಮತ್ತು ಪ್ರಯತ್ನವಾಗಿರುತ್ತಿತೆಂದು ಶರ್ಮಾಜೀಯ ಸಹಪಾಠಿಗಳನೇಕರು ಇಂದಿಗೂ ಹೇಳುತ್ತಾರೆ. ಜಿಲೇಬಿ, ಕಚೋರಿಗಳೆಂದರೆ ಶರ್ಮಾಜೀಗೆ ತುಂಬ ಇಷ್ಟ. ಅದು ಸಿಗುವುದಾದರೆ ಏನು ಮಾಡಲೂ ಅವರು ಸಿದ್ಧ. ಒಮ್ಮೆ ಜಿಲೇಬಿಗಾಗಿ ಆಗ್ರಾದಿಂದ ಫತೇಪುರ್ (ಸುಮಾರು 20 ಕಿಲೋಮೀಟರ್‌ದೂರ) ವರೆಗೆ ನಡೆಯುವ ಶರ್ತಿಗೆ ಒಪ್ಪಿ ತಮ್ಮ ಅಚ್ಚುಮೆಚ್ಚಿನ ತಿಂಡಿ ಪಡೆಯಲು ಸಫಲರಾದರಂತೆ.

ಅಲಹಾಬಾದ್ ವಿಶ್ವವಿದ್ಯಾಲಯದಲ್ಲಿ ಓದು ಮುಂದುವರಿಸಿದ ಸಂದರ್ಭದಲ್ಲೇ ಅವರಿಗೆ ಪಂ.ಜವಾಹರಲಾಲ್ ನೆಹರೂರ ಸಂಪರ್ಕ ಒದಗಿ ಬಂತು. ಅಲ್ಲಿಂದ ಲಕ್ನೋ ವಿಶ್ವವಿದ್ಯಾಲಯ. ಡಾ.ಶರ್ಮಾ ಮೂರು ವಿಷಯಗಳಲ್ಲಿ ಎಂ.ಎ. ಮತ್ತು ಕಾನೂನು ಪದವಿಯನ್ನು ಪಡೆದರು.

ಭಾರತ ಸ್ವಾತಂತ್ರ್ಯಕ್ಕೆ ಒಂದು ವರ್ಷ ಮೊದಲಷ್ಟೇ ಅವರು ಸ್ವದೇಶಕ್ಕೆ ಹಿಂದಿರುಗಿದರು. ಅಬ್ಬಾ, ಆಗ ಭೋಪಾಲದಲ್ಲಿ ಅವರಿಗೆಂಥ ಸ್ವಾಗತ! ಆ ಕಾಲದಲ್ಲಿ ಭೋಪಾಲ ಮತ್ತು ಸುತ್ತಮುತ್ತ ಅವರಷ್ಟು ಉನ್ನತ ಶಿಕ್ಷಣ ಪಡೆದು (ವಿದೇಶದಲ್ಲಿ) ಬಂದವರು ಅವರೊಬ್ಬರೆ. ಭೋಪಾಲದ ನವಾಬ ತನ್ನ ಮಂತ್ರಿಮಂಡಳ





ದಲ್ಲಿ ಇವರಿಗೊಂದು ಸ್ಥಾನ ನೀಡಲು ಮುಂದೆ ಬಂದ. ಆದರೆ ಶಿಕ್ಷಕವೃತ್ತಿಯ ಬಗೆಗಿನ ಗೌರವ ದಿಂದಾಗಿ ಅವರು ಮಂತ್ರಿತ್ವಕ್ಕೆ ಮನಸ್ಸು ಮಾಡದೆ ಅಲಹಾಬಾದಿಗೆ ನಡೆದರು. ಸಂಸ್ಥಾನ ಗಳ ವಿಲೀನೀಕರಣ ಜೋರಾಗಿದ್ದ ಸಂದರ್ಭ ಅದು. ಭೋಪಾಲದ ನವಾಬ ವಿಲೀನೀಕರಣ ಕ್ಕೊಪ್ಪಲಿಲ್ಲ.

ಲಾರ್ಡ್ ಮೌಂಟ್‌ಬ್ಯಾಟನ್ . ತಮ್ಮ 'ದ್ವಿತೀಯ ಭಾರತೀಯ ಮಿತ್ರ' (ಮೊದಲನೆಯ ವರು ಪಂ. ಜವಾಹರಲಾಲ್ ನೆಹರೂ)ನಾದ ಈ ನವಾಬನ ಮನವೊಲಿಸುವಲ್ಲಿ ವಿಫಲರಾದರು. ಪಂ. ನೆಹರೂ, ಭೋಪಾಲದಲ್ಲಿ ಆಗ ಕಾಂಗ್ರೆಸ್ ಅಸ್ತಿತ್ವದಲ್ಲಿರದ್ದರಿಂದ, ವಿರೋಧಪಕ್ಷಗಳ ನೆರವು ಕೋರಿದರು. ಅವರೆಲ್ಲ ಪ್ರಜಾಮಂಡಲ ಪಕ್ಷದವರು.

ಹಿಂದೂಗಳೇ ಬಹುಸಂಖ್ಯಾತರಾದ ನವಾ ಬನ ಆಡಳಿತೆಯ ಈ ಸಂಸ್ಥಾನದಲ್ಲಿ ಕೋಮು ವಾದದ ವಿಷಬೀಜ ಬಿತ್ತಲ್ಪಟ್ಟಿತು. ಅದರ ವಿರು ದ್ಧವೂ ಆಂದೋಲನ. ಶಂಕರ್‌ದಯಾಳರ ಮಿತ್ರ, ರತನ್‌ಕುಮಾರ್ ಎಂಬುವರು 'ನಯಿ ರಾಹ್' ಎಂಬ ಪತ್ರಿಕೆಯನ್ನು ಪ್ರಾರಂಭಿಸಿದರು (1948). ವಿಲೀನೀಕರಣ ಆಂದೋಲನಕ್ಕೆ ಜೋರು ಬರತೊಡಗಿದಾಗ ರತನ್‌ಕುಮಾರ್‌ರು ಶರ್ಮಾಜಿಗೆ ಕಾಗದ ಬರೆದು, ಭೋಪಾಲಿಗೆ ಬರಲು ಕೋರಿದರು. 1949ರ ಜನವರಿ 5ರಂದು ಶರ್ಮಾಜಿ ಬಂದರು, ಆಂದೋಲನದ ನೇತೃತ್ವ



ಪ್ರಧಾನಿ ಹೇಳೋಕೆ ಮುನ್ನವೇ ಈಯುಪ್ಪ ಶುರು ಮಾಡಿದಯಿದೆ, ಐದು ಪೈಸೇನೂ ಬಿಚ್ತಿಲ್ಲ!

ವಹಿಸಿದರು. ರತನ್ ಸೆರೆಯಲ್ಲಿದ್ದಾಗ 'ನಯಿ ರಾಹ್'ದ ಸಂಪಾದಕತ್ವವನ್ನೂ ನಿರ್ವಹಿಸಿದರು. ಭೋಪಾಲ ಭಾರತ ಒಕ್ಕೂಟದಲ್ಲಿ ಒಂದಾಗುವಲ್ಲಿ ಯಶಸ್ವಿಯಾದರು.

ಆಗ ಶುರುವಾಯಿತು ಶರ್ಮಾಜೀಯ ರಾಜಕೀಯ ಜೀವನ. ಚುನಾವಣೆಗಳು ನಡೆದವು. ಕಾಂಗ್ರೆಸ್ ಪಕ್ಷದಿಂದ ಶರ್ಮಾಜೀ ಸ್ಪರ್ಧಿಸಿ ಗೆದ್ದರು. ಅವರಿಗೇ ಮುಖ್ಯಮಂತ್ರಿಪಟ್ಟ! ಆಗವರ ವಯಸ್ಸಾದರೂ ಎಷ್ಟಂತೀರಿ? ಕೇವಲ 34 ವರ್ಷ.

ಮಗ ಮುಖ್ಯಮಂತ್ರಿಯಾಗಿ ವಿಶೇಷ ನಿವಾಸದಲ್ಲಿ ವಾಸಿಸತೊಡಗಿದರೂ ಪಂ.ಖುಶೀಲಾಲ್ ತಮ್ಮ ಚೀಟಿಕಟ್ಟುವ ಕಾರ್ಯ ಬಿಡಲಿಲ್ಲ. ಅದೇ ಹಳೇ ಮನೆಯಲ್ಲಿದ್ದರೇ ವಿನಾ ಮಗನೊಂದಿಗೆ ಮುಖ್ಯಮಂತ್ರಿ ನಿವಾಸದಲ್ಲಿರಲು ಬಯಸಲಿಲ್ಲ. "ಇದೆಲ್ಲ ಕ್ಷಣಿಕ. ಅಧಿಕಾರ ಇದ್ದಷ್ಟು ದಿನ ನಿಸ್ವಾರ್ಥದಿಂದ ನಿರ್ವಹಿಸು. ಎಲ್ಲೂ ಯಾವ ಕಲ್ಲಿನ ಮೇಲೂ ನಿನ್ನ ಹೆಸರು ಕೆತ್ತಲ್ಪಡದಂತೆ ನೋಡಿಕೊ" ಮಗನಿಗೆ ಅವರು ಹೇಳಿದ ಕಿವಿಮಾತಿದು.

ಶಂಕರ್‌ಜೀ ಹುದ್ದೆಯಿಂದ ಹುದ್ದೆಗೇರುತ್ತಲೇ ಸಾಗಿದರು. ಹನ್ನೊಂದು ವರ್ಷ ಮಧ್ಯಪ್ರದೇಶದ ಮುಖ್ಯಮಂತ್ರಿತ್ವದ ನಂತರ ಕೇಂದ್ರ ಸಚಿವ ಸ್ಥಾನ (1974-77), ಆ ಮೇಲೆ ಆಂಧ್ರ, ಪಂಜಾಬ್, ಮಹಾರಾಷ್ಟ್ರಗಳ ರಾಜ್ಯಪಾಲರಾಗಿ ಅವರ ಸೇವೆ ಸದಾಸ್ಮರಣೀಯ. ಆನಂತರ ಭಾರತದ ಉಪರಾಷ್ಟ್ರಪತಿ.

"ಅವರು ಯಥಾಸ್ಥಿತಿವಾದಿ" ಎನ್ನುತ್ತಾರೆ ಶರ್ಮಾಜೀಯ ಟೀಕಾಕಾರರು. "ವಿವಾದಗಳ ಸಂದರ್ಭದಲ್ಲಿ ಅವರು ತಟಸ್ಥಧೋರಣೆ ತಾಳುವವರು" ಎನ್ನುತ್ತಾರೆ ರಾಜಕೀಯ ವಿಮರ್ಶಕರು.

ಶರ್ಮಾಜೀಗೆ ಅವಿಭಕ್ತ ಕುಟುಂಬ ಪದ್ಧತಿಯಲ್ಲಿ ಅಚಲ ವಿಶ್ವಾಸ. ಭೋಪಾಲದ ಅವರ ಮನೆಯನ್ನು ನೋಡಿ. ಅವರ ನಾಲ್ವರು ಸೋದರರು ತಮ್ಮ ಮಕ್ಕಳು ಮೊಮ್ಮಕ್ಕಳೊಂದಿಗೆ ಅಲ್ಲಿ ಒಂದಾಗಿ ವಾಸಿಸುತ್ತಿದ್ದಾರೆ. "ಯಾವುದೇ ಕೌಟುಂಬಿಕ ನಿರ್ಧಾರಕ್ಕೂ ನಾವು ಹಿರಿಯರಾದ 'ಚಾಚೀ' ಮತ್ತು ಬಡೇ ಭಯ್ಯಾಜೀಯ ಅನುಮತಿ ಪಡೆಯುತ್ತೇವೆ" ಎನ್ನುತ್ತಾರೆ ಡಾ.ಶಂಭು ದಯಾಳ್‌ಶರ್ಮಾ.

ಡಾ.ಶಂಕರ್‌ದಯಾಳ್‌ಜೀಯ ದಿನಚರಿ ಪ್ರಾರಂಭವಾಗುವುದು ಬೆಳಗಿನ 4-30ರಿಂದ. ಒಂದು ಗಂಟೆ ವಾಯುವಿಹಾರ. ನಂತರ ಒಂದು ಗಂಟೆ ಪತ್ರಿಕಾ ವಾಚನ. ಆ ಮೇಲೆ ಸ್ನಾನ ಧ್ಯಾನ-ಲಘು ಆಹಾರ ಸೇವನೆ.

ಶರ್ಮಾಜೀ ತಮ್ಮ ಭಾಷಣಗಳಿಗೆ ಕಾರ್ಯದರ್ಶಿಯನ್ನವಲಂಬಿಸುವುದಿಲ್ಲ. ಬಹುಭಾಷಾವಿದ, ಅಪಾರ ಜ್ಞಾನವಂತ, ಅಚ್ಚರಿತರಿಸುವ ಜ್ಞಾಪಕಶಕ್ತಿಯ ಅವರಿಗೆ ಭಾಷಣ ಬರೆದುಕೊಳ್ಳುವುದೂ ಅನಗತ್ಯ. ಅನೇಕ ಗ್ರಂಥಗಳನ್ನು ಬರೆದಿರುವ ಡಾ.ಶರ್ಮಾ ತಿರುವಳ್ಳುವರ್‌ರ ಕೃತಿಗಳನ್ನು ಹಿಂದಿಗೆ ಅನುವಾದಿಸಿದ್ದಾರೆ. ಉರ್ದುದಲ್ಲಿ ನಿರರ್ಗಳವಾಗಿ ಬರೆಯೋದಬಲ್ಲ ಶರ್ಮಾಜೀಗೆ ಅನೇಕ ಉರ್ದು ಕವಿಗಳು ತಮ್ಮ ಪುಸ್ತಕಗಳನ್ನು ಸಮರ್ಪಿಸಿದ್ದಾರೆ. ●

# ಗಣೇಶ ಪೂಜೆಯ ಆದ್ಯಂತ....

● *ಗುರುರಾಜ ಜೋಶಿ*



ಗಣೇಶ ಎನ್ನಿ, ಗಣಪತಿ ಎನ್ನಿ.. ಶಿಲ್ಪಕಲಾವಿದರಿಂದ ಮೊದಲ್ಗೊಂಡು ವ್ಯಂಗ್ಯಚಿತ್ರಕಾರರವರೆಗೆ ಎಲ್ಲ ಕಲಾವಿದರಿಗೆ ಆತ ಸ್ಫೂರ್ತಿರಸಗಂಗೆ!

ಭಾರತಾದ್ಯಂತ ಪೂಜೆಗೊಳ್ಳುವನಾದರೂ, ಉತ್ತರದಲ್ಲಿ ಗಣಪತಿಯ ಪ್ರತ್ಯೇಕ ದೇವಾಲಯಗಳು ಕಡಿಮೆ. ಆದರೆ ದಕ್ಷಿಣ, ಪಶ್ಚಿಮಗಳಲ್ಲಿ ವಿನಾಯಕ ವ್ಯಾಪಕವಾಗಿ ವಿಸ್ತರಿಸಿದ್ದಾನೆ.

ಗಣೇಶ ಪುರಾಣದಲ್ಲಿ ವರ್ಣಿತವಾದ ಅಷ್ಟ ವಿನಾಯಕ ಸ್ಥಾನಗಳು ಪುಣೆಯ ಬಳಿ ಇವೆ. ಕರ್ನಾಟದಲ್ಲೂ ಇಡಗುಂಜಿ, ಕುಂಭಾಸಿ ಮೊದಲಾದೆಡೆಗಳಲ್ಲಿ ಪುರಾಣಪ್ರಸಿದ್ಧ ಗಣಪತಿ ದೇವಸ್ಥಾನಗಳಿವೆ. ಗಣಪತಿಯಿಂದಾಗಿಯೇ ಗೋಕರ್ಣದಲ್ಲಿ ಆತ್ಮಲಿಂಗ ಪ್ರತಿಷ್ಠಾಪನೆಯಾಯಿತು ಎಂಬುದು ಪ್ರತೀತಿ. ಭಾರತ-ನೇಪಾಳಗಳೆಚೆಯೂ ಗಣೇಶ ವಿಭಿನ್ನ ವೇಷ-ಭೂಷಣಗಳೊಂದಿಗೆ ವಿಭಿನ್ನ ರೂಪದಲ್ಲಿ ಕಂಡುಬಂದಿದ್ದಾನೆ. ಜಾವಾ, ಸುಮಾತ್ರಾ, ಬೋರ್ನಿಯೊ, ಶ್ರೀಲಂಕಾ, ಇರಾಣ ಮತ್ತು ಇಂಡೋನೇಶ್ಯಾ ಮುಂತಾದೆಡೆಗಳಲ್ಲಿ ಗಣಪತಿ ವಿಗ್ರಹಗಳು ಕಂಡುಬಂದಿವೆ. (ಕರ್ನಾಟಕದವರೇ ಆದ ಅಂಕೋಲೆಕರರು 'ವಿಶ್ವವ್ಯಾಪಿ ಗಣಪತಿ' ಪ್ರದರ್ಶನಗಳನ್ನು ಭಾರತಾದ್ಯಂತ ನಡೆಸುತ್ತಿರುವುದು ಎಲ್ಲರಿಗೂ ಗೊತ್ತು.)

> 'ನಾರದ ಪುರಾಣ'ದಲ್ಲಿ ಬರುವ ಗಣಪತಿಯ ಹನ್ನೆರಡು ಹೆಸರುಗಳನ್ನು ನೋಡಿ. ವಕ್ರತುಂಡ, ಏಕದಂತ, ಕೃಷ್ಣಪಿಂಗಾಕ್ಷ, ಗಜವಕ್ತ್ರ, ಲಂಬೋದರ, ವಿಕಟ, ವಿಘ್ನರಾಜೇಂದ್ರ, ಧೂಮ್ರವರ್ಣ, ಭಾಲಚಂದ್ರ, ವಿನಾಯಕ, ಗಣಪತಿ ಮತ್ತು ಗಜಾನನ. ಇಲ್ಲೆಲ್ಲೂ 'ಗಣೇಶ' ಎಂದಾತ ಕರೆಯಲ್ಪಟ್ಟಿಲ್ಲ. ಆತ 'ಗಣೇಶ' ಆದದ್ದು ಯಾವಾಗ?

**ಎಷ್ಟು ಪ್ರಾಚೀನ?**

'ಗಣಪತಿ' ಶಬ್ದಪ್ರಯೋಗ ಅತಿ ಪ್ರಾಚೀನದಲ್ಲಿ ಋಗ್ವೇದದ ಒಂದು ಮಂತ್ರದಲ್ಲಿ ಕಂಡುಬಂದಿದೆ.

**ಗಣಾನಾಂ ತ್ವಾ ಗಣಪತಿ ಹವಾಮಹೇ**
**ಕವೀಂ ಕವೀನಾಮುಪಶ್ರವಸ್ತಮ್ ।**

('ನವನೀತ' ಮತ್ತು 'ಅಮೃತ' ಪತ್ರಿಕೆಗಳ ಆಧಾರದಿಂದ)

ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ
ಆ ನಃ ಶೃಣ್ವನ್ನೂತಿಭಿಃ ಸೀದ ಸಾದನಮ್ ॥
(ಋಗ್. 2-23-1)

ಇದು ಗಣಪತಿ ಮತ್ತು ಬ್ರಹ್ಮಣಸ್ಪತಿ ಇಬ್ಬರ ಮಂತ್ರವೂ ಹೌದು. ಮಂತ್ರದ ಎರಡನೇ ಪಂಕ್ತಿಯಲ್ಲಿಯೇ ಬ್ರಹ್ಮಣಸ್ಪತಿಯ ಸ್ಪಷ್ಟ ವರ್ಣನೆಯಿದೆ. ಬ್ರಹ್ಮಣಸ್ಪತಿ ಎಂದರೆ ಬ್ರಹ್ಮ-ಮಂತ್ರದೊಡೆಯ. ಬೃಹಸ್ಪತಿಗೂ ಇದೇ ಉಪಾಧಿ ಇದೆ. ವೇದಪ್ರಾಜ್ಞರಾದ ಸಾಯಣನ ಪ್ರಕಾರ ಗಣಾಧಿಪತಿಯಾದ ಗಣಪತಿಯೇ ಬ್ರಹ್ಮಣಸ್ಪತಿ. ಏಕೆಂದರೆ ಬ್ರಹ್ಮನೂ ಗಣಪತಿ ಶಬ್ದ ಬ್ರಹ್ಮಣಸ್ಪತಿ ಅಥವಾ ಬೃಹಸ್ಪತಿವಾಚಕವಾಗಿವೆ ಎನ್ನುತ್ತದೆ. ವೈದಿಕ ಸಾಹಿತ್ಯದಲ್ಲಿ ಗಣಪತಿ ಎಂಬ ಹೆಸರು ಕಾಣುತ್ತದೆಯೇ ಹೊರತು ಆತನ ಇತರ ಹೆಸರುಗಳ ಪ್ರಸ್ತಾಪವೇ ಇಲ್ಲ. ಶುಕ್ಲ ಯಜುರ್ವೇದದಲ್ಲಿಯೂ ಹಲವೆಡೆಗಳಲ್ಲಿ 'ಗಣಪತಿ' ಶಬ್ದಪ್ರಯೋಗವಿದೆ. ಆದರೆ 'ಗಣೇಶ' ಎಂಬ ಅರ್ಥದಲ್ಲಿ ಅಲ್ಲ. ಹಾಗಾದರೆ 'ಗಣಪತಿ' ಮತ್ತು 'ಗಣೇಶ'ಗಳಲ್ಲಿರುವ ಅಂತರ ವೇನು?

ಗಣಗಳೊಡೆಯನಾದ ಗಣಪತಿಯ ಈ 'ಗಣೇಶ' ರೂಪದ ಮೂರ್ತಿ ಪೂಜೆ ಪ್ರಾರಂಭವಾದದ್ದು ಸುಮಾರು ಕ್ರಿಸ್ತಶಕ ನಾಲ್ಕನೆಯ ಶತಮಾನದ ಹೊತ್ತಿಗೆ ಎಂದು ವಿದ್ವಾಂಸರನೇಕರ ಅಭಿಪ್ರಾಯ.

''ಅನಾರ್ಯರ ದೇವತೆಯಾದ ಗಣಪತಿ ನಂತರ ಆರ್ಯ ದೇವತೆಗಳಲ್ಲಿ ಒಂದೆಂದು ಪರಿಗಣಿಸಲ್ಪಟ್ಟ'' ಎಂದು ಖ್ಯಾತವಿದ್ವಾಂಸ ಡಾ. ಸಂಪೂರ್ಣಾನಂದರು ತಮ್ಮ 'ಹಿಂದೂ ದೇವ ಪರಿವಾರ ಕಾ ವಿಕಾಸ'ದಲ್ಲಿ ವಿವರಿಸಿದ್ದಾರೆ. ಆದರೆ ಡಾ. ಆನಂದಕುಮಾರ ಸ್ವಾಮಿಯವರು ''ಗಣೇಶ ಆರಂಭದಲ್ಲಿ ಒಬ್ಬ ಯಕ್ಷದೇವತೆಯಾಗಿರಬಹುದು'' ಎನ್ನುತ್ತಾರೆ. ತಮ್ಮ ಅಭಿಪ್ರಾಯಕ್ಕೆ ಪೂರಕವಾಗಿ ಅವರು ಅಮರಾವತಿ ಸ್ತೂಪದ ಚಿತ್ರವೊಂದನ್ನು ಸಾಕ್ಷಿಯಾಗಿ ಉಲ್ಲೇಖಿಸುತ್ತಾರೆ. ''ಅಲ್ಲಿಯ ಭಗ್ನಗೊಂಡ ಶಿಲ್ಪದಲ್ಲಿ ಡೊಳ್ಳು ಹೊಟ್ಟೆಯ, ಮಾಲೆಧರಿಸಿದ ಅನೇಕ ಗಣಗಳ ಮಧ್ಯದಲ್ಲಿ ಆನೆಯ ಮುಖದ (ಗಜ+ಆನನ) ಒಂದು ಚಿತ್ರವೂ ಇದೆ. ಆದ್ದರಿಂದ ಈ ಮೂರ್ತಿಗಳು ದೇವತೆಗಳವಲ್ಲ, ಯಕ್ಷರವು'' ಎಂದವರು ಪ್ರತಿಪಾದಿಸುತ್ತಾರೆ. ''ಮೂಲದಲ್ಲಿ ಗಣೇಶ ಒಬ್ಬ ಗಣದೇವತೆಯಾಗಿದ್ದ. ನಂತರ ಹಲವು ತತ್ವಗಳನುಸಾರ ಆತನ 'ವ್ಯಕ್ತಿತ್ವ' ರೂಪಿಸಲ್ಪಟ್ಟು ಈ ದೇವ-ಗಣದೊಡೆಯನಾಗಿ ವಿಜೃಂಭಿಸತೊಡಗಿದೆ'' ಎಂದು (ಘುರ್ಯೇ ಮುಂತಾದ) ಕೆಲವು ವಿದ್ವಾಂಸರ ಅಭಿಪ್ರಾಯ.

ಶ್ರೀಲಂಕೆಯಲ್ಲಿ ದೊರೆತ ಒಂದನೆಯ ಶತಮಾನದ ಅಲಂಕಾರಿಕ, ವಿಗ್ರಹವೊಂದರಲ್ಲಿ ಎರಡು ಸಾಲಾಗಿ ಕುಬ್ಜರೂಪಿಗಳ ಸಾಲು ನಡುವೆ ನಿಂತಿರುವ, ಎಡಕ್ಕೆ ಹೊರಳಿದ ಸೊಂಡಿಲಿನ ಆನೆಯ ಮುಖದ ವ್ಯಕ್ತಿಯತ್ತ [illegible]ರುವಂತೆ ಚಿತ್ರಿಸಲಾಗಿದೆ. ಈ ಕೇಂದ್ರ ವ್ಯಕ್ತಿ ನಿಸ್ಸಂದೇಹವಾಗಿ ಗಜಾನನನೇ. ಸಿಂಧೂ ಕೊಳ್ಳದಲ್ಲಿ ದೊರೆತ ಮೊಹರುಗಳಲ್ಲಿ ಗಣೇಶನ ಮೂಲ ಸ್ವರೂಪದ ಚಿತ್ರಗಳಿವೆ. ಪ್ರಾಯಶಃ ಗಣೇಶನ ಸ್ವರೂಪ ಚಿತ್ರಗಳಲ್ಲಿ ಮೊದಲು ಅಭಿವ್ಯಕ್ತಗೊಂಡಿರುವುದು ಈ ಮೊಹರುಗಳಲ್ಲಿಯೇ. ಇಲ್ಲಿಯೂ ನಮಗೆ ಅವನ ಗಜಮುಖವೇ ಆಧಾರ. ಜೊತೆಗೆ ವೃಷಭನ ಕೋಡು, ಮೇಷದ ಮುಂಭಾಗ ಹಾಗೂ ಹುಲಿಯ ಹಿಂಭಾಗಗಳೂ ಈ ಗಜಮುಖದೊಂದಿಗೆ ಸೇರಿವೆ.

ಪ್ರಾಚೀನ ಇರಾನದಲ್ಲಿ ದೊರೆತ ವಿಗ್ರಹವೊಂದು (ಇದು ಕ್ರಿಸ್ತಪೂರ್ವ 13ರಿಂದ 8ನೆಯ ಶತಮಾನದ ಅವಧಿಯದಾಗಿರಬಹುದೆಂದು ಹೆಂಡ್ರಿಕ್ ಬೋಸ್ ಹೇಳುತ್ತಾರೆ.) ಗಜಮುಖ ಹೊಂದಿದ್ದು, ಒಂದು ಕೈಯಲ್ಲಿ ಸರ್ಪ ಮತ್ತೊಂದು ಕೈಯಲ್ಲಿ ಗರಿಯೊಂದನ್ನು ಹಿಡಿದಂತಿದೆ. ಶಿಲ್ಪದ ಹಿಂಭಾಗದಲ್ಲಿ ಪ್ರಾಚೀನ ಲಿಪಿ ಇರುವಂತೆ ಇದೆ. ವೈದಿಕ ಸಂಸ್ಕೃತಿಯ ಜನರಿಗೆ ಸಿಂಧೂ ಕೊಳ್ಳದ ಸಂಸ್ಕೃತಿಯೊಂದಿಗೆ ಸಂಪರ್ಕವಿತ್ತೆಂಬುದೂ ಹಲವಾರು ಹಿಂದು ದೇವ-ದೇವತೆಗಳು ಪಶ್ಚಿಮ ಏಶ್ಯನ್‌ರಿಗೆ ಸುಪರಿ



ಚಿತರಾಗಿದ್ದರು, ಆ ಪೈಕಿ ಈ ಗಜಮುಖ ಒಬ್ಬನೆಂದೂ ಸ್ಪಷ್ಟವಾಗುತ್ತದೆ.

**ಗಣಪತಿ 'ಗಣೇಶ'ನಾದದ್ದು ಯಾವಾಗ?**

ವೇದಕಾಲದಿಂದಲೂ ಪ್ರಚಲಿತದಲ್ಲಿರುವ ಗಣಪತಿಯ ಕುರಿತು ವೇದಪೂರ್ವ ಸಾಹಿತ್ಯದಲ್ಲಿ ಏಕೆ ಪ್ರಸ್ತಾಪವಿಲ್ಲ ಎಂಬ ಸಂದೇಹ ಬರುತ್ತದೆ. ಹೀಗಾಗಿಯೇ ಈತ ಮುಂಚೆ ಅನಾರ್ಯ ದೇವತೆಯಾಗಿದ್ದು ನಂತರ ಆರ್ಯರಿಗೆ ಗ್ರಾಹ್ಯವಾಗಿರಬಹುದೆಂಬ ವಾದವೂ ಇದೆ. ಈತ ಅನಾರ್ಯ ದೇವತೆಯೇ ಆಗಿದ್ದರೆ ಅನುಯಾಯಿಗಳಾರು ಎಂಬ ಪ್ರಶ್ನೆಯೂ ಉದ್ಭವಿಸುತ್ತದೆ.

ಮಹಾಭಾರತದಲ್ಲಿ ಸಾಕಷ್ಟು ಪ್ರಸ್ತಾಪವಾಗಿರುವ ನಾಗಕುಲಕ್ಕೆ ಆನೆಯೇ ಅಧಿದೇವತೆ. ಅವರ ಜೀವನವಿಧಾನ, ರಾಜರು ಹಾಗೂ ನಗರಗಳ ಬಗ್ಗೆ ಮಹಾಭಾರತ ವಿಶದವಾಗಿ ವಿವರಿಸಿದೆ. 'ಶತಪಥ ಬ್ರಾಹ್ಮಣ'ದಲ್ಲಿ ಆನೆಯನ್ನು 'ನಾಗ' ಎಂದು ಕರೆಯಲಾಗಿದೆ.

ಸರ್ಪದ ಐದು ಹೆಡೆಗಳ ಛತ್ರದಿಂದ ಭೂಷಿತನಾದ ಗಣಪತಿ (ಈಗಲೂ ಇಂಥ ವಿಗ್ರಹಗಳೇ ಪ್ರಚಲಿತ) ಯನ್ನು ನಾಗಕುಲದವರು ಆರಾಧಿಸುತ್ತಿದ್ದರು. ನೇಪಾಳದಲ್ಲಿ ದೊರೆತ ವಿಗ್ರಹಗಳಲ್ಲಿ ಎರಡು ಕರಗಗಳಲ್ಲಿ ಸರ್ಪಗಳನ್ನು ಹಿಡಿದುಕೊಂಡ ಗಣೇಶನನ್ನು ಕಾಣಬಹುದು. ಇರಾಣದ ವಿಗ್ರಹವೂ ಇದೇ ಸ್ವರೂಪದ್ದಾಗಿದೆ.

ನಾಗರಕಲ್ಲುಗಳ ನಡುವೆ ಗಣಪತಿ ವಿಗ್ರಹಗಳು ಗಿಡದ ಬುಡದಲ್ಲೊ ಅಥವಾ ಕಟ್ಟೆಗಳ

ಮೇಲೂ ಇರುವುದನ್ನು ನೋಡಬಹುದಾಗಿದೆ.

ಮೊಸಳೆಯೊಂದಿಗೆ ಗಣಪನನ್ನು ನಾವು ಎಲ್ಲೋರ ಹಾಗೂ ಬರ್ಮಾಗಳಲ್ಲಿ ಕಾಣಬಹು ದಾಗಿದೆ. ಮಕರ ಕುಲವು ನಾಗಕುಲದ ಸಂಬಂಧ ಎನಿಸಿರುವುದು ಗಮನಾರ್ಹ. 'ಗಜಕುಲ'ವೆಂಬ ವಂಶವೂ ಪ್ರಾಚೀನ ಭಾರತದಲ್ಲಿತ್ತು. ಅವರಿಗೆ ಗಣಪತಿಯೆ ಅಧಿದೇವತೆ.

ಡೊಳ್ಳುಹೊಟ್ಟೆಯ ಕಾರಣದಿಂದ ಅವನನ್ನು ಯಕ್ಷರಲ್ಲೊಬ್ಬನಾಗಿ ಕೆಲವು ವಿದ್ವಾಂಸರು ಪರಿಗಣಿಸುತ್ತಾರೆ.

ನಾಗ, ಯಕ್ಷ ಹಾಗೂ ಗಣಗಳನ್ನೊಳಗೊಂಡ ಭೂತಾರಾಧನೆಯನ್ನು ಆರ್ಯರೂ ಅಲ್ಲದ ದ್ರಾವಿಡರೂ ಅಲ್ಲದ ಕೆಲ ಪ್ರಾಚೀನ ಭಾರತೀಯರು ಆಚರಿಸುತ್ತಿದ್ದರು. ಆರ್ಯ ಹಾಗೂ ದ್ರಾವಿಡರಿಗಿಂತ ಮೊದಲು ಭಾರತದ ಆದಿನಿವಾಸಿಗಳಾಗಿದ್ದ ಮುಂಡ ಜನಾಂಗಕ್ಕೆ ಗಣಪತಿಯ ಆದಿದೈವ.

### ವಿಘ್ನನಿವಾರಕನೇ? ವಿಘ್ನದೇವತೆಯೇ?

ಕೈಗೊಂಡ ಕಾರ್ಯಗಳೆಲ್ಲ ನಿರ್ವಿಘ್ನವಾಗಿ ನೆರವೇರುವಂತೆ ಮಾಡೆಂದು ಕೋರುವುದು ಗಣಪತಿಯನ್ನೇ. ಆದರೆ ಆತನು ವಿಘ್ನನಿವಾರಕನೇ ಅಥವಾ ವಿಘ್ನದೇವತೆಯೇ ಎಂಬ ಪ್ರಶ್ನೆ ಸಹಜವಾಗಿ ಉದ್ಭವಿಸುತ್ತದೆ.

ಗಣಪತಿಗಿರುವ ಹಲವಾರು ನಾಮಗಳಲ್ಲಿ 'ವಿಘ್ನ'ನೆಂಬುದೂ ಒಂದು. ಗೃಹ್ಯಸೂತ್ರದಲ್ಲಿ ಆತನನ್ನು ವಿಘ್ನಗಳ ಹಾಗೂ ಬಾಧೆಗಳ ದೇವತೆಯೆಂದು ಹೇಳಲಾಗಿದೆ. ಜೊತೆಗೆ ಅವುಗಳ ನಿವಾರಣೆ ಮಾಡಲು ಅವನನ್ನೇ ಕೋರುವ ಸ್ತೋತ್ರಗಳಿವೆ.

ಗೃಹ್ಯಸೂತ್ರದಲ್ಲಿ ವಿನಾಯಕನ ನಾಲ್ಕು ರೂಪಗಳನ್ನು ವಿವರಿಸಲಾಗಿದೆ. ಶಾಲಕಟಂಕಟ, ಕೂಷ್ಮಾಂಡ ರಾಜಪುತ್ರ, ಉಸ್ಮಿತ ಹಾಗೂ ದೇವಯಜ್ಞ ಎಂಬ ನಾಲ್ಕು ವಿನಾಯಕ ರೂಪಗಳ ವರ್ಣನೆ ಅಲ್ಲಿದೆ.

ಸರ್ವತ್ರ ಪೂಜೆಗೊಂಬ ಸಿದ್ಧಿವಿನಾಯಕ, ವಿಘ್ನೇಶ್ವರನಿಗೆ ಈ ಸೂತ್ರಗಳಲ್ಲಿ 'ಅಹಿತಕಾರಿ' ಎಂಬ ಪಟ್ಟ!

''ಇವನ ಪ್ರಭಾವದಿಂದ ಮನುಷ್ಯರು ಹುಚ್ಚರಂತೆ ಆಡುತ್ತಾರೆ. ಸ್ವಪ್ನದಲ್ಲಿ ಇವನ ದರ್ಶನ ಅಶುಭ ಲಕ್ಷಣ. ಇವನ ಅವಕೃಪೆಯಿಂದ ರಾಜರು ರಾಜ್ಯವಿಹೀನರಾಗುತ್ತಾರೆ. ಸ್ತ್ರೀಯರು ಸಂತಾನಭ್ರಷ್ಟರಾಗುತ್ತಾರೆ. ಕುಮಾರಿಯರಿಗೆ ಯೋಗ್ಯ ಪತಿ ದೊರೆಯುವುದಿಲ್ಲ. ಕೃಷಿಕರ ಕೃಷಿ ನಾಶವಾಗುತ್ತದೆ. ವ್ಯಾಪಾರಿಗಳ ವ್ಯವಹಾರ ಹಾನಿಯಾಗುತ್ತದೆ. ವಿದ್ಯಾರ್ಥಿಗಳ ಅಧ್ಯಯನ ಭಂಗವಾಗುತ್ತದೆ'' ಎಂದು ಈ ಸೂತ್ರಗಳಲ್ಲಿ ವರ್ಣಿಸಲಾಗಿದೆ.

ಆದ್ದರಿಂದಲೇ ಗಣಪತಿಯನ್ನು ಸಂತುಷ್ಟಗೊಳಿಸುವ ಆರಾಧಿಸುವ ಅವನಿಗೆ ಪ್ರಿಯವೆನ್ನಲಾದ ಮೋದಕದ ನೈವೇದ್ಯ ಅರ್ಪಿಸುವ ಪರಂ

## ಗಣಪತಿ ಗಜಾನನನಾದ ಕಥೆ

ಮಾನವದೇಹದೊಂದಿಗೆ ಪ್ರಾಣಿಮುಖ ಹೊಂದಿದ ಹಲವಾರು ದೇವತೆಗಳನ್ನು ನಾವು ಪುರಾಣಗಳಲ್ಲಿ ಕಾಣಬಹುದಾಗಿದೆ. ಇಂಥ ವಿಚಿತ್ರ ಸಂಯೋಗದ ಹಿನ್ನೆಲೆಯಲ್ಲಿ ಒಂದಿಲ್ಲೊಂದು ಕಥೆ ಇದ್ದೇ ಇರುತ್ತದೆ. ನರಸಿಂಹ ಅವತಾರದ ಕಥೆ ಸರ್ವವೇದ್ಯ. ಅದೇ ರೀತಿ ಗಣಪತಿಗೆ ಆನೆಯ ಮುಖ ದೊರೆತಿರುವುದಕ್ಕೆ ಪೂರಕವಾಗಿ ಒಂದಲ್ಲ ಹಲವು ಕಥೆಗಳಿವೆ.

ಪಾರ್ವತಿ ಮಣ್ಣಿನಿಂದ ಸೃಷ್ಟಿಸಿದ ರೂಪಕ್ಕೆ ಜೀವ ನೀಡಿದಳು. ನಂತರ ಆ ಬಾಲಕ ಪಾರ್ವತೀ ರಮಣನಿಗೇ ಮನೆಯೊಳಗೆ ಪ್ರವೇಶ ನೀಡದಿರಲು ಕ್ರೋಧತಪ್ತನಾದ ಈಶ್ವರ ಆತನ ಶಿರವನ್ನು ಕತ್ತರಿಸಿದನು. ಆನೆಯೊಂದರ ಶಿರವನ್ನೇ ಕತ್ತರಿಸಿ ತಂದರು. ಬಾಲಕನ ದೇಹಕ್ಕೆ ಅಂಟಿಸಿ ಈಶ್ವರ ಜೀವದಾನ ನೀಡಿದ. ಹೀಗೆ ಈ ಗಜಮುಖ ಗಣಪತಿಯಾದ. ಹೆಚ್ಚು ಪ್ರಚಲಿತವಲ್ಲಿರುವ ಇದು ಶಿವಪುರಾಣದ ಕಥೆ.

ವರೆ ಆರಂಭವಾಗಿರಬಹುದು.

ಬೋಧಾಯನ ಧರ್ಮಸೂತ್ರಗಳಲ್ಲಿ ಹಾಗೂ ಗೃಹ್ಯ ಸೂತ್ರಗಳಲ್ಲಿ ವರ್ಣಿತನಾಗಿರುವ ಗಣಪತಿ ಒಬ್ಬನೇ ಆಗಿದ್ದರೂ ಧರ್ಮಸೂತ್ರಗಳಲ್ಲಿ ವಿನಾಯಕ ವಿಶಿಷ್ಟ ಸ್ಥಾನ ಪಡೆದಿದ್ದಾನೆ. ಗೃಹ್ಯಸೂತ್ರದ ವಿಘ್ನಕಾರಿ ಇಲ್ಲಿ ವಿಘ್ನಪತಿಯಾಗಿ ಪ್ರಗತಿ ಸಾಧಿಸಿದ್ದಾನೆ. ವಿಘ್ನವಿನಾಶಕ ದೇವತೆಯಾಗಿದ್ದಾನೆ. ಕಾರ್ಯ ಸಫಲತೆಗಾಗಿ ಅನುಗ್ರಹಿಸುವಂತೆ ಅವನನ್ನು ಕೋರುವ ಪ್ರಾರ್ಥನೆಗಳು ಇದರಲ್ಲಿವೆ.

ವಿಧಿವತ್ತಾಗಿ ಅರ್ಚನಾ ವಿಧಾನ ವಿವರಿಸುವ ಈ ಮಂತ್ರಗಳು ಮುಂದೆ ಅವನನ್ನು ವಿಸರ್ಜಿಸುವ ಕ್ರಮವನ್ನೂ ವಿವರಿಸುತ್ತವೆ. ''ಪೂಜೆ ಸ್ವೀಕರಿಸಿ ಸಂತುಷ್ಟನಾಗಿ ಹೋಗಿ ಬಾ'' ಎಂದು ಹೇಳುವ ಈ ಮಂತ್ರಗಳ ರಹಸ್ಯವೇನು?

ಲಕ್ಷ್ಮಿಯನ್ನು ಆಹ್ವಾನಿಸಿ, ಪ್ರತಿಷ್ಠಾಪಿಸಿ ಇರು ಎಂದು ಹೇಳುವ ಮಂತ್ರಗಳಿವೆ. ಹಾಗೆಯೇ ಉಳಿದ ದೇವ-ದೇವತೆಗಳಿಗೂ. ಆದರೆ ಗಣಪತಿಯನ್ನು ಪೂಜೆ ಸ್ವೀಕರಿಸಿ ಸಂತುಷ್ಟನಾಗಿ ಹೋಗಿ ಬಾ ಎಂದು ಹೇಳುವಲ್ಲಿ ಉದ್ದೇಶ ಸ್ಪಷ್ಟವಾಗಿದೆ ಎಂದೆನಿಸುತ್ತದೆ.

**"ಕೃತಂ ಯದಿ ಮಯಾ ಪ್ರಾಸ್ತ್ರಂ**
**ಶ್ರದ್ಧಯಂ ವಾ ಗಣೇಶ್ವರ**
**ಉತ್ತಿಷ್ಠ ಸಗಣಃ ಸಾಧೂ**
**ಯಾಹಿ ಭದ್ರಂ ಪ್ರಸೀದ ತಂ ||**

ಇವೇ ಸೂತ್ರಗಳಲ್ಲಿ ಗಣಪತಿಯೊಂದಿಗೆ 'ಜ್ಯೇಷ್ಠಾ'ದೇವಿಯ ಉಲ್ಲೇಖವಿದ್ದು ಅವಳೂ 'ಹಸ್ತಿಮುಖಿ'. ಸಿಂಹ ವ್ಯಾಘ್ರಗಳಿಂದ ಎಳೆಯ

---

ಇದಕ್ಕೆ ಭಿನ್ನವಾದ ಆದರೆ ಕೊನೆಯಲ್ಲಿ ಆನೆಯ ಮುಖವೇ ಗಣಪತಿಗೆ ಪ್ರಾಪ್ತವಾದ ಬೇರೆ ಕಥೆಗಳೂ ಇವೆ.

**ಒಂದು ದಂತಕಥೆ ಹೀಗಿದೆ:**

ಗಣಪತಿ ಶಿವನ ಮಾನಸಪುತ್ರ. ಇಂಥ ಸುಪುತ್ರನನ್ನು ಪಡೆಯಲು ತನ್ನ ಸಹಕಾರ ಕೇಳದ ಪತಿಯಮೇಲೆ ಪಾರ್ವತಿಗೆ ಮುನಿಸು. 'ಗಂಡ ಹೆಂಡಿರ ನಡುವೆ ಕೂಸು ನುಗ್ಗಾಯಿತು' ಎಂಬಂತೆ ಪಾರ್ವತಿಯ ಕೋಪ-ಶಾಪಕ್ಕೆ ತುತ್ತಾಗಿ ಶಿವನ ಮಾನಸಪುತ್ರ ಗಜಾನನನಾದನಂತೆ.

ಬ್ರಹ್ಮವೈವರ್ತ ಪುರಾಣದ ಕಥೆ ಸಂಪೂರ್ಣ ವಿಭಿನ್ನ ವೃತ್ತಾಂತವನ್ನು ಹೇಳುತ್ತದೆ:

ಸಂತಾನವಿಹೀನಳಾದ ಪಾರ್ವತಿ ಸಂತಾನಪ್ರಾಪ್ತಿಗಾಗಿ ಘೋರ ತಪಸ್ಸು ಮಾಡುತ್ತಾಳೆ. ಅಶರೀರವಾಣಿಯ ಅಪ್ಪಣೆಯಂತೆ ಮನೆಗೆ ಮರಳಿದ ಅವಳಿಗೆ ಅಲ್ಲಿ ಸುಂದರ ಮಗುವೊಂದು ಕಾಣುತ್ತದೆ. ಮಗು ಪಡೆದ ಸಂತಸವನ್ನು ಎಲ್ಲರೊಂದಿಗೆ ಹಂಚಿಕೊಳ್ಳಲು ಶಿವ-ಪಾರ್ವತಿಯರು ಸಂಭ್ರಮದ ಸಮಾರಂಭ ಏರ್ಪಡಿಸಿ ಎಲ್ಲ ದೇವ-ದೇವತೆಯರನ್ನು ಆಮಂತ್ರಿಸುತ್ತಾರೆ. ಸುಂದರ ಮಗುವನ್ನು ಕಂಡು ಎಲ್ಲರೂ ಸಂತೋಷ ವ್ಯಕ್ತಪಡಿಸುತ್ತಾರೆ. ಆದರೆ ಶನಿ ಮಾತ್ರ ನೆಲದೆಡೆಗೆ ನೆಟ್ಟ ದೃಷ್ಟಿಯನ್ನು ಮೇಲಕ್ಕೆತ್ತುವದಿಲ್ಲ. ''ಎಲ್ಲರೂ ಮಗುವನ್ನು ಕಂಡು ಸಂತೋಷಪಡುತ್ತಿರುವಾಗ ಶನಿಯೊಬ್ಬ ಏಕೆ ಹೀಗೆ?'' ಎಂದು ವ್ಯಾಕುಲಳಾದ ಪಾರ್ವತಿ ಮಗುವನ್ನು ಅವನೆಡೆಗೆ ಕರೆತಂದು ನೋಡಲು ಕೋರುತ್ತಾಳೆ. ಆದರೆ ಶನಿಯ ದೃಷ್ಟಿತಾಕಿದ ಕ್ಷಣದಲ್ಲಿ ಮಗುವಿನ ಶಿರ ಮುಂಡದಿಂದ ಬೇರ್ಪಟ್ಟು ಹಾರಿಹೋಗುತ್ತದೆ.

ಶಿರದ ಶೋಧನೆಗೆ ಹೊರಟ ಗರುಡವಾಹನ ವಿಷ್ಣು ಪುಷ್ಪಭದ್ರಾ ತೀರದಲ್ಲಿ ಪವಡಿಸಿದ ಆನೆಯೊಂದರ ಶಿರವನ್ನು ಕತ್ತರಿಸಿ ತಂದು ಮಗುವಿನ ಮುಂಡಕ್ಕೆ ಜೋಡಿಸಿ ಜೀವಚೈತನ್ಯ ತುಂಬುತ್ತಾನೆ.

ಈ ಎಲ್ಲ ಕಥೆಗಳ ಅಂತ್ಯ ಒಂದೇ ಆಗಿರುವದು (ಯಾರಿಂದಲೇ ಆಗಿರಲಿ) ಮಾತ್ರ ಆಶ್ಚರ್ಯಕರ ಸತ್ಯ.

ಲ್ಪಡುವ ರಥದಲ್ಲಿ ಸಂಚರಿಸುವ ಇವಳು ಉಗ್ರ ಸ್ವರೂಪಿಣಿ. ಪುರಾಣಗಳಲ್ಲಿ ದುರ್ಗೆಯ ಮತ್ತೊಂದು ಹೆಸರೇ ಜ್ಯೇಷ್ಠಾ ಎಂದಿದೆ.

ಗಣಪತಿಯಂತೆ ಜ್ಯೇಷ್ಠಾದೇವಿಗೂ ಆಹ್ವಾನ, ಪ್ರತಿಷ್ಠಾಪನೆ ಹಾಗೂ ವಿಸರ್ಜನೆ ಮಂತ್ರಗಳಿವೆ.

ಯಾಜ್ಞವಲ್ಕ್ಯ ಸ್ಮೃತಿಯಲ್ಲಿ ವಿನಾಯಕನ ಒಂದೇ ರೂಪವನ್ನು ವಿವರಿಸಲಾಗಿದ್ದರೂ ಆರು ಹೆಸರುಗಳನ್ನು ಉಲ್ಲೇಖಿಸಲಾಗಿದೆ. ಮಿತ, ಸಂಮಿತ, ಶಾಲ, ಕಂಟಕ, ಕೂಷ್ಮಾಂಡ ಹಾಗೂ ರಾಜಪುತ್ರ ಎಂದು ಬಣ್ಣಿಸಲಾಗಿದೆ.

ಗುಪ್ತರ ಕಾಲದಿಂದ ಗಣೇಶನ ವಿಗ್ರಹಾರಾಧನೆ ವ್ಯಾಪಕವಾಗಿ ಆರಂಭವಾಗಿರಬಹುದೆಂದು ಖ್ಯಾತವಿದ್ವಾಂಸ ಡಾ. ಭಂಡಾರಕರ ಹೇಳುತ್ತಾರೆ. ಮಥುರೆಯಲ್ಲಿ ದೊರೆತಿರುವ ವಿಗ್ರಹ ಸುಮಾರು ಕ್ರಿಸ್ತಶಕ ಎರಡನೆಯ ಶತಮಾನದ್ದಿರಬಹುದೆಂದು ಹೇಳಲಾಗಿದೆ.

ಆರನೆಯ ಶತಮಾನದ ಶಿಲ್ಪಕಲೆ ಹಾಗೂ ಸಾಹಿತ್ಯ ಗಣಪತಿಯ ಅಧಿಕೃತ ಉತ್ಥಾನವನ್ನು ಎತ್ತಿ ತೋರುತ್ತವೆ. ಐಹೊಳೆಯ ಶಿಲಾದೇಗುಲಗಳಲ್ಲಿ ಶಿವನ ಪರಿಚಾರಕನಾಗಿ ಗಣೇಶನನ್ನು ಚಿತ್ರಿಸಲಾಗಿದೆ. ಮಧ್ಯಪ್ರದೇಶದ ಭೂಮಾರದಲ್ಲಿರುವ ಆರನೆಯ ಶತಮಾನದ ವಿಗ್ರಹವೊಂದು ವಿಶಿಷ್ಟವಾಗಿದೆ. ಇಲ್ಲಿ ಗಜಾನನ ಭಗ್ನದಂತಿಯಾಗಿದ್ದಾನೆ. ಈ ಗಜಾನನ ಪರಶುಧರ. ಎರಡು ಕೈಗಳಲ್ಲಿ ಅವನಿಗೆ ಪ್ರಿಯವಾದ ಮೋದಕಗಳಿವೆ. ಮತ್ತೊಂದು ಕೈಯಿಂದ ತನ್ನ ಎಡತೊಡೆಯ ಮೇಲೆ ಕುಳಿತ ಶಕ್ತಿಯನ್ನು ಬಳಸಿಕೊಂಡಿದ್ದಾನೆ.

ಆದಿ ಶಂಕರಾಚಾರ್ಯರಿಂದ ಪ್ರಚಾರಗೊಳಿಸಲ್ಪಟ್ಟ ಷಣ್ಮತಗಳಲ್ಲಿ ಒಂದಾದ ಗಾಣಪತ್ಯ ಪಂಥದಿಂದ ಗಣಪತಿಯ ಆರಾಧನೆ ಹೆಚ್ಚು ಜನಪ್ರಿಯವಾಯಿತು.

ಗೌತಮಬುದ್ಧ ತನ್ನ ನೆಚ್ಚಿನ ಶಿಷ್ಯ ಆನಂದನಿಗೆ 'ಗಣಪತಿ ಹೃದಯಮಂತ್ರ' ಬೋಧಿಸಿದನೆಂದು ಹೇಳಲಾಗುತ್ತಿದೆ. ಮಹಾಯಾನ ಪಂಥದಲ್ಲಿ ಗಣೇಶನ ಉಪಾಸನೆ ಗ್ರಾಹ್ಯವಾಗುವುದರೊಂದಿಗೆ ಬೌದ್ಧ ಧರ್ಮದೊಂದಿಗೆ ಅದು ವಿದೇಶಗಳಿಗೂ ಸಾಗಿತು ಎಂದು ಹೇಳುತ್ತಾರೆ.

ಬ್ರಹ್ಮದೇಶ, ಥೈಲ್ಯಾಂಡ್, ಕಂಬೋಡಿಯಾ, ನೇಪಾಳ, ಟಿಬೇಟ, ಚೀನಾ, ಮಂಗೋಲಿಯಾ ಹಾಗೂ ಜಪಾನ ಮುಂತಾದ ದೇಶಗಳಲ್ಲಿ ಗಣೇಶನ ಉಪಾಸನೆ ಆರಾಧನೆ ಮಹಾಯಾನ ಪಂಥದ ಬೌದ್ಧರಿಂದಾಗಿ ಆರಂಭವಾಯಿತು ಎನ್ನಲಾಗಿದೆ. ಈ ದೇಶಗಳಲ್ಲಿ ಕಂಡು ಬರುವ ಶಿಲ್ಪಕಲೆ ಹಾಗೂ ವರ್ಣಚಿತ್ರಗಳಲ್ಲಿ ಗಣಪತಿಯ ಪ್ರಾತಿನಿಧ್ಯ ವ್ಯಕ್ತವಾಗಿದೆ.

ಟಿಬೇಟದ ಸಂತ ಪಾಗ್ಸ್-ಪಾ ಗಣಪತಿಯ ಆರಾಧಕನಾಗಿದ್ದನು. ತನ್ನ ಜನನದ ಪೂರ್ವದಲ್ಲಿ ತನ್ನ ತಂದೆಯ ಸ್ವಪ್ನದಲ್ಲಿ ಬಂದ ಗಣೇಶದೇವ ಅವನನ್ನು ಮೇರು ಪರ್ವತಕ್ಕೆ ಕರೆದುಕೊಂಡು ಹೋಗಿ ಮಂಗೋಲಿಯಾವನ್ನು ತೋರಿ, ''ನಿನ್ನ ಮಗನು ಆ ದೇಶದ ಚಕ್ರವರ್ತಿಯಾಗಲಿದ್ದಾನೆ'' ಎಂದು ಹೇಳಿದ್ದನಂತೆ. ಮಂಗೋಲಿಯಾದಲ್ಲಿ ಮಹಾಯಾನ ಬೌದ್ಧ ಧರ್ಮವನ್ನು ಪಸರಿಸಿದ ಪಾಗ್ಸ್-ಪಾ 13ನೆಯ ಶತಮಾನದಲ್ಲಿ ಚೀನದ ಚಕ್ರವರ್ತಿಯಾಗಿದ್ದ ಕುಬ್ಲಾಖಾನ್‌ನ ಮನೋ ಪರಿವರ್ತನೆಯಂಥ ಅಪೂರ್ವ ಸಾಧನೆ ಮಾಡಿದನು.

ಗಣೇಶನ ಮೂಲ ಕಲ್ಪನೆಯ ಕುರಿತು ಹಲವು ವಿಚಾರಗಳಿರಬಹುದು. ವಿವಾದಗಳೂ ಇರಬಹುದು. ಅದೇನೇ ಇರಲಿ ಆತ ಇಂದು ಮನಮನಗಳಲ್ಲಿ, ಮನೆಮನೆಗಳಲ್ಲಿ ಭಕ್ತರ ಶ್ರದ್ಧಾಕೇಂದ್ರವಾಗಿ ಪ್ರತಿಷ್ಠಾಪಿತನಾಗಿದ್ದಾನೆ. ವಿಘ್ನನಿವಾರಕನ ಕುರಿತು ಭಕ್ತರ ಹೃದಯಗಳಲ್ಲಿ ಆಳವಾಗಿ ಬೇರೂರಿದ ನಂಬಿಕೆಯಿದೆ. ●

(ಆಧಾರ)

# ಸುಂದರಕಲಿಯ ಅಂತಿಮ ಸಂಘರ್ಷ

● ಪ್ರೊ. ಎನ್. ಆರ್. ಆಡೂರ

ನಿಟ್ಟುಸಿರಿಟ್ಟ ಅವರು ಕೊನೆಗೊಮ್ಮೆ ಹೇಳಲಾರದೆ ಹೇಳಿದರು - "ವೇದನೆಯಿಂದ ಇದನ್ನು ಪಾರು ಮಾಡಬೇಕೆಂದರೆ ಇರುವುದೊಂದೇ ಉಪಾಯ - ಮೃತ್ಯುದಾನ. ಆದಷ್ಟು ಬೇಗ ಇದನ್ನು ಗುಂಡಿಕ್ಕಿ ಕೊಂದುಬಿಡಿ..."

ಅವರ ಮನಸ್ಸು ಭಾರವಾಗಿತ್ತು. ಮುಖ ಮ್ಲಾನವಾಗಿತ್ತು. ಇನ್ನು ಹೆಚ್ಚು ಹೊತ್ತು ಅಲ್ಲಿ ನಿಲ್ಲಲಾಗದ ಡಾ. ಶರ್ಮಾ ತಮ್ಮ ಕಣ್ಣಂಚಿನಲ್ಲಿ ತುಳುಕಿದ ನೀರನ್ನು ಇತರರು ನೋಡದ ಹಾಗೆ ತಲೆತಗ್ಗಿಸಿ ಅಲ್ಲಿಂದ ನಡೆದುಬಿಟ್ಟರು.

ಆದರೆ ಜನ ಇದಕ್ಕೊಪ್ಪಲಿಲ್ಲ. ಸುಂದರಕಲಿಗೆ ಸಾವು ತರುವ ವಿಚಾರವನ್ನವರು ವಿರೋಧಿಸಿದರು. ತಮ್ಮ ಕಣ್ಮಣಿಯನ್ನವರು ಅದು ಹೇಗೆ ಸಾಯಗೊಟ್ಟಾರು? ಮತ್ತೆ ಯತ್ನಕ್ಕೆ ತೊಡಗಿದರು.

ಸುಂದರಕಲಿ - 32 ವರ್ಷ ವಯಸ್ಸಿನ ಹೆಣ್ಣಾನೆ. ಡಾಬರ್ ಕಂಪನಿಯ ಸ್ವತ್ತು. ತನ್ನ ಉತ್ಪಾದನೆಗಳ ಪ್ರಚಾರಕಾರ್ಯಕ್ಕಾಗಿ ಆ ಕಂಪನಿ ಸಾಕಿಕೊಂಡ ಸದ್ಗುಣೆ. ದಿಲ್ಲಿಯಲ್ಲದು ಆಗ ಮನೆಮಾತು. ಮಕ್ಕಳಿಗೆ ಅದರೊಂದಿಗೆ ಒಂದಷ್ಟು ಹೊತ್ತು ಮಾತು - ಆಟ ನಡೆಸುವುದೆಂದರೆ ತುಂಬ ಆಪ್ಯಾಯಮಾನ. ಗಣರಾಜ್ಯೋತ್ಸವದ ಮೆರವಣಿಗೆಯಲ್ಲಿ ಸುಂದರಕಲಿಗೇ ಅಗ್ರಪಟ್ಟ, ಮುಂದಾಳತ್ವ. ಭಾರತೀಯ ಕುಟುಂಬ ಕಲ್ಯಾಣ ಯೋಜನೆ ಇಲಾಖೆಯ ಧ್ಯೇಯೋದ್ದೇಶಗಳನ್ನು ಹಳ್ಳಿಹಳ್ಳಿಗೆ ತಲುಪಿಸುವ ಕೆಲಸವನ್ನು ಎಂಟು ವರ್ಷಗಳ ಕಾಲ ಅಚ್ಚುಕಟ್ಟಾಗಿ ನಿರ್ವಹಿಸಿತ್ತು. ಪ್ರಪ್ರಮುಖರಿಗೆ 'ಸ್ವಾಗತ-ಸಲಾಮು' ನೀಡುವುದು ಸುಂದರಕಲಿಯ ವೈಶಿಷ್ಟ್ಯ. ನಿತ್ಯದ ಕೆಲಸಗಳನ್ನು ಪೂರೈಸಿ ಸಂಜೆಯ ಹೊತ್ತಿಗೆ ಯಮುನೆಯ ದಡದ ತನ್ನ ಡೇರೆಗೆ ಮರಳುತ್ತಿದ್ದ ಸುಂದರಕಲಿ ಆ ನದೀದಡದ ಮುಖ್ಯ ಆಕರ್ಷಣೆ. ಇಂಥ ಆತ್ಮೀಯಳಿಗೀಗ ಅದೇ ಡೇರೆಯಲ್ಲಿ ಜೀವನ್ಮರಣಗಳ ನಡುವೆ ತುಯ್ದಾಡುವ ಶೋಚನೀಯ ಸ್ಥಿತಿ...

ಡಾ. ಶರ್ಮಾರ ಮಾತುಗಳನ್ನು ಕೇಳಿದಾಕ್ಷಣ ಅಕ್ಷರಶಃ ಎಚ್ಚರದಪ್ಪಿದ ಶಹಾಬುದ್ದೀನ. ತನ್ನ ಪ್ರಾಣಸಮಾನ ಪ್ರಾಣಿಯನ್ನು ಗುಂಡಿಕ್ಕಿ ಕೊಲ್ಲುವುದೆಂದರೆ? ಆತನ ಹೆಂಡತಿ, ಆಕೆಯ ತಮ್ಮ ಎಲ್ಲರೂ ಹೋ ಎಂದಳತೊಡಗಿದರು. ಡಾಕ್ಟರೊಬ್ಬರ ಪ್ರಥಮ ಚಿಕಿತ್ಸೆಯಿಂದಾಗಿ ಚೇತರಿಸಿಕೊಂಡು ಕಣ್ತೆರೆದ ಶಹಾಬುದ್ದೀನ ಎಷ್ಟು ತೊಂದರೆಯಾದರೂ ಸರಿ, ಸುಂದರಕಲಿಯನ್ನು ಬದುಕಿಸಿಕೊಳ್ಳಲೇಬೇಕೆಂದು ನಿಶ್ಚಯಿಸಿದ.

ದಿಲ್ಲಿಯಿಂದ ಪ್ರಕಟವಾಗುವ 'ಹಿಂದುಸ್ತಾನ್ ಟೈಮ್ಸ್' ದೈನಿಕವು ತನ್ನ 29-6-1977ರ ಸಂಚಿಕೆ

ಯಲ್ಲಿ ಮುಖಪುಟದಲ್ಲಿ ಸುಂದರಕಲಿಯ ಕುರಿತು ಮುಖ್ಯ ಸುದ್ದಿಯೊಂದನ್ನು ಪ್ರಸಿದ್ಧಿಸಿತು:

"ಇಂದ್ರಪ್ರಸ್ಥದ ಪೂಲ್ ಬಳಿ ನಿಮ್ಮೆಲ್ಲರ ಪ್ರಿಯ ಸುಂದರಕಲಿ ಮರಣಾಂತಿಕ ಸಂಕಟವನ್ನೆದುರಿಸುತ್ತಿದೆ. ಅದರ ಮುಂದಿನ ಎಡಗಾಲು ಮೂಳೆ ಮುರಿದುಕೊಂಡು ಕಾಲು ಆನೆಗಾತ್ರ ಬಾತುಕೊಂಡಿದೆ. ಚಿಕಿತ್ಸೆ ನಡೆದಿದೆಯಾದರೂ ಅದು ಅಷ್ಟು ವ್ಯವಸ್ಥಿತ ರೀತಿಯಲ್ಲಿ ನಡೆಯುತ್ತಿಲ್ಲವೆನಿಸುತ್ತದೆ. ದೇಶದಲ್ಲಿನ ಯಾವುದೇ ಸರ್ಜನ್ ಆ ಮೂಳೆಯ ಶಸ್ತ್ರ ಚಿಕಿತ್ಸೆ ನಡೆಸಿ ಸುಂದರಕಲಿ ಮತ್ತೆ ಓಡಾಡಬಲ್ಲಂತೆ ಮಾಡಲು ಮುಂದೆ ಬರುವರೆ? ಅದಕ್ಕಾಗಿ ಎಷ್ಟು ಖರ್ಚಾದರೂ ಸರಿ, ನಿಭಾಯಿಸಲು ಅದರ ಒಡೆಯರು ಸಿದ್ಧ. ಚಿಕಿತ್ಸಾಕಾರ್ಯದಲ್ಲಿ ಸಫಲರಾದವರಿಗೆ ಸೂಕ್ತ ಪುರಸ್ಕಾರವನ್ನು ನೀಡುವುದಾಗಿ ಡಾಬರ್ ಕಂಪನಿ ಹೇಳಿಕೆ ನೀಡಿದೆ."

ಅಬ್ಬಾ! ಪ್ರತಿಕ್ರಿಯೆಯ ಪ್ರವಾಹವೇ ಹರಿದು ಬಂತು. ವೈದ್ಯರು, ತಜ್ಞರುಗಳಿಂದ ಅವ್ಯಾಹತವಾಗಿ ಫೋನ್ ಕರೆಗಳು. ಹರಿಯಾಣದ ಹಿಸಾರ್ ಕೃಷಿ ವಿಶ್ವವಿದ್ಯಾಲಯದ ತಜ್ಞರು ದಿಲ್ಲಿಗೆ ಧಾವಿಸಿದವರಲ್ಲಿ ಪ್ರಥಮರು. ಚಿಕಿತ್ಸೆಗಾಗಿ ಆನೆಯನ್ನು ವಿಶ್ವವಿದ್ಯಾಲಯಕ್ಕೆ ಸಾಗಿಸುವ ಸೂಚನೆ ಅವರದು. ಆಗಿನ ಕೃಷಿಮಂತ್ರಿ ಬರ್ನಾಲರ ಒಪ್ಪಿಗೆಯೂ ಇದಕ್ಕಿತ್ತು. ಆದರೆ ಕೊನೆಯ ಗಳಿಗೆಯಲ್ಲಿ ಸ್ಥಳದಲ್ಲೇ ಚಿಕಿತ್ಸೆ ನಡೆಸಲು ಯೋಚಿಸಲಾಯಿತು.

"ಛೆ, ನಾನಲ್ಲಿ ಕರೆದೊಯ್ಯಬಾರದಿತ್ತು ಸುಂದರಕಲಿಯನ್ನು. ಸ್ವಲ್ಪ ಎಚ್ಚರಿಕೆವಹಿಸಿ ಬಳಸುದಾರಿಯಿಂದ ಹೋಗಿದ್ದರೂ ಆಗುತ್ತಿತ್ತೇನೋ. ನನ್ನದೇ ತಪ್ಪು" ಎಂದು ಪದೇಪದೇ ತನ್ನನ್ನು ಶಪಿಸಿಕೊಳ್ಳುತ್ತಿದ್ದ ಮಾಹುತ ಶಹಾಬುದ್ದೀನ.

ಆದಿನ ಬೆಳಗಿನ ಜಾವದಲ್ಲಿ ಸುಂದರಕಲಿಯನ್ನು ಸಿದ್ಧಪಡಿಸಿಕೊಂಡು ಹೊರಟಿದ್ದ ಆತ. ಯಮುನೆಯ ದಡದ ಲಕ್ಷ್ಮೀನಗರ ಎಂಬ ಹಳ್ಳಿಯನ್ನು ದಾಟಿ ಆ ಕಡೆಗೆ ಹೋಗಬೇಕಿತ್ತು. ಅದೊಂದು ಕೊಳಚೆಯ ಕೊಂಪೆ. ಹೊಲಸು ನೀರು ಹರಿಯಲು ಆಗಿನ್ನೂ ಸರಿಯಾದ ವ್ಯವಸ್ಥೆಯಾಗಿರಲಿಲ್ಲ. ದೊಡ್ಡ ತಗ್ಗುಗಳಿಗೆ ಆ ಕೊಳೆ ನೀರು ಹರಿದು ಬರುವಂತೆ ತಾತ್ಪೂರ್ತಿಕ ವ್ಯವಸ್ಥೆ ಮಾಡಿದ್ದರು. ಆ ತಗ್ಗುಗಳ ಮೇಲೆ ಮಥುರಾದ ಕೆಂಪುಕಲ್ಲಿನ ಹಾಸು. ಭಾರಕ್ಕೆ ಲಟ್ಟನೆ ಮುರಿದುಕೊಳ್ಳುವಂಥ ಕಲ್ಲು ಚಪ್ಪಡಿಗಳು. ಇಂಥ ಕಲ್ಲೊಂದರ ಮೇಲೆ ಸುಂದರಕಲಿ ತನ್ನ ಮುಂದಿನ ಬಲಗಾಲನ್ನಿಟ್ಟಿತು. ಕಲ್ಲು ಮುರಿದುಕೊಂಡು ಮುಗ್ಗರಿಸಿತು. ಆಳುದ್ದದ ತಗ್ಗಿನಲ್ಲಿ ಅದರ ಬಲಗಾಲು ರಾಡಿಯಲ್ಲಿ ಹೂತುಹೋಯಿತು. ಅದನ್ನೆತ್ತಲು ತನ್ನ ಮುಂದಿನ ಎಡಗಾಲಿನ ಮೇಲೆ ದೇಹದ ಭಾರ ಹಾಕಿ ಯತ್ನಿಸತೊಡಗಿದ ಸುಂದರಕಲಿಯ ಅಪಾರ ಯಾತನೆ, ಘೀಳಿಡುವಿಕೆಯಿಂದ ಆ ಬಸ್ತಿಯ ಜನ ಓಡಿ ಬಂದರು. ಆದರೆ ಸುಮ್ಮನೆ ದೂರ ನಿಂತು 'ಪಾಪ' ವೆಂದುಕೊಂಡರೆ ವಿನಾ ಆನೆಯ ಕಾಲು ಹೊರಬರಲು ಏನು ಮಾಡಬೇಕೆಂಬುದನ್ನು ಅರಿಯದಾದರು. ಶಹಾಬುದ್ದೀನ ಗಜಭಾಷೆಯಲ್ಲಿ ಕಾಲು ಹೊರಗೆಳೆದುಕೊಳ್ಳುವಂತೆ ಸೂಚನೆ ನೀಡತೊಡಗಿದ. ತುಂಬ ಪ್ರಯಾಸದಿಂದ ಬಲಗಾಲನ್ನೇನೋ ಕಿತ್ತುಕೊಂಡಿತು ಸುಂದರಕಲಿ. ಆದರೆ ಈ ಸಂದರ್ಭದಲ್ಲಿ ದೇಹದ ಭಾರವೆಲ್ಲ ಎಡಗಾಲ ಮೇಲೆ ಬಿದ್ದು ಅದರ ಕಾಲು ಮತ್ತು ಪಾದಗಳ ನಡುವಿನ ಮೂಳೆಯ ಜೋಡಣೆ (ರೇಡಿಯಸ್+ಅಲ್ನಸ್) ಮುರಿದುಕೊಂಡದ್ದು ಶಹಾಬುದ್ದೀನನಿಗೆ ಗೊತ್ತಾಗಲೇ ಇಲ್ಲ. ಕುಂಟುತ್ತಲೇ ಸಾಗಿದ ಆನೆಯೊಂದಿಗೆ ಆತ ಯಮುನೆಯ ದಡದ ಅದರ ಡೇರೆಯೆಡೆಗೆ ಸಾಗಿದ. ಆ ದಾರಿಯಲ್ಲಿ ಒಂದು ಚಿಕ್ಕ ಒಡ್ಡು. ಅದನ್ನು ದಾಟಲು ಮುಂದಿನ ಬಲಗಾಲನ್ನೆತ್ತಿಟ್ಟ ಸುಂದರಕಲಿ ಮತ್ತೊಮ್ಮೆ ಕಿರುಚಿಕೊಂಡಿತು. ಮುಂದಿನ ಎಡಗಾಲಿನ ಮುರಿದ ಮೂಳೆ ಮತ್ತಷ್ಟು ಮುರಿದು

ಕೊಂಡದ್ದು ಮಾಹುತನಿಗೆ ಗೊತ್ತಾಗಲಿಲ್ಲ.

ಮುರಿದ ಕಾಲಿನ ಮೇಲೆ ದೇಹದ ಭಾರಬೀಳುವುದು ಅನಿವಾರ್ಯವಿತ್ತು. ಕೂಡಲು-ಏಳಲು ಅದನ್ನೇ ಆಧರಿಸಬೇಕಿತ್ತು. ನಿಂತುಕೊಂಡಿದ್ದಂತೆಯೇ ದೊಪ್ಪನೆ ಬೀಳತೊಡಗಿತು ಸುಂದರಕಲಿ. ಮುರಿದ ಕಾಲಿಗೆ ಬಾವು ಬರತೊಡಗಿ ಅಲುಗಾಡಿಸಲು ಅಶಕ್ಯವಾಯಿತು. ಇಂಥದರಲ್ಲಿ ದಿಲ್ಲಿಯ ಉಷ್ಣತಾಮಾನ 43 ಡಿಗ್ರಿ ಸೆಂಟಿಗ್ರೇಡಿಗೆ ತಲುಪಿತ್ತು.

ದಿಲ್ಲಿಯ 'ಸೊಸೈಟಿ ಫಾರ ಕ್ರುಯೆಲ್ಟಿ ಅಗೇನ್ಸ್ಟ್ ಎನಿಮಲ್ಸ್' ಸಂಸ್ಥೆ ಸುಂದರಕಲಿಯ ಕರುಣಕತೆ ಕೇಳಿ ಸಹಾಯಕ್ಕೆ ಧಾವಿಸಿತು. ಡಾಬರ್ ಕಂಪನಿಯ ವಿನಂತಿಯಂತೆ ದಿಲ್ಲಿ ಪ್ರಾಣಿಸಂಗ್ರಹಾಲಯದ ನಿರ್ದೇಶಕರು ತಮ್ಮ ಒಬ್ಬ ಸಹಾಯಕ ನಿರ್ದೇಶಕ ಮತ್ತು ಪಶುವೈದ್ಯ ಡಾ. ಶರ್ಮಾರ ಸೇವೆಯನ್ನು ಎರವಲು ನೀಡಿದರು.

ತಮ್ಮ ಸಹಾಯಕರಿಂದ ಆನೆಯ ಕಾಲಿನ ಗಾಯವನ್ನು ತೊಳೆಸಿ, ಹರಿಯುತ್ತಿದ್ದ ಕೀವು-ರಕ್ತವನ್ನು ಒರೆಸಿ, ನಂತರ ಡಾ. ಶರ್ಮಾ ಕೈಗವಸುತೊಟ್ಟು ಗಾಯವನ್ನು ಪರೀಕ್ಷಿಸತೊಡಗಿದರು. ತುಂಬ ಆಳವಾದ ಗಾಯ ಅದು. ಒಳಗೆ ಕೈ ಹಾಕಿದರೆ ಹಿಡಿ ಹಿಡಿ ಕೊಳೆತ ಮಾಂಸ ಕೈಗೆಟುಕಿತು ಅದನ್ನೆಲ್ಲ ತೆಗೆದು ಹಾಕಿದರೆ ಒಂದು ಚಿಕ್ಕ ಬಕೆಟ್ ತುಂಬಿತು. ಇನ್ನೂ ಒಳಗೆ ಕೈ ಹಾಕಿ ಮೂಳೆಯನ್ನು ಪರೀಕ್ಷಿಸಿದರು. ಅದು ತುಂಬ ಸಂಕೀರ್ಣ ಮೂಳೆ ಮುರಿತ. ಇಪ್ಪತ್ತು ಸೆಂಟಿಮೀಟರಿನಷ್ಟು ಉದ್ದ ಸೀಳಿ ಇನ್ನೊಂದು ಮೂಳೆಯ ಮೇಲೆ ಚಾಚಿಕೊಂಡು, ಅದರ ಮೊನೆ ಹಿಂಬದಿಯ ಚರ್ಮ ಹರಿದು ಹೊರಕ್ಕೆ ಇಣುಕಿತ್ತು. ಗಾಯಕ್ಕೆ ನಂಜೇರಿತ್ತು. ಹುಣ್ಣುಗಳಾಗಿದ್ದವು ಅವು ಒಡೆದು ದುರ್ವಾಸನೆ ಹರಡಿತ್ತು.

ಕಾಲನ್ನು ಅಲುಗಾಡಿಸುವುದು ಸಾಧ್ಯವಿಲ್ಲದೆ ಒಂದೇ ಕಡೆ ಮಲಗಿದ್ದರಿಂದ ಅಲ್ಲಲ್ಲ ಶಯ್ಯಾವ್ರಣ (Bed sores) ಗಳಾಗಿದ್ದವು. ಅವುಗಳನ್ನು



ತೊಳೆಯಬೇಕೆಂದರೆ ಆನೆ ಎದ್ದುನಿಲ್ಲಬೇಕು. ಮೂರುವರೆ ಟನ್ ಭಾರದ ಸುಂದರಕಲಿಯನ್ನು ಎದ್ದು ನಿಂತುಕೊಳ್ಳುವಂತೆ ಮಾಡಲು ಕ್ರೇನ್‌ಗಳ ಬಳಕೆ ಅನಿವಾರ್ಯ. ಅದೆಲ್ಲಿ ದೊರಕೀತು? ಹೀಗೆ ಎರಡು ದಿನಗಳು ಕಳೆದಾಗ ಡಾ. ಶರ್ಮಾ ತುಂಬ ನೊಂದುಕೊಂಡು, ಅದನ್ನು ಗುಂಡಿಕ್ಕಿ ಕೊಲ್ಲುವುದೇ ಆ ಯಾತನೆಯನ್ನು ಕೊನೆಗೊಳಿಸಲು ಉಳಿದಿರುವ ಏಕಮಾತ್ರ ಉಪಾಯವೆಂದಿದ್ದರು.

★

ಹರಿಯಾಣಾ ಕೃಷಿ ವಿಶ್ವವಿದ್ಯಾಲಯದ ಪ್ರಾಣಿಗಳ ಸರ್ಜರಿ ಹಾಗೂ ರೇಡಿಯೊಲಜಿ ವಿಭಾಗದ ಮುಖ್ಯಸ್ಥ ಪ್ರೊ. ಜೆ.ಎಂ. ನಿಗಮ್‌ರ ನೇತೃತ್ವದಲ್ಲಿ ನಾಲ್ಕು ಜನ ಸರ್ಜನ್‌ರ ತಂಡ ಜೂನ್ 30ರ ರಾತ್ರಿ ಕಾರ್ಯತತ್ಪರವಾಯಿತು. ತಮ್ಮ ನಾಲ್ಕು ಮೋಟಾರ್‌ವಾಹನಗಳ ಹೆಡ್‌ಲೈಟ್‌ಗಳನ್ನವರು ನಾಲ್ಕು ದಿಕ್ಕಿನಿಂದ ಬೆಳಕು ಬೀರುವಂತೆ ವ್ಯವಸ್ಥೆ ಮಾಡಿದರು. ಆನೆಯ ಕಾಲಿನ ಮಾಂಸ ಇನ್ನಷ್ಟು ಕೊಳೆತಿತ್ತು. ಅದನ್ನು ತೆಗೆದು ತೊಳೆದ ಮೇಲೆ ಮುರಿದು ಚಾಚಿಕೊಂಡಿದ್ದ ಮೂಳೆಯನ್ನು ಸಾಧ್ಯವಿದ್ದಷ್ಟು ಹೆಚ್ಚು ಭಾಗ ಕತ್ತರಿಸಿ ತೆಗೆದರು. ಗಾಯಕ್ಕೆಲ್ಲ ನಂಜುನಿರೋಧಕ ಔಷಧಿ ತುಂಬಿ ಪಟ್ಟಿ ಹಾಕಿದರು. ಸುಂದರಕಲಿಯ ನೋವು ಕಡಿಮೆ ಮಾಡಲು ಅದಕ್ಕೆ ಸ್ಥಾನಿಕ ಅರೆವಳಿಕೆ (Local Anaesthesia) ನೀಡಲಾಯಿತು: ಆದರೆ ಪೂರ್ತಿ ಎಚ್ಚರ ತಪ್ಪಿಸಲಿಲ್ಲ.

ಆನೆಗಳ ಚರ್ಮ ತೀರ ದಪ್ಪ. ರಕ್ತವಾಹಕ ನರಗಳು ಎಲ್ಲಿವೆಯೆಂಬುದು ಗೊತ್ತಾಗುವುದು ಕಷ್ಟ. ಕಿವಿಗಳ ಹಿಂಭಾಗದ ಚರ್ಮ ಮಾತ್ರ ತೆಳ್ಳಗಿದ್ದು ಅಲ್ಲಿ ನರಗಳು ಕಾಣುತ್ತವೆ. ಇಲ್ಲಿ ಇಂಟ್ರಾವೆನಸ್ ಇಂಜೆಕ್ಷನ್ ನೀಡಲಾಯಿತು. ಅದರ ಶರೀರದಲ್ಲಿ ಕಡಿಮೆಯಾಗುತ್ತಿದ್ದ ನೀರಿನಂಶವನ್ನು ಸಮತೋಲದಲ್ಲಿಡಲು ಗ್ಲುಕೋಜ್ ಸಲೈನ್‌ನ್ನೂ ಈ ನರದ ಮೂಲಕವೆ ನೀಡುವ ವ್ಯವಸ್ಥೆಯಾಯಿತು. ಸೋಂಕನ್ನು ತಡೆಗಟ್ಟಲು ಮತ್ತು ಶರೀರದ ಉಷ್ಣತಾಮಾನವನ್ನು ಕಾಪಾಡಲು 50 ವಾಯಿಲ್ ಆ್ಯಂಟಿಬಯಾಟಿಕ್ ಔಷಧಿ ನೀಡಲಾಯಿತು. (ಕುದುರೆಗೆ ಕೇವಲ ಎರಡು ವಾಯಿಲ್‌ನಷ್ಟು ಕೊಡುತ್ತಾರೆ).

ಕಾಲಿನ ಗಾಯವಂತೂ ಸರಿಯೆ. ಕತ್ತಿನಲ್ಲೂ ಒಂದೆಡೆಗೇ ಮಲಗಿದ್ದುದರಿಂದ ಗಾಯಗಳಿದ್ದವು. ಅಲ್ಲೂ ಕೀವು-ರಕ್ತ. ಹುಳುಗಳೂ ಆಗಿದ್ದವು. ಅದನ್ನೆಲ್ಲ ತೊಳೆದು ರೋಗನಿರೋಧಕ ಹಳದಿವರ್ಣದ ಕ್ರೀಮನ್ನು ಮೆತ್ತಿ ಆ ಗಾಯಗಳನ್ನು ಮುಚ್ಚಿದರು.

ಮೊದಲ ದಿನದ ಈ ಚಿಕಿತ್ಸೆಯ ಒಟ್ಟು ಅವಧಿ ಎರಡೂವರೆ ಗಂಟೆಗಳು. ಆನೆಗೆ ಈ ಸಮಯದಲ್ಲಿ ಐದು ಕೇಜಿ ಬೆಲ್ಲ-ಬ್ರೆಡ್‌ಗಳನ್ನು ತಿನ್ನಿಸಿದ ಶಹಾಬುದ್ದೀನ್. ರಾತ್ರಿ ಹತ್ತು ಲೀಟರ್ ಗ್ಲೂಕೋಜ್ ಸಲೈನ್, ಐವತ್ತು ವಾಯಿಲ್ ಬೆಂಝಾಯಿಲ್‌ಪೆನಿಸಿಲಿನ್, ಐದು ಪೌಂಡ್ ಮ್ಯಾಗ್ನೇಶಿಯಂ ಸಲ್ಫೇಟ್, 100 ಮಿ.ಲಿ. ಟೆರಾಮೈಸಿನ್ ಮತ್ತು ಬ್ಯಾಂಡೇಜ್‌ಪಟ್ಟಿಗಳನ್ನು ತರಿಸಿಡಲಾಗಿತ್ತು. ಹಿಸಾರ ಕೃಷಿ ವಿಶ್ವವಿದ್ಯಾಲಯದ ಡಾಕ್ಟರರ ತಂಡ ತನ್ನೊಂದಿಗೆ ಎರಡೂವರೆ ಸಾವಿರ ರೂಪಾಯಿ ಮೌಲ್ಯದ ಔಷಧಿಯನ್ನು ತಂದಿತ್ತು.

ಸುಂದರಕಲಿ ಬದುಕುವ ಭರವಸೆ ಯಾರಿಗೂ ಇರಲಿಲ್ಲ. ಆದರೆ ಸಾಯುವ ಮುನ್ನ ಅದರ ವೇದನೆಯನ್ನಾದರೂ ಕಡಿಮೆಗೊಳಿಸಬೇಕೆಂಬುದು ಆ ತಂಡದ ಉದ್ದೇಶ. ಡಾಬರ್ ಕಂಪನಿ ಅದಾಗಲೇ ಗಜರಾಣಿಯ ಅಂತ್ಯಸಂಸ್ಕಾರದ ತಯಾರಿಗೆ ತೊಡಗಿಯಾಗಿತ್ತು. ಆಳವಾದ ಕುಣಿ ಸಿದ್ಧವಾಗಿತ್ತು. ಮೃತದೇಹದ ಮೇಲೆ ಸುರಿಯಲು ಹತ್ತು ಚೀಲ ಉಪ್ಪು ತಂದಿರಿಸಿದ್ದರು. ಇದರಿಂದ ತುಂಬ ಸಿಡಿಮಿಡಿಗೊಂಡರು ಪ್ರೊ. ನಿಗಮ್. ಕುಣಿಯನ್ನು ಮುಚ್ಚಿಬಿಡುವಂತೆ ಆದೇಶವಿತ್ತರು.

ಶಹಾಬುದ್ದೀನ್‌ಗೆ ಗೊತ್ತಿತ್ತು - 'ಶೂಟ್ ಆರ್ಡರ್' ಬಂದ ತಕ್ಷಣವೆ ಗುಂಡುಗಳು ಸುಂದರಕಲಿಯ ಜೀವಹರಣ ಮಾಡುತ್ತವೆಂದು.





''ನಿತ್ಯವೂ 30 ಬಕೆಟ್ ನೀರನ್ನು ಕೊಳಿವೆ ಬಾವಿಯಿಂದೆತ್ತಿ ಅದರ ಮೈ ತೊಳೆಸಿ ನೀರು ಕುಡಿಸಿ, ಅಕ್ಕಿ-ಬೆಲ್ಲ-ಕಬ್ಬು ತಿನ್ನಿಸಿ, ಅಡ್ಡಾಡಿಸುತ್ತಿದ್ದೆ. ಸುಂದರಕಲಿಯ ಮೈ ಎಂದರೆ ನನಗೆ ಮೆದುವಾಸಿನಂತೆ. ಅದರ ಮೇಲೆ ನಾನೆಂದೂ ಚಪ್ಪಲಿ ಧರಿಸಿ ಸವಾರಿ ಮಾಡಲಿಲ್ಲ. ತಲೆಗೊಂದು ಟೋಪಿ ಧರಿಸಿ ಇಲ್ಲವೆ ರುಮಾಲಿನಂಥ ಬಟ್ಟೆ ಸುತ್ತಿಕೊಂಡ ಹೊರತು ನಾನದರ ಮೇಲೆ ಕುಳಿತುಕೊಳ್ಳಲಿಲ್ಲ. ಇಂದು ತಲೆಗೆ ಬಟ್ಟೆ ಸುತ್ತಿಕೊಂಡು ಅದರ ಅಂತ್ಯಸಂಸ್ಕಾರಕ್ಕೆ ಅಣಿಯಾಗಬೇಕಿದೆ'' ಎಂದು ದುಃಖಿಸಿದ. ಹೌದು. 'ಶೂಟ್ ಆರ್ಡರ್'ಗಾಗಿ ಕಾದಿದ್ದವರು ಮೂರು ಜನ. ಆದರೆ ಆ ಮೂವರಿಗೂ ತಾವು ಸುಂದರಕಲಿಯನ್ನು ಗುಂಡಿಕ್ಕಿ ಕೊಲ್ಲಬೇಕಾಗಿದೆ ಎಂಬುದೇ ಗೊತ್ತಿರಲಿಲ್ಲ. ಬಹುಶಃ ಅಲ್ಲಿ ಸೇರಿದ ಜನಜಂಗುಳಿ[illegible]ನಾದರೂ ಗಲಾಟೆ - ಹಿಂಸೆಗೆ ತೊಡಗಿದರೆ ಇರಲಿ ಎಂದು ತಮ್ಮನ್ನು ಕರೆಸಿಕೊಂಡಿರಬೇಕೆಂದುಕೊಂಡಿದ್ದರಂತೆ ಪಾಪ. ಆದರೆ ನಿಜ ಸಂಗತಿ ತಿಳಿದಾಗ ಆ ಮೂವರೂ ಒಳಗೊಳಗೇ ನಡುಗಿದರು. ಅವರಲ್ಲೊಬ್ಬ ಹಿಂದೂ. ಕೈಲಿದ್ದ ಬಂದೂಕನ್ನು ಎಸೆದವನೇ ಆನೆಗೆ ಅಷ್ಟ ನಮಸ್ಕಾರ ಹಾಕಿದನಷ್ಟೇ ಅಲ್ಲ, ಸುಂದರಕಲಿಯ ಹಣೆಗೆ ತಿಲಕ ವಿಟ್ಟು ಪೂಜೆ ಸಲ್ಲಿಸಿದ. ''ಯಾರು ಏನೇ ಹೇಳಲಿ, ನಾನು ಈ ಪಾಪದಲ್ಲಿ ಭಾಗಿಯಾಗಲಾರೆ'' ಎಂದಾತ ಅಲ್ಲಿಂದ ಹೊರಟುಹೋದ.

ಸುಂದರಕಲಿಗೆಂದೆ ದಿಲ್ಲಿ ನಗರಪಾಲಿಕೆ ದೊಡ್ಡದೊಂದು ಶಾಮಿಯಾನಾ ಹಾಕಿಸಿತು. ವಿದ್ಯುತ್ ಸರಬರಾಜು ಮತ್ತು ಗಜ ಚಿಕಿತ್ಸೆಯನ್ನು ನೋಡಬರುವವರ ನಿಯಂತ್ರಣಕ್ಕಾಗಿ ಬಿದಿರು ಕಂಬಗಳ ಬೇಲಿ ಹಾಕಿಸುವ ಜವಾಬ್ದಾರಿಯನ್ನೂ

ಹೊತ್ತುಕೊಂಡಿತು. ದಿಲ್ಲಿ ಕ್ಯಾಂಟೋನ್ಮೆಂಟಿನ ಸೈನ್ಯತುಕಡಿಯ ವರ್ಕ್‌ಶಾಪ್ ಮ್ಯಾನೇಜರ್ ಲೆ.ಕ. ಎನ್.ಆರ್. ಶರ್ಮಾ ಕೂಡಲೇ ಹತ್ತು ಟನ್ ಭಾರ ಎತ್ತುವ ಸಾಮರ್ಥ್ಯದ ಕ್ರೇನನ್ನು ಕಳಿಸಿಕೊಟ್ಟರು.

ಜುಲೈ ತಿಂಗಳ ಮೊದಲ ದಿನ. ಹಿಸಾರದಿಂದ ಮತ್ತೊಂದು ವೈದ್ಯರ ತಂಡ ದಿಲ್ಲಿಗೆ ಬಂದಿಳಿಯಿತು. ಆನೆಯನ್ನು ಎಬ್ಬಿಸಿ ನಿಲ್ಲಿಸಿ ಚಿಕಿತ್ಸೆ ನಡೆಸಬೇಕಿತ್ತು. ಕ್ರೇನಿನಿಂದೆತ್ತಿ ಅದರ ಸ್ಥಳವನ್ನು ತುಸು ಬದಲಿಸಿದರು. ಮೊದಲು ಸುಂದರಕಲಿಗೆ ಬಿಸಿನೀರ ಸ್ನಾನ. ಇದಕ್ಕೆ ತಗುಲಿದ ಅವಧಿ ಮೂರು ಗಂಟೆಗಳು. ಬಿಸಿನೀರು ಮೈಗೆ ಬಿದ್ದುದರಿಂದ ಆನೆಯ ಕಾಲಿನ ಬಾವು ಇಳಿಯಿತು. ಶಸ್ತ್ರಕ್ರಿಯೆಯ ಸಾಮಗ್ರಿಗಳನ್ನು ಆ್ಯಂಟಿಬಯಾಟಿಕ್‌ಗಳಿಂದ ತೊಳೆದುಕೊಂಡು ಸಿದ್ಧವಾಯಿತು ವೈದ್ಯರ ತಂಡ. ಮೊದಲು ಸುಂದರಕಲಿಗೆ ಇಪ್ಪತ್ತು ಲೀಟರ್ ಗ್ಲೂಕೋಜ್ ಕುಡಿಸಲು ಸೂಚಿಸಿದರು ಪ್ರೊ. ನಿಗಮ್. ಅಂದು ರಾತ್ರಿಯ ಹೊತ್ತಿಗೆ ಗಾಯಗಳ ಡ್ರೆಸಿಂಗ್ ಮುಗಿಯಿತು.

ಬೆಳಗಿನ ಹೊತ್ತಿಗೆ ಆನೆಯ ಜ್ವರ 105ರಿಂದ 98 ಡಿಗ್ರಿಗಳಿದ್ದುದು ಕಂಡು ಹಿರಿಹಿಗ್ಗಿತು ವೈದ್ಯರ ತಂಡ. ಶಹಾಬುದ್ದೀನ್ ಮತ್ತು ಪರಿವಾರಕ್ಕೂ ಸಂತಸ. ಸುಂದರಕಲಿಯ ಚಿಕಿತ್ಸೆಗೀಗ ಅವರೆಲ್ಲರಿಗೂ ಇಮ್ಮಡಿ ಉತ್ಸಾಹ. ಅಂದು ಮಧ್ಯಾಹ್ನ ನಾಲ್ಕಕ್ಕೆ ಮುಖ್ಯ ಶಸ್ತ್ರಕ್ರಿಯೆಯ ಆರಂಭ. ಮುರಿದ ಕಾಲನ್ನು ಹಗ್ಗವೊಂದರಿಂದ ಬಿಗಿದು ಅದರ ಇನ್ನೊಂದು ತುದಿಯನ್ನು ಎಂಬ್ಯುಲೆನ್ಸ್ ವ್ಯಾನಿಗೆ ಕಟ್ಟಲಾಯಿತು. ವ್ಯಾನು ತುಸು ಚಲಿಸಿ ಕಾಲು ಎಳೆದಂತಾಗಿ ವೈದ್ಯರಿಗೆ ಮುರಿದ ಮೂಳೆಯನ್ನು ಅದರ ಸರಿ ಸ್ಥಾನಕ್ಕೆ ಕೂಡಿಸಲು ಅನುಕೂಲವಾಯಿತು. ನಂತರ ಸ್ಟೇನ್‌ಲೆಸ್‌ಸ್ಟೀಲ್ ಪಿನ್ನುಗಳನ್ನು ಹಾಕುವ ಕೆಲಸ. ಈ ಪ್ರಕ್ರಿಯೆಯಲ್ಲಿ ಇನ್ನಷ್ಟು ಕೊಳೆತ ಮಾಂಸ ಹೊರಬಿತ್ತು. ಆ ಗಾಯಕ್ಕೆ ಮತ್ತಷ್ಟು ಸೋಂಕುವಿರೋಧಕ ಔಷಧಿ ತುಂಬಿ 30 ಸೆಂ.ಮೀಟರ್ ಉದ್ದದ ಮೂರು ಸ್ಟೇನ್‌ಲೆಸ್‌ಸ್ಟೀಲಿನ ಪಿನ್ನುಗಳನ್ನು ಮೂಳೆಯ ಮೇಲೂ, ಮೂರು ಪಿನ್ನುಗಳನ್ನು ಕೆಳಗೂ ಹಾಕಿ, ಪೂರ್ತಿ ಕಾಲಿಗೆ ನಾಲ್ಕು ದಪ್ಪ ಪ್ಲಾಸ್ಟರ್ ಮೆತ್ತಲಾಯಿತು. ವಿದ್ಯುತ್ ಹೀಟರಿನಿಂದ ಪ್ಲಾಸ್ಟರನ್ನು ಒಣಗಿಸಿ, 150 ಮೀಟರ್ ಬ್ಯಾಂಡೇಜ್ ಬಟ್ಟೆ ಸುತ್ತಿದ ಮೇಲೆ ಮಳೆಯಿಂದ ರಕ್ಷಿಸಲು ಕಾಲಿಗೆ ಪಾಲಿಥಿನ್ ಶೀಟ್‌ಗಳನ್ನು ಹಾಕಿದರು.

ಮರುದಿನ ಆ ಕಾಲಿಗೆ 120 ಸೆಂ.ಮೀಟರ್ ಎತ್ತರದ ಸ್ಟೀಲ್ ಬೂಟನ್ನು ತೊಡಿಸುವ ಕೆಲಸ. ಅದರ ಕೆಳಗೆ ಆಧಾರಕ್ಕೆ ಲಾರಿ ಟಯರುಗಳು. ಆ ಕಾಲು ಅಲುಗಾಡದಂತೆ ಮಾಡಬೇಕಲ್ಲ. ಇದರ ಮೇಲೆ ಮತ್ತೆ ಪ್ಲಾಸ್ಟರ್ ಲೇಪನ. ಅದು ಗಟ್ಟಿಯಾಗಿ ಅಂಟಿಕೊಂಡ ಮೇಲೆ ಸುಂದರಕಲಿಯನ್ನು ನಾಲ್ಕು ಕಾಲುಗಳ ಮೇಲೆ ನಿಲ್ಲಿಸಬೇಕು.

ಕ್ರೇನಿನ ಮೂಲಕ ಆನೆಯನ್ನು ನಿಲ್ಲಿಸುವ ಕೆಲಸವನ್ನು ನೋಡಲು ಎಂದಿಗಿಂತ ಹೆಚ್ಚು ಜನ ಸೇರಿದರು. ವೈದ್ಯ ತಂಡದೊಂದಿಗೆ ಒಂದಿಬ್ಬರು ಇಂಜನಿಯರ್‌ಗಳು, ಶಹಾಬುದ್ದೀನ ಮತ್ತು ಅವರ ಪರಿವಾರ ಸುಂದರಕಲಿಗೆ ಎದ್ದು ನಿಂತುಕೊಳ್ಳಲು ಪ್ರೋತ್ಸಾಹವೀಯತೊಡಗಿದರು. ಶಹಾಬುದ್ದೀನನ ಹೆಂಡತಿ ಜಮಾಲೋ ಮತ್ತು ಅವಳ ಅತ್ತಿಗೆ ಆನೆಯ ಮುಖಕ್ಕೆ ಮುಕುರುತ್ತಿದ್ದ ನೊಣಗಳನ್ನು ಜಾಡಿಸುತ್ತಿದ್ದರು. ಆದರೆ ಸುಂದರಕಲಿ ಮಾತ್ರ ತನಗಾಗಿ ಸಿದ್ಧಪಡಿಸಿದ್ದ ಆ ಹುಲ್ಲುಗಾದಿಯ ಮೇಲೆ ನಿಶ್ಚಲವಾಗಿ ಮಲಗಿತ್ತು. ಸಂಜೆ ಏಳರಹೊತ್ತು. ಕ್ರೇನಿನ ಹುಕ್ಕಿಗೆ ಆನೆಯ ಹೊಟ್ಟೆ-ಕಾಲು-ಕುತ್ತಿಗೆ ಕಟ್ಟಿದ ಹಗ್ಗಗಳನ್ನು ಬಿಗಿಯಲಾಯಿತು. ಕ್ರೇನ್ ಮೆಲ್ಲನೆ ಏಳಲಾರಂಭಿಸಿತು. ಆದರೆ... ಪಟ್ಟನೆ ಕುತ್ತಿಗೆಯ ಹಗ್ಗ ಹರಿದುಬಿಡಬೇಕೆ! ಏಳುವರೆ ಸೆಂಟಿಮೀಟರ್ ದಪ್ಪದ ಹರಿದ ಹಗ್ಗವನ್ನು ಜೋಡಿಸಿ ಗಂಟು ಹಾಕುವುದು ಸುಲಭವೆ? ಇದೇ ಹೊತ್ತಿಗೆ ಆನೆಯ ಸಮತೋಲ ಕಾಯ್ದುಕೊಳ್ಳಬೇಕಾದ್ದೂ ಮುಖ್ಯವಾಗಿತ್ತು.

ಆನೆ ನೆಲಕ್ಕೆ ನಾಲ್ಕು ಕಾಲುಗಳನ್ನು ಹಚ್ಚಿ ಎದ್ದುನಿಂತಂತೆ ಕ್ರೇನು ಎತ್ತಿ ಹಿಡಿದಾಗ ಸಮಯ ರಾತ್ರಿ ಎಂಟೂಕಾಲು. ಸುಂದರಕಲಿ ಒಮ್ಮೆ ಕಿರಿಚಿಕೊಂಡಿತು. ಶಹಾಬುದ್ದೀನ ಮತ್ತು ಆಶ್ರಫ್ ಅದರ ಕಿವಿಯಲ್ಲಿ ಏನೇನೋ ಗೊಣ ಗುತ್ತ ಪ್ರೋತ್ಸಾಹಿಸುತ್ತಿದ್ದರು. ಆನೆಯ ನೇತು ಬಿದ್ದ ತಲೆಯನ್ನೆತ್ತಿ ಹಿಡಿಯಲು ಸಹಾಯ ಮಾಡುತ್ತ ಆಧಾರವಾಗಿ ನಿಂತರು ಜಮಾಲೋ ಮತ್ತು ಅಖ್ತರಿ (ಶಹಾಬುದ್ದೀನನ ಅಕ್ಕ). ತಲೆಯನ್ನೆತ್ತಿಕೊಳ್ಳಲು ಪ್ರಯತ್ನಿಸುತ್ತಿದ್ದ ಸುಂದ ರಕಲಿಗೆ ಶಹಾಬುದ್ದೀನ ''ವಾಹ್ ಬೇಟಿ, ವಾಹ್....'' ಎನ್ನುತ್ತ ಮೈ ಸವರುತ್ತಿದ್ದ.

ಸುಂದರಕಲಿ ತಲೆಯನ್ನೆತ್ತಿ ಹಿಡಿಯಿತು.

ಸುತ್ತ ಸೇರಿದ ಸಾವಿರಾರು ಜನ ಹರ್ಷೋ ದ್ಗಾರದೊಂದಿಗೆ ಕರತಾಡನ ಮಾಡಿದರು. ವೈದ್ಯರು-ಇಂಜನಿಯರ್‌ಗಳಿಗೆ ತಮ್ಮ ಕೆಲಸ ಸಫ ಲವಾದ ಸಮಾಧಾನ. ಶಹಾಬುದ್ದೀನ ಮತ್ತು ಪರಿವಾರದವರ ಕಣ್ಣುಗಳಲ್ಲಿ ಆನಂದಾಶ್ರು.

''ಮಾಲಿಶ್...ಮಾಲಿಶ್'' ಎಂದು ಕೂಗಿ ದರು ಪ್ರೊ. ನಿಗಮ್.

ತುಂಬ ದಿನಗಳಿಂದ ಒಂದೆಡೆ ಬಿದ್ದುಕೊಂಡೇ ಇದ್ದುದರಿಂದಲೂ ಶರೀರದ ಸಂಪೂರ್ಣ ಭಾರ ಒಂದೆಡೆಗೆ ವಾಲಿದ್ದರಿಂದಲೂ ರಕ್ತ ಸಂಚಲನಕ್ಕೆ ಅನುವು ಮಾಡಲು ಈ ಮಾಲಿಶ್. ಶಹಾಬು ದ್ದೀನ ಮತ್ತು ಪರಿವಾರ ಅದಕ್ಕೆ ತಯಾರಾದರು. ಗೋಣಿಚೀಲದ ತುಂಡುಗಳನ್ನು ಆನೆಯ ಕಾಲು-ಮೈ ತಿಕ್ಕಲು ಬಳಸಿದರು. ರಕ್ತ ಸಂಚಾರ ದಿಂದಾಗಿ ಆನೆಗೆ ತುಸು ಹಾಯೆನಿಸಿ ಕಾಲೂರತೊ ಡಗಿತು. ಮುರಿದ ಕಾಲೊಂದನ್ನುಳಿದು ಮೂರು ಕಾಲುಗಳು ನೆಲದ ಮೇಲೆ ನಿಂತವು. ಕ್ರೇನ್ ಇದ್ದರೂ ಗರ್ಡರ್ ಸಡಿಲಾಗಿ ಸುಂದರಕಲಿ ಉರುಳಿಬೀಳುವ ಸಾಧ್ಯತೆಯಿದೆ ಎನಿಸಿತು ಇಂಜ ನಿಯರ್‌ಗಳಿಗೆ. ಅದಕ್ಕಾಗಿ ಸೂಕ್ತ ಕ್ರಮಗಳನ್ನು ಕೈಗೊಳ್ಳುತ್ತಿದ್ದ ಹಾಗೆಯೆ ಆನೆ ತನ್ನ ಸೊಂಡಿ ಲನ್ನು ಅಲ್ಲಾಡಿಸಿ ನೆಲಕ್ಕೆ ತಗುಲಿಸಿದ್ದರಿಂದ ಅದು ನೀರಡಿಸಿರಬೇಕೆಂದುಕೊಂಡರು ಪ್ರೊ. ನಿಗಮ್. ಅವರ ಅಭಿಪ್ರಾಯದಂತೆ ನೀರು ತುಂಬಿದ ಬಕೆ ಟ್‌ನ್ನು ಎದುರಿಗಿರಿಸಿದರೂ ಸುಂದರಕಲಿ ನೀರು ಕುಡಿಯಲಿಲ್ಲ. ಕ್ರೇನಿಗೆ ನೇತಾಡಿಕೊಂಡೇ ಹದಿ ನೈದು ನಿಮಿಷ ನಿಂತುಕೊಂಡಿತು ಆನೆ.

ತನ್ನ ಹಿಂದಿನ ಕಾಲುಗಳನ್ನದು ಸರಿಯಾಗಿ ನೆಲಕ್ಕೂರಿತ್ತು. ಆದರೆ ಮುಂಗಾಲುಗಳನ್ನೂ ರಲು ಅದಕ್ಕೇಕೋ ಹಿಂಜರಿಕೆ. ಆ ಕಾಲುಗಳಿಗೂ ಮಾಲಿಶ್ ಮಾಡಿದ ಶಹಾಬುದ್ದೀನ. ತುಸು ಗೆಲುವು ಕಾಣಿಸಿತು ಸುಂದರಕಲಿಯ ಮುಖ ದಲ್ಲಿ. ಮೊರದಂಥ ಕಿವಿಗಳನ್ನು ಫಡಫಡಾಯಿಸಿ ಎಡಮುಂಗಾಲನ್ನು ಬೂಟುಸಹಿತ ನೆಲಕ್ಕೂರಲೆ ತ್ನಿಸಿತು. ಆಶ್ರಫ್ ಒಂದಷ್ಟು ಹುಲ್ಲನ್ನು ತಂದು ಸೊಂಡಿಲಲ್ಲಿಟ್ಟ. ಹುಲ್ಲನ್ನು ಬಾಯಿಗೆ ತುರುಕಿ ಕೊಂಡಿತಾದರೂ ನುರಿಸಲಿಲ್ಲ.

ಅದರ ಕಣ್ಣುಗಳಲ್ಲಿ ದಳದಳನೆ ನೀರು ಸುರಿ ಯಲಾರಂಭಿಸಿತು. ಶಹಾಬುದ್ದೀನನನ್ನೂ ಆತನ ಪರಿವಾರವನ್ನೂ ತನಗಾಗಿ ಶ್ರಮಿಸುತ್ತಿರುವ ವೈದ್ಯರು-ಇಂಜನಿಯರನ್ನೂ ಒಮ್ಮೆ ಗಮನ ವಿಟ್ಟು ನೋಡಿತು. ಅದೆಂಥ ಅವ್ಯಕ್ತ ವೇದ ನೆಯೋ ಪಾಪ..

ಒಮ್ಮಿಂದೊಮ್ಮೆಲೇ ಅದರ ಶರೀರ ಸಡಿಲು ಬಿತ್ತು. ಕಣ್ಣುಗಳು ಸ್ಥಿರವಾದವು. ಶಹಾಬುದ್ದೀ ನನ ಎದೆ ಬಡಿದುಕೊಳ್ಳತೊಡಗಿತು. ''ಸುಂ ದರ್..ಸುಂದರ್.. ಬೇಟಿ'' ಎಂದು ಕರೆದ, ''ಕಣ್ಣು ತೆರೆ'' ಎಂದು ಗೋಗೆರೆದ. ಆತನ ಹೆಂಡತಿ ಜಮಾಲೋ, ಅಕ್ಕ ಅಖ್ತರಿ ಎಲ್ಲರೂ ಅಳತೊಡಗಿದರು. ಇವಾವುದರೆಡೆಯೂ ಲಕ್ಷ್ಯ ವಿರದಂತೆ ಸುಂದರಕಲಿ ಈ ಲೋಕದಿಂದ ನಿರ್ಗ ಮಿಸಿತ್ತು. ■



ಇದು ಅವರ ಜನ್ಮ ಶತಮಾನೋತ್ಸವ ವರ್ಷ

# ಡಾ.ಜೆ.ಸಿ. ಕುಮಾರಪ್ಪ : ಗಾಂಧಿ ಘರಾಣೆಯ ಪ್ರತಿನಿಧಿ

• ಚಲ

> ತಡಿಕೆಗಳ ಮೇಲೆ ಜೇಡಿಮಣ್ಣು ಮೆತ್ತಿದ ಗೋಡೆ, ನಾಡಹಂಚಿನ ಸೂರು, ಸಗಣಿಯಿಂದ ಸಾರಿಸಿದ ನೆಲ, ಸುತ್ತಲೂ ಗ್ರಾಮಕೈಗಾರಿಕೆಗಳ ಸಲಕರಣೆಗಳು. ಒಂದು ಕೋಣೆಯಲ್ಲಿ ಪುಸ್ತಕ ಭಾಂಡಾರ, ನೆಲಕ್ಕೆ ಚಾಪೆ, ಶುಭ್ರವಾದ ಖಾದಿ ಉಡುಪು, 'ದೋತಿ ಜಾಮ' - ಗ್ರಾಮೀಣ ಚಪ್ಪಲಿ... ಇದು ಪ್ರತಿಭಾನ್ವಿತ ಅರ್ಥಶಾಸ್ತ್ರಜ್ಞ ಡಾ.ಜೆ.ಸಿ. ಕುಮಾರಪ್ಪನವರು ಮೂವತ್ತು ವರ್ಷ ಬದುಕಿದ ರೀತಿ.

"ಅವರಿಗೆ ನಾನಾವ ಶಿಕ್ಷಣವನ್ನೂ ಕೊಡಲಿಲ್ಲ. ನನ್ನಲ್ಲಿ ಬರುವ ವೇಳೆಗೆ ಸಿದ್ಧಹಸ್ತರಾಗಿಯೇ ಬಂದರು."

"ಅವರು ತಮಿಳುನಾಡಿನವರು. ಮೆಣಸಿನಕಾಯಿ ಅವರಿಗೆ ಪ್ರಿಯ. ಅವರ ಭಾಷೆ ಖಾರವಾಗಿದ್ದೀತು. ಆದರೆ ಯಾವ ಅಸತ್ಯವೂ ಅವರ ಬರವಣಿಗೆಯಲ್ಲಿ ಸುಳಿಯುವುದಿಲ್ಲ."

ಎರಡು ಬೇರೆ ಬೇರೆ ಸಂದರ್ಭಗಳಲ್ಲಿ ಮಹಾತ್ಮಾ ಗಾಂಧಿಯವರು ಮೇಲಿನ ಮಾತುಗಳನ್ನು ಆಡಿದ್ದಾರೆ.. ಮಹಾತ್ಮರಿಂದ ಇಂತಹ ಪ್ರಶಂಸೆಗೆ ಪಾತ್ರರಾದ 'ಅವರು' ಬೇರಾರೂ ಅಲ್ಲ; ಡಾ. ಜೋಸೆಫ್ ಕಾರ್ನಿಲಿಯಸ್ ಕುಮಾರಪ್ಪ.

'ಶಾಶ್ವತ ಅರ್ಥಶಾಸ್ತ್ರ'ದ ಕರ್ತೃ ಕುಮಾರಪ್ಪ ಇಂದು ನಮ್ಮೊಂದಿಗಿದ್ದಿದ್ದರೆ ಅವರಿಗೆ ನೂರು ತುಂಬುತ್ತಿತ್ತು (4.1.1892). ಅಂತಹ ಭಾಗ್ಯ ಈ ನಾಡಿಗಿಲ್ಲವಾದರೂ ಕುಮಾರಪ್ಪನವರು ಬಿಟ್ಟು ಹೋದ ಬದುಕು-ಬರಹಗಳು ಅವರ ನೆನಪನ್ನು ಶಾಶ್ವತವಾಗಿ ಉಳಿಸುವ ತಾಕತ್ತನ್ನು ಹೊಂದಿರುವುದು ಸುಳ್ಳಲ್ಲ.

ಕುಮಾರಪ್ಪ ಜನಿಸಿದ್ದು ತಂಜಾವೂರಿನಲ್ಲಿ. ತಂದೆ ಎಸ್.ಡಿ. ಕಾರ್ನಿಲಿಯಸ್ ಅಲ್ಲಿನ ಪಿ.ಡಬ್ಲ್ಯೂ.ಡಿ.ಯಲ್ಲಿ ನೌಕರರಾಗಿದ್ದರು. ಸಾಧಾರಣ ಮಧ್ಯಮ ವರ್ಗದ ಅವರ ಸಂಸಾರದೊಳಗೆ 'ಚೆಲ್ಲದೊರೆ' (ಕುಮಾರಪ್ಪನವರನ್ನು ಮನೆಯಲ್ಲಿ ಕೂಗುತ್ತಿದ್ದ ಹೆಸರು) ಪ್ರವೇಶಿಸಿದ್ದು ಒಂಬತ್ತನೇ ಮಗುವಾಗಿ. ಕ್ರೈಸ್ತ ಧರ್ಮದ ಸೇವಾನಿಷ್ಠೆಯಲ್ಲಿ ಅತೀವ ಶ್ರದ್ಧೆಯಿರಿಸಿದ್ದ ಅವರ ತಾಯಿ ಮಕ್ಕಳನ್ನೂ ಅದೇ ದಾರಿಯಲ್ಲಿ ಕೈ ಹಿಡಿದು ನಡೆಸಿದರು. ಕುಮಾರಪ್ಪನವರೇ ಹೇಳಿಕೊಂಡಂತೆ ಮಾತೃಪ್ರೇಮದ ಅಧಿಕಾರದಿಂದ ತಮಗೆ ದೊರೆತ ಗೃಹಶಿಕ್ಷಣ ಅತ್ಯಮೌಲ್ಯ.

ಶಾಲಾದಿನಗಳಲ್ಲೇ 'ಬೆಳೆವ ಸಿರಿ'ಯನ್ನು ಪ್ರಕಟಪಡಿಸಿದ್ದ ಕುಮಾರಪ್ಪ ಮುಂದೆ ತಮ್ಮ ವ್ಯಾಸಂಗ ಕ್ಷೇತ್ರವನ್ನು ಲಂಡನ್ನಿಗೆ ವರ್ಗಾಯಿಸಿಕೊಂಡು ಅಕೌಂಟನ್ಸಿಯಲ್ಲಿ ಪದವಿ ಪಡೆದರು. ಅನಂತರ ಅಮೆರಿಕದ ಸಿರಾಕ್ಯೂಸ್ ವಿ.ವಿ.ದ ಪದವಿ (ಸಾರ್ವಜನಿಕ ಆಡಳಿತ)ಯನ್ನು ತಮ್ಮದಾಗಿಸಿಕೊಂಡರು. ಭಾರತದ ಸಾಮ್ರಾಜ್ಯಶಾಹಿಯ ಬಂಡವಾಳಶಾಹಿವರ ಘೋರಣೆಯಿಂ



ಗಾಂಧೀಜಿಯ ಸಂಪರ್ಕದಿಂದ ಭಾರತೀಯತೆಯ ದೀಕ್ಷೆ ದಕ್ಕಿತೆನ್ನಬೇಕು. ಅಲ್ಲಿಂದ ಅವರ ಬದುಕಿನ ನಡಿಗೆ ಗ್ರಾಮಾಭಿಮುಖ.

ತಡಿಕೆಗಳ ಮೇಲೆ ಜೇಡಿ ಮಣ್ಣು ಮೆತ್ತಿದ ಗೋಡೆ, ನಾಡಹಂಚಿನ ಸೂರು, ಸಗಣಿಯಿಂದ ಸಾರಿಸಿದ ನೆಲ, ಸುತ್ತಲೂ ಗ್ರಾಮಕೈಗಾರಿಕೆಗಳ ಸಲಕರಣೆಗಳು. ಇವುಗಳಿಂದ ಸುತ್ತುವರಿಯಲ್ಪಟ್ಟ ವ್ಯಕ್ತಿ ಸದಾ ಕಾರ್ಯನಿರತ. ಒಂದು ಕೋಣೆಯಲ್ಲಿ ಪುಸ್ತಕ ಭಾಂಡಾರ, ನೆಲಕ್ಕೆ ಚಾಪೆ, ಶುಭ್ರವಾದ ಖಾದಿ ಉಡುಪು, 'ಧೋತಿಜಾಮ', ಗ್ರಾಮೀಣ ಚಪ್ಪಲಿ... ಇದು ಪ್ರತಿಭಾನ್ವಿತ ಅರ್ಥಶಾಸ್ತ್ರಜ್ಞ ಡಾ. ಜೆ. ಸಿ. ಕುಮಾರಪ್ಪನವರು ಮೂವತ್ತು ವರ್ಷ ಬದುಕಿದ ರೀತಿ.

ದಾಗಿ ಉಂಟಾಗಿರುವ ಭಾರತದ ಹಳ್ಳಿಗಳ ಶೋಷಣೆ ಹಾಗೂ ಬಡತನ, ನಿರುದ್ಯೋಗಗಳ ಹೆಚ್ಚಳದ ಬಗೆಗೆ ಕುಮಾರಪ್ಪನವರು ಆಳವಾಗಿ ಸಂಶೋಧನೆ ನಡೆಸಿದ್ದರು. ಅವರ ಸ್ವತಂತ್ರ ದೃಷ್ಟಿಕೋನದ ಮೂಸೆಯಿಂದ ''ಭಾರತದ ಬಡತನ ಮತ್ತು ಅದರ ಹಣಕಾಸು ವ್ಯವಸ್ಥೆ'' ಕೃತಿ ಹೊರಬಂತು. ತಾತ್ವಿಕ ವಿಶ್ಲೇಷಣೆಯ ತಾಲೀಮಿನಲ್ಲಿ ಅವರಿಗೆ ಭಾರತದ ಆರ್ಥಿಕ ದಾಸ್ಯವೇನೋ ಕಣ್ಣಿಗೆ ಕಟ್ಟಿತು. ಆದರೆ ಅದರ ಪ್ರತ್ಯಕ್ಷ ಪರಿಚಯವಾದದ್ದು ಅವರು ವಿಶೇಷ ರೀತಿಯಲ್ಲಿ ಗಾಂಧಿಯವರ ಸಂಪರ್ಕಕ್ಕೆ ಬಂದ ತರುವಾಯ.

ಮುಂಬಯಿಗೆ ಬಂದಿದ್ದ ಗಾಂಧಿಯವರನ್ನು 'ಸಹಜ'ವಾಗಿ ಭೇಟಿಯಾಗುವ ಪ್ರಯತ್ನ ಮಾಡಿ ವಿಫಲರಾದ ಜೆ.ಸಿ. ಕುಮಾರಪ್ಪ ಕೆಲದಿನಗಳ ನಂತರ ಗಾಂಧೀಜಿಯ ಆಣತಿ ಮೇರೆಗೆ ಸಾಬರ್ಮತಿ ಆಶ್ರಮದಲ್ಲಿ ಅವರನ್ನು ಭೇಟಿಯಾಗಿ ತಮ್ಮ ಬದುಕಿನ ಬಹುಮುಖ್ಯ ಕವಲನ್ನು ಕಂಡುಕೊಂಡರು.

ಇಂಗ್ಲಿಷ್ ಸಂಸ್ಕೃತಿಗೆ ಮಾರುಹೋದ ಭಾರತೀಯರಂತೆ ವರ್ತಿಸುತ್ತಿದ್ದ ಕುಮಾರಪ್ಪನವರಿಗೆ

## ಕುಮಾರಪ್ಪನವರ ಕೃತಿಗಳು

*1. ಗ್ರಾಮೋದ್ಧಾರ ಚಳವಳಿ ಏಕೆ?*
*2. ಶಾಶ್ವತ ಅರ್ಥಶಾಸ್ತ್ರ*
*3. ಗಾಂಧೀವಾದದ ಆರ್ಥಿಕ ಚಿಂತನೆ.*
*4. ಗಾಂಧೀವಾದದ ಬದುಕಿನ ಹಾದಿ.*
*5. ಸಾರ್ವಜನಿಕ ಹಣಕಾಸು ಮತ್ತು ನಮ್ಮ ಬಡತನ*
*6. ಭಾರತೀಯ ಸಾರ್ವಜನಿಕ ಋಣಭಾರದ ಸರ್ವೇಕ್ಷಣೆ*
*7. ಕ್ಲೈವ್‌ನಿಂದ ಕೇನ್ಸ್‌ವರೆಗೆ*
*8. ಪರಿಹಾರ ಕಾಮಗಾರಿಯ ಸಂಘಟನೆ ಮತ್ತು ಲೆಕ್ಕ ಪತ್ರ*
*9. ಗ್ರಾಮಾಭಿವೃದ್ಧಿಯ ಸಮಗ್ರ ಯೋಜನೆ*
*10. ವ್ಯಷ್ಟಿ ಆಧಾರಿತ ಅಹಿಂಸಾತ್ಮಕ ಪ್ರಜಾಸತ್ತೆ*
*11. ಹಣದುಬ್ಬರ*

*ಇವಲ್ಲದೆ ಪ್ರವಾಸ, ಸರ್ವೇಕ್ಷಣೆ, ಧರ್ಮ ಕುರಿತಾದ ಅನೇಕ ಕೃತಿಗಳು ಹಾಗೂ ಕೆಲವು ಪ್ರಬಂಧಗಳು ಕುಮಾರಪ್ಪನವರಿಂದ ರಚಿತಗೊಂಡಿವೆ.*

## ಇಂದಿಗೂ ಪ್ರಸ್ತುತ

*ಕುಮಾರಪ್ಪನವರು ದಶಕಗಳ ಹಿಂದೆಯೇ ಗ್ರಹಿಸಿದ ಗ್ರಾಮಾಭಿವೃದ್ಧಿಯ ಮರ್ಮ ಇವತ್ತಿಗೂ ಪ್ರಸ್ತುತತೆಯನ್ನು ಕಳೆದುಕೊಂಡಿಲ್ಲವೆಂಬುದಕ್ಕೆ ಈ ಕೆಳಗಿನ ಎರಡು ಅಂಶಗಳನ್ನು ಗಮನಿಸಬಹುದು.*

★ *ದೇಶದಲ್ಲಿ ಅದರಲ್ಲೂ ಬಹುಸಂಖ್ಯಾತ ಸಾಮಾನ್ಯರಿರುವ ಗ್ರಾಮಗಳಲ್ಲಿ ಜೀವನದ ಪ್ರಾಥಮಿಕ ಅವಶ್ಯಕತೆಗಳಾದ ಆಹಾರ, ಬಟ್ಟೆ ಮತ್ತು ಉದ್ಯೋಗಗಳ ಅಭಾವ ವಿಪರೀತವಾಗಿ ಆವರಿಸಿದೆ. ಆ ಕಾರಣದಿಂದ ಎಲ್ಲ ಆರ್ಥಿಕಾಭಿವೃದ್ಧಿ ಯೋಜನೆಗಳನ್ನೂ ವ್ಯವಸಾಯ ಮತ್ತು ರೈತ ಜೀವನಗಳನ್ನೇ ಕೇಂದ್ರವಾಗಿಟ್ಟು ಕೊಂಡು ಯೋಜಿಸಬೇಕು. ಮಾನವಶಕ್ತಿ ಮತ್ತು ನಿಸರ್ಗ ಎರಡೇ ನಮ್ಮ ನಿಜವಾದ ಬಂಡವಾಳ. ಇವುಗಳ ವಿವೇಕಯುತ ಬಳಕೆ ಭಾರತೀಯ ನೆಲೆಗಟ್ಟುಗಳ ಆಧಾರದ ಮೇಲೆ ರೂಪಿತವಾಗುವುದು ಅಗತ್ಯ.*

★ *ನಿಜವಾದ ಪ್ರಜಾರಾಜ್ಯ ಸ್ಥಾಪಿತವಾಗಲು ಗ್ರಾಮಸಮುದಾಯಗಳಿಗೆ ಸ್ವಾಯತ್ತ ಅಧಿಕಾರಗಳನ್ನು ನೀಡಿ, ಸ್ವಪರಿಪೂರ್ಣತೆಗೆ ಪ್ರೋತ್ಸಾಹ ನೀಡಲು ವಿವಿಧೋದ್ದೇಶ ಸಹಕಾರೀ ಸಂಸ್ಥೆಗಳನ್ನೂ ಧಾನ್ಯ ಭಂಡಾರಗಳನ್ನೂ ಗ್ರಾಮಕೈಗಾರಿಕೆಗಳನ್ನೂ ವ್ಯವಸ್ಥೆ ಮಾಡಿ 'ಬಳಕೆಗಾಗಿ ಉತ್ಪಾದನೆ' ಎಂಬ ತತ್ವದ ಆಧಾರದ ಮೇಲೆ ಹಣದ ಪ್ರಾಬಲ್ಯವನ್ನು ಕಡಿಮೆ ಮಾಡಬೇಕು. ಉತ್ಪಾದನೆಯಲ್ಲಿ ಹೆಚ್ಚುವರಿ ಎಂದು ಪ್ರಮಾಣಿತವಾದುದನ್ನು ಮಾತ್ರ ಮಾರಾಟ ಮಾಡುವಂತಾಗಬೇಕು.*

ಸಾಮಾಜಿಕ ಜವಾಬ್ದಾರಿ ಮತ್ತು ನೈತಿಕ ಪ್ರಶ್ನೆಯನ್ನು ಪರಿಗಣಿಸದ ಅರ್ಥಶಾಸ್ತ್ರವನ್ನವರು ಅಲ್ಲಗಳೆದು ಭಯಂಕರ ಶೋಷಣೆ ಮತ್ತು ಹಿಂಸಾಚಾರಗಳಿಂದ ಶ್ರೀಮಂತಿಕೆ ಗಳಿಸುವ ಪ್ರಯತ್ನವು ಘೋರ ಅಪರಾಧವೆಂದು ಅಭಿಪ್ರಾಯ ಪಟ್ಟರು. ಪಾಶ್ಚಾತ್ಯರ ಹಣ ಮತ್ತು ಅಧಿಕಾರ ದಾಹದ ನಿರ್ದೇಶನದಲ್ಲಿ ಬೆಳೆದ ಅರ್ಥಶಾಸ್ತ್ರ ಲೋಕವನ್ನು ಭಯಂಕರ ಹಿಂಸೆಗೆ ಗುರಿಮಾಡಿರುವ ಅಪ್ರಿಯ ಸತ್ಯವನ್ನು ಜನರೆದುರಿಗಿಡಲು 'ಗಾಂಧೀ ಘರಾಣೆ'ಯ ಈ ಅರ್ಥಶಾಸ್ತ್ರಜ್ಞ ಹಿಂಜರಿಯಲಿಲ್ಲ. ಖಾದಿ ಗ್ರಾಮೋದ್ಯೋಗಗಳ ಪರ್ಯಾಯ ಅರ್ಥ ವ್ಯವಸ್ಥೆ ಕ್ರಮೇಣ ದೇಶದ ಗಮನ ಸೆಳೆಯುವಂತಾಗುವಲ್ಲಿ ಕುಮಾರಪ್ಪನವರ ಪಾತ್ರ ಅತಿ ಮಹತ್ವದ್ದು. ಇದರಿಂದಾಗಿ ಸ್ವದೇಶೀ ಚಳುವಳಿಗೆ ಅತ್ಯಂತ ವ್ಯಾಪಕವಾದ ವೈಜ್ಞಾನಿಕ ನೆಲೆಗಟ್ಟು ನಿರ್ಮಾಣವಾಗಲು ಸಾಧ್ಯವಾಯ್ತು.

1931ರಿಂದಲೂ ಸ್ವಾತಂತ್ರ್ಯ ಸಂಗ್ರಾಮದ ತೊರೆಗೆ ಸೆಳವು ನೀಡುತ್ತಲೇ ಬಂದ ಕುಮಾರಪ್ಪನವರು ಗಾಂಧಿವಾದದ ಅಧಿಕೃತ ಭಾಷ್ಯಗಾರರಾಗಿ ಬೆಳೆದು ನಿಂತರು. 'ಯಂಗ್ ಇಂಡಿಯಾ' ಪತ್ರಿಕೆಗೆ ನಿಯಮಿತವಾಗಿ ಲೇಖನಗಳನ್ನು ಬರೆದು ತಮ್ಮ ತಲಸ್ಪರ್ಶಿ ಆರ್ಥಿಕ ಚಿಂತನೆಯನ್ನು ಚರ್ಚೆಗೊಡ್ಡಿದ್ದಲ್ಲದೆ ಗಾಂಧೀಜಿಯ ಅನುಪಸ್ಥಿತಿಯಲ್ಲಿ ಆ ಪತ್ರಿಕೆಯ ಸಂಪಾದಕತ್ವ ವಹಿಸುವ ಮನ್ನಣೆಗೂ ಪಾತ್ರರಾಗಿದ್ದರು. ಅವರ ನಿರ್ಭಿಡೆಯ ನಡೆ-ನುಡಿಗಳು ಹಲವಾರು ಬಾರಿ ಜೈಲುವಾಸದ ಬಳುವಳಿ ನೀಡಿದವು.

ಕಾಂಗ್ರೆಸ್ಸಿನ ಕರಾಚಿ ಅಧಿವೇಶನದ ನಿರ್ಣಯದಂತೆ ತಜ್ಞರ ಸಮಿತಿಯ ಅಧ್ಯಕ್ಷತೆ ವಹಿಸಿದ್ದ ಜೋಸೆಫ್ ಕುಮಾರಪ್ಪನವರು ಭಾರತ ಮತ್ತು ಇಂಗ್ಲೆಂಡುಗಳ ಹಣಕಾಸು ವ್ಯವಹಾರ ಏವೆ

ಶಿಸಿ ಅರ್ಥಪೂರ್ಣ ವರದಿ ಸಲ್ಲಿಸಿದರು.

1934ರ ಬಿಹಾರ ಭೂಕಂಪದಲ್ಲಿ ಸಾವು-ನೋವಿಗೀಡಾದ ಜನತೆಯ ಸಹಾಯಕ್ಕೆ ಕಾಂಗ್ರೆಸ್ಸು ಧಾವಿಸಿತು. ಕುಮಾರಪ್ಪನವರು ಆ ಸಂದರ್ಭದಲ್ಲಿ ಸಲ್ಲಿಸಿದ ಸೇವೆ ಡಾ. ರಾಜೇಂದ್ರ ಪ್ರಸಾದರಿಂದ ಮೆಚ್ಚುಗೆ ಪಡೆದು ಅವರ ಆತ್ಮಕತೆಯಲ್ಲೂ ಉಲ್ಲೇಖಗೊಂಡಿವೆ. ಸಾರ್ವಜನಿಕ ನಿಧಿಗಳ ಜವಾಬ್ದಾರಿ ವಹಿಸಿಕೊಂಡವರು ಚಿಕ್ಕಾಸಿನ ಬಗ್ಗೆಯೂ ಹೇಗೆ ಪ್ರಾಮಾಣಿಕ ಲೆಕ್ಕಪತ್ರಗಳನ್ನೊಪ್ಪಿಸಬೇಕೆಂಬುದಕ್ಕೆ ಕುಮಾರಪ್ಪನವರು ಮಾದರಿ ಎನಿಸಿದರು.

ದೈಹಿಕ ಕಾಯಕದಲ್ಲಿ ಬುದ್ಧಿಜೀವಿಗಳ ಪಾಲ್ಗೊಳ್ಳುವಿಕೆ ಅವಶ್ಯಕ. ಇಲ್ಲದಿದ್ದರೆ ಸಮಾಜ ಎರಡು ಪರಸ್ಪರ ವಿರೋಧೀ ಹಿತಗಳ ರಣರಂಗವಾಗುತ್ತದೆಂಬುದು ಕುಮಾರಪ್ಪನವರ ಅಭಿಮತವಾಗಿತ್ತು. ಈ ಕುರಿತಾದ ವಿವರವಾದ ವಿಶ್ಲೇಷಣೆಯನ್ನು ಅವರ 'ಶಾಶ್ವತ ಅರ್ಥಶಾಸ್ತ್ರ' ಗ್ರಂಥದಲ್ಲಿ ಕಾಣಬಹುದಾಗಿದೆ. ಗ್ರಾಮ ಸಂಸ್ಕೃತಿಯ ಬಗೆಗೆ ನಿಖರವಾದ, ವೈಜ್ಞಾನಿಕವಾದ ನಿಲುವು ಹೊಂದಿದ್ದರು ಕುಮಾರಪ್ಪ.

ಎರಡನೇ ಮಹಾಯುದ್ಧದ ಸಮಯದಲ್ಲಿ ಬ್ರಿಟಿಷರು ತಮ್ಮ ಹಿತಸಾಧನೆಗಾಗಿ ಭಾರತವನ್ನು ದಿವಾಳಿಯೆಬ್ಬಿಸಿದ ಬಗೆಯನ್ನು ಕುಮಾರಪ್ಪನವರು ತಮ್ಮ 'ಅನ್ನದ ಬದಲು ಕಲ್ಲು' ಲೇಖನದಲ್ಲಿ ಅಂಕಿ ಅಂಶಗಳ ಸಮೇತ ವಿವರಿಸಿದರು. ಬ್ರಿಟಿಷರು ಅಗ್ಗದ ನೋಟುಗಳನ್ನು ಉಗ್ಗಿ ಧಾನ್ಯ ಕೊಳ್ಳತೊಡಗಿದಾಗ ಕುಮಾರಪ್ಪನವರು 'ಮಾರಬೇಡಿ' ಎಂದು ರೈತರಲ್ಲಿ ಮೊರೆ ಇಟ್ಟರು. ''ನನ್ನ ಬುದ್ಧಿವಾದವನ್ನು ಬಂಗಾಳದ ರೈತರು ಕೇಳಿದ್ದರೆ 1941ರ ಕೃತಕ ಕ್ಷಾಮದಲ್ಲಿ ಮೂರು ಲಕ್ಷ ನಿರಪರಾಧಿ ಗ್ರಾಮಸ್ಥರು ಖಂಡಿತ ಸಾಯುತ್ತಿರಲಿಲ್ಲ'' ಎಂಬ ಅವರ ಮಾತಿಗೆ ಖಚಿತ ತರ್ಕದ ಬೆಂಗಾವಲಿತ್ತು.

ಗಾಂಧೀಜಿಯ ನಿಧನಕ್ಕೆ ಮುಂಚೆ ಕುಮಾರಪ್ಪನವರು ಸಮಗ್ರ ಗ್ರಾಮ ಸೇವಾ ಕಾರ್ಯಕ್ರಮದ ಪ್ರಯೋಗ ಮಾಡಲು ವರ್ಧಾ ಬಳಿ ಸೇಲ್ಟಾ ಎಂಬ ಹಳ್ಳಿಯಲ್ಲಿ ಕೃಷಿ ಭೂಮಿ ಪಡೆದ 'ಪನ್ನ್ಬು ಆಶ್ರಮ' ಸ್ಥಾಪಿಸಿದ್ದರು.

1948ರಲ್ಲಿ ಕಾಂಗ್ರೆಸ್ ಒಂದು ಕೃಷಿ ಸುಧಾರಣಾ ಸಮಿತಿಯನ್ನು ಕುಮಾರಪ್ಪನವರ ಅಧ್ಯಕ್ಷತೆಯಲ್ಲಿ ರಚಿಸಿ ಅವರ ಅಮೂಲ್ಯ ಸಲಹೆಗಳನ್ನು ಪಡೆಯಿತು. ಆದರೆ ಈ ಸಲಹೆಗಳನ್ನು ಬಂಡವಾಳಶಾಹಿ ಅಧಿಕಾರಶಾಹಿ ಹಾಗೂ ಪಾಶ್ಚಾತ್ಯ ಪ್ರೇರಿತ ಪಂಡಿತ ವರ್ಗ ತಿರಸ್ಕರಿಸಿತು.

ಗಾಂಧಿ ಸ್ಮಾರಕಕ್ಕಾಗಿ ನಿಧಿ ಕೂಡಿಸಲು ಅನೇಕ ಗಣ್ಯರು ಮುಂದಾದಾಗ ಕುಮಾರಪ್ಪ ಆಡಿದ ಮಾತುಗಳು ಅವರ ರಚನಾತ್ಮಕ ಮನಸ್ಸಿಗೆ ಕನ್ನಡಿ ಹಿಡಿದಂತಿವೆ: '' ಗಾಂಧೀ ಹೆಸರಿನಲ್ಲಿ ಹಣಕೂಡಿಸಬೇಡಿ. ಬದಲಾಗಿ ದೇಶದಲ್ಲೆಲ್ಲಾ ಸಂಚರಿಸಿ ಒಂದು ಲಕ್ಷ ಗ್ರಾಮ ಸೇವಕರನ್ನು ಸಂಘಟಿಸಿ, ರಾಜಕೀಯ ತುಮುಲದಲ್ಲಿ ತೊಡಗದೆ ಏಕಸಂಕಲ್ಪದಿಂದ ರಾಷ್ಟ್ರ ಪುನರ್ರಚನೆಗೆ ತೊಡಗೋಣ. ಇದಕ್ಕಾಗಿ ನೆಹರು, ಪಟೇಲ, ಅಮೃತ ಕೌರ್, ಮೌಲಾನಾ ಆಜಾದ್ (ಆಗಿನ ಮಂತ್ರಿಗಳು) ರಾಜೀನಾಮೆ ನೀಡಿ ಜನತೆಯೊಂದಿಗೆ ನಿಂತು ಗಾಂಧೀ ಮಾರ್ಗದ ಸಾಮಾಜಿಕ-ಆರ್ಥಿಕ ಮತ್ತು ಸಾಂಸ್ಕೃತಿಕ ಪರಿವರ್ತನೆಗೆ ಶ್ರಮಿಸಿದರೆ ಮಾತ್ರ ನಿಜವಾದ ಗಾಂಧೀ ಸ್ಮಾರಕವಾದೀತು.'' ಕುಮಾರಪ್ಪನವರ ಈ ಮಾತುಗಳಿಗೆ ಅಂದು ಮನ್ನಣೆ ಸಿಗದಿದ್ದುದರ ಪರಿಣಾಮವನ್ನು ನಾವು ಇಂದಿಗೂ ಕಾಣಬಹುದಾಗಿದೆ.

1960ರ ಜನವರಿ ಮೂವತ್ತರಂದು (ಗಾಂಧೀಜಿಯ ಹನ್ನೆರಡನೇ ಪುಣ್ಯತಿಥಿಯ ದಿನ) ಜೋಸೆಫ್ ಕಾರ್ನಿಲಿಯಸ್ ಕುಮಾರಪ್ಪನವರು ಕಣ್ಣುಮುಚ್ಚಿದರು. ಆದರೆ ತಾವು ನೀಡಿಹೋದ ಆರ್ಥಿಕ-ಸಾಮಾಜಿಕ ಚಿಂತನೆ ಹಾಗೂ ಸರಳ ಬದುಕಿನ ಸಂದೇಶದ ರೂಪದಲ್ಲಿ ಅವರೆಂದಿಗೂ ಭಾರತೀಯರ ಕಣ್ಣೆವೆಯಿಂದ ಕದಲಲಾರರು.

ಅವರು 'ಶಾಶ್ವತ ಅರ್ಥಶಾಸ್ತ್ರ'ದ ಕರ್ತೃ ತಾನೆ? ●

# ಸಾಮಾನ್ಯರು ಸಂಶೋಧಿಸಿದ ಅಸಾಮಾನ್ಯ ವಸ್ತುಗಳು

**ದೈತ್ಯ ಸ್ವರೂಪದ ಬೃಹತ್ ಸಂಶೋಧನೆಗಳ ಜೊತೆಗೆ ನಮ್ಮ ದೈನಂದಿನ ಬದುಕಿನಲ್ಲಿ ಪರಿವರ್ತನೆ ಉಂಟು ಮಾಡಿದ ಸಣ್ಣ ಪುಟ್ಟ ಸಂಶೋಧನೆಗಳು ಮತ್ತು ಅವುಗಳ ಸಂಶೋಧಕರ ಬಗ್ಗೆ ಜನರಿಗೆ ಗೊತ್ತಿರುವುದು ತೀರ ಕಡಿಮೆ.**

**1974**ನೇ ವರ್ಷ. ಒಂದು ಭಾನುವಾರದ ಮುಂಜಾವ. ಅಮೆರಿಕದ ಮಿನ್ನೆಸೊಟಾ ರಾಜ್ಯದ ಚರ್ಚ್‌ನಲ್ಲಿ ಪ್ರಾತಃಪೂಜಾಕಾರ್ಯ ಆರಂಭವಾಗಿತ್ತು. ಗಡ್ಡಧಾರಿ ವ್ಯಕ್ತಿಯೊಬ್ಬ ಆರಾಧನೆಗೆ ಸಂಬಂಧಿಸಿದ ಪ್ರಾರ್ಥನಾ ಶ್ಲೋಕಗಳ ಪುಸ್ತಕದಲ್ಲಿ ತನಗೆ ಬೇಕಾದ ಕೀರ್ತನೆ ಎಲ್ಲಿದೆ ಎಂದು ಹುಡುಕಲು ಪರದಾಡುತ್ತಿದ್ದ. ಹಿಂದಿನ ದಿನವಷ್ಟೇ ಆತ ತನಗೆ ಬೇಕಿದ್ದ ಕೀರ್ತನೆಯನ್ನು ಹುಡುಕಿ ಆ ಪುಟದ ನಡುವಿರಿಸಿದ್ದ. ಸಣ್ಣ ಕಾಗದದ ತುಣುಕು ಗಾಳಿಗೆ ಎತ್ತಲೋ ಹಾರಿ ಹೋಗಿತ್ತು. ಶ್ಲೋಕಶೋಧನೆ ಮುಂದುವರಿಸುತ್ತಲೇ ಪುಟವನ್ನು ಸುಲಭವಾಗಿ ಗೊತ್ತು ಹಚ್ಚಲು ಶಾಶ್ವತವಾಗಿ ಒಂದೇ ಕಡೆ ಉಳಿಯುವ (ಬೇಡವೆನಿಸಿದರೆ ತೆಗೆದಿರಿಸಬಲ್ಲ) 'ಬುಕ್ ಮಾರ್ಕ್'ನ್ನು ಏಕೆ ಕಂಡುಹಿಡಿಯಬಾರದು ಎಂದುಕೊಂಡ. ಆತನೆ ಆರ್ಥರ್ ಫ್ರೈ. ವೃತ್ತಿಯಿಂದ ಕೆಮಿಕಲ್ ಇಂಜನಿಯರ್. ಬಾಲ್ಯದಿಂದಲೇ ಆತನಿಗೆ ಹೊಸದೇನನ್ನಾದರೂ ಸಂಶೋಧಿಸಬೇಕೆನ್ನುವ ಗೀಳು.

3M ಕಾರ್ಪೊರೇಶನ್ ಎಂದು ಅಮೆರಿಕದಾದ್ಯಂತ ಜನಪ್ರಿಯವಾಗಿದ್ದ ಮಿನ್ನೆಸೊಟಾ ಮೈನಿಂಗ್ ಮ್ಯಾನ್ಯುಫ್ಯಾಕ್ಚರಿಂಗ್ ಕಾರ್ಪೊರೇಶನಿನ ಸರಕು ಉತ್ಪಾದನಾ ವಿಭಾಗದಲ್ಲಿ ಕೆಲಸದಲ್ಲಿದ್ದ ಫ್ರೈ. ಕೆಲವು ವರ್ಷಗಳ ಹಿಂದೆ ಈ ಸಂಸ್ಥೆಯ ವಿಜ್ಞಾನಿ ಡಾ. ಸ್ಪೆನ್ಸರ್ ಸಿಲ್ವರ್ ಎಂಬಾತ ಹೊಸ ಬಗೆಯ ಅಂಟು ಪದಾರ್ಥವನ್ನು ಶೋಧಿಸಿದ್ದ. ಈ ವಸ್ತುವನ್ನು ವ್ಯಾಪಾರೀ ಸರಕಾಗಿ ಬಳಸಲು ಸಾಧ್ಯ ಎಂದು ಯಾರೂ ಯೋಚಿಸಿರಲಿಲ್ಲ. ಈ ಶೋಧನೆ ತಾತ್ಕಾಲಿಕವಾಗಿಯೂ, ಖಾಯಂ ಆಗಿಯೂ ಉತ್ತಮ 'ಬುಕ್ ಮಾರ್ಕ್' ಆಗಬಹುದೆಂದು ಫ್ರೈ ನಿರ್ಧರಿಸಿದ. ಆ ಅಂಟು ಪದಾರ್ಥವನ್ನು ಪ್ರಯೋಗಗಳ ಮೂಲಕ ಇನ್ನಷ್ಟು ಸುಧಾರಿಸಿ, ಎಂಟು ತಿಂಗಳು ಸತತ ಪರಿಶ್ರಮಿಸಿದ ಬಳಿಕ ಹಳದಿ ಬಣ್ಣದ ಅಂಟು ಅಂಟಾದ ಪ್ಯಾಡನ್ನು (Sticky pad) ಆತ ರೂಪಿಸಿದ. ಈ ಅಂಟು ಪ್ಯಾಡುಗಳು ಅಲ್ಪಾವಧಿಯಲ್ಲೇ ರೆಫ್ರಿಜರೇಟರ್ ಬಾಗಿಲುಗಳು, ಅಡುಗೆ ಕೋಣೆ ಗೋಡೆಗಳು, ಕಂಪನಿ ದಸ್ತಾವೇಜುಗಳು ಹೀಗೆ ಎಲ್ಲೆಡೆಯೂ ಸ್ಥಾನ ಪಡೆದುವು. ಇದನ್ನು ಅಂಟಿಸಿ ಮತ್ತೆ ಸುಲಭ

(ಕೃಪೆ: ಯು.ಎಸ್.ಐ.ಎಸ್. ವೈಜ್ಞಾನಿಕ ಲೇಖನ)

ದಲ್ಲಿ ಕಿತ್ತು ತೆಗೆಯಬಹುದಾಗಿತ್ತು. ಇಂಥ ಬುಕ್ ಮಾರ್ಕ್ ಇಂದು 'ಪೋಸ್ಟ್-ಇಟ್' ಎಂಬ ಹೆಸರಿನಲ್ಲಿ ಜಗತ್ತಿನ ಬಹುತೇಕ ರಾಷ್ಟ್ರಗಳಲ್ಲಿ ಬಳಕೆಯಲ್ಲಿದೆ.

ಸಾಮಾನ್ಯವಾಗಿ ರೇಡಿಯೋ, ಫೋನ್, ದೂರದರ್ಶಕ ಯಂತ್ರ, ಟೆಲಿವಿಜನ್, ಉಗಿ ಬಂಡಿ, ವಿದ್ಯುತ್ ಮುಂತಾದ ಮಹಾಮಹಾ ಸಂಶೋಧನೆಗಳ ಕಡೆಗೇ ನಮ್ಮ ಸರ್ವಲಕ್ಷ್ಯವೂ ಕೇಂದ್ರಿಕೃತ. ಆಧುನಿಕ ಬದುಕನ್ನು ಅಷ್ಟೇ ಏಕೆ, ಮಾನವನ ಬದುಕಿನ ಇತಿಹಾಸವನ್ನೇ ಅಕ್ಷರಶಃ ಬದಲಾಯಿಸಿದ ಇಂಥ ಕೆಲವು ಮಹತ್ತರ ಸಂಶೋಧನೆಗಳ ಬಗ್ಗೆ ಆಗಾಗ್ಗೆ ನಾವು ಜ್ಞಾಪಿಸಿಕೊಳ್ಳುತ್ತೇವೆ. ಅಲೆಗ್ಸಾಂಡರ್ ಗ್ರಹಾಂ ಬೆಲ್ ಬೋಸ್ಟನ್ ಪ್ರಯೋಗಾಲಯದಲ್ಲಿ ಕೆಲಸ ಮಾಡುವಾಗ ತಂತಿ ಮೂಲಕ ಮಾನವನ ಧ್ವನಿಯನ್ನು ರವಾನಿಸಲು ಸಾಧ್ಯವಿದೆ ಎಂಬುದನ್ನು ಶೋಧಿಸಿ ಜಗತ್ತಿಗೆ ಟೆಲಿಫೋನ್ ಎಂಬ ಸಾಧನವನ್ನು ನೀಡಿದ. ಮಾನವರನ್ನು ಒಳಗೊಂಡ ಮೋಟಾರ್ ಚಾಲಿತ ಯಂತ್ರ ಆಗಸದಲ್ಲಿ ಹಕ್ಕಿಯಂತೆ ಹಾರುತ್ತಾ ಹೋಗಲು ಸಾಧ್ಯವಿದೆ ಎಂಬುದನ್ನು ರೈಟ್ ಸಹೋದರರು ಶೋಧಿಸಿದಾಗ ವಾಯುಯಾನ ಯುಗ ಆರಂಭವಾಯಿತು. ರಾಬರ್ಟ್ ಫ್ಯೂಟನ್ ಎಂಬಾತ ವ್ಯಾಪಾರ ವಾಣಿಜ್ಯ ದೃಷ್ಟಿಯಿಂದ ಯಶಸ್ವಿಯಾದ ಮೊದಲ ಉಗಿ ದೋಣಿ (Steam boat) ಯನ್ನು ವಿನ್ಯಾಸಗೊಳಿಸಿದ. ಸೈರಸ್ ಹಾಲ್ ಮೆಕ್‌ಕಾರ್ಮಿಕ್ ಫಸಲು ಕಟಾವು ಮಾಡುವ ಯಂತ್ರವನ್ನು ಶೋಧಿಸಿ ರೈತರಿಗೆ ಉಪಕಾರಗೈದ. ಕಲ್ಪನಾ ಚಾತುರ್ಯ, ಸೃಜನಶೀಲತೆ, ಪಟ್ಟು ಬಿಡದೆ ಗುರಿಸಾಧಿಸುವ ಪ್ರವೃತ್ತಿಯ ಅನೇಕ ಅಮೆರಿಕನ್ನರು ಚಿಕ್ಕ-ದೊಡ್ಡ ಪ್ರಯೋಗಾಲಯಗಳಲ್ಲಿ, ಗ್ಯಾರೇಜ್ ವರ್ಕ್‌ಶಾಪ್‌ಗಳಲ್ಲಿ ಕುಳಿತು 'ಪುಟಾಣಿ ಸಂಶೋಧನೆ'ಗಳನ್ನು ಮಾಡಿದ್ದಾರೆ. ಕೆಲವರಿಗೆ ತೀರಾ ಹತಾಶೆಯ ಕ್ಷಣಗಳಲ್ಲಿ ಇಂಥ ಶೋಧನೆಗಳು ಸಾಧ್ಯವಾದರೆ ಮತ್ತೆ ಕೆಲವರಿಗೆ ದಿಢೀರ್ ಸ್ಫೂರ್ತಿ ಇಂಥವುಗಳ ಸೂಚನೆ ನೀಡಿದೆ. ''ಅಗತ್ಯವನ್ನು ಗುರುತಿಸಿ ಅದನ್ನು ಪೂರೈಸಿ'' ಎಂಬುದೇ ಈ ಎಲ್ಲ ಸಂಶೋಧನೆಗಳ ಪ್ರೇರಕ ಶಕ್ತಿ. ಕೆಲವು ಸಣ್ಣ ಸಂಶೋಧನೆಗಳು ತತ್ಪೂರ್ವದ ಮೂಲ ಸಂಶೋಧನೆಗಳ ಸುಧಾರಿತರೂಪಗಳೂ ಆಗಿದ್ದುವು.

ಈ ಶತಮಾನದ ಮೊದಲ ದಶಕದಲ್ಲಿ ಚಾರ್ಲ್ಸ್ ಎಫ್. ಕೆಟರಿಂಗ್ ಎಂಬಾತ ಒಹಿಯೋದ ಡೇಟನ್ ಸಮೀಪ ಸ್ಥಾಪಿಸಿದ್ದ ವರ್ಕ್ ಶಾಪ್‌ನಲ್ಲಿ ತನ್ನ ಕೆಲವೇ ಸಹಾಯಕರೊಂದಿಗೆ ಉದ್ಯಮ ರಂಗಕ್ಕೆ ಅವಶ್ಯಕವಾದ ಸಣ್ಣ ಪುಟ್ಟ ಸರಕುಗಳನ್ನು ಉತ್ಪಾದಿಸುತ್ತಿದ್ದ. ಒಂದು ದಿನ ಡೆಟ್ರಾಯ್ಟ್‌ನಲ್ಲಿರುವ ಕ್ಯಾಡಿಲಾಕ್ ಕಾರು ಕಂಪೆನಿಯ ಅಧ್ಯಕ್ಷ ಹೆನ್ರಿ.ಎಂ. ಲೇಲ್ಯಾಂಡ್ ತನ್ನ ಕಾರಖಾನೆಗೆ ಭೇಟಿ ನೀಡಲು ಕೆಟರಿಂಗ್‌ನನ್ನು ಆಹ್ವಾನಿಸಿದ. ತನ್ನ ಮಿತ್ರನೊಬ್ಬ ಮೋಟಾರಿನ ಹ್ಯಾಂಡಲ್ ಬಡಿದು ತೀವ್ರವಾಗಿ ಗಾಯಗೊಂಡ ಬಗ್ಗೆ ಕೆಟರಿಂಗ್‌ಗೆ ಹೇಳಿದ. ಮೋಟಾರು ವಾಹನ ಚಲಿಸುವಂತೆ ಮಾಡಲು ಹೆಚ್ಚು ಸುರಕ್ಷಿತವಾದ ಉತ್ತಮ ಸಾಧನವೊಂದನ್ನು ವಿನ್ಯಾಸಗೊಳಿಸಲು ಸಾಧ್ಯವೇ? ಎಂಬ ಪ್ರಶ್ನೆಯನ್ನು ಕೆಟರಿಂಗ್‌ನ ಮುಂದಿಟ್ಟ ಲೇಲ್ಯಾಂಡ್.

ಮರುದಿನವೆ ತನ್ನ ವರ್ಕ್ ಶಾಪ್‌ನಲ್ಲಿ ಈ ದೆಸೆಯಲ್ಲಿ ಕಾರ್ಯಪ್ರವೃತ್ತನಾದ ಕೆಟರಿಂಗ್. ಇಲೆಕ್ಟ್ರಿಕ್ ಮೋಟಾರ್ ಶಾಖ ಬರುವಂತೆ ಮಾಡಲು ಇರುವ ಏಕೈಕ ವಿಧಾನವೆಂದರೆ ಇನ್ನೊಂದು ಮೋಟಾರ್‌ನ ಬಳಕೆ. ಆದರೆ ಇನ್ನೊಂದು ಮೋಟಾರ್ ಗಾತ್ರದಲ್ಲಿ ದೊಡ್ಡದಾಗಿದ್ದರೆ ಕಾರಿನೊಳಗೆ ಹೇಗೆ ಹಿಡಿಸೀತು? ಎಂದುಕೊಂಡರು ಇಂಜಿನಿಯರುಗಳು. ಆದರೆ ಕೆಟರಿಂಗ್ ಇದನ್ನು ಒಪ್ಪಲಿಲ್ಲ. ಎರಡು ವರ್ಷಗಳವರೆಗೆ ಆತ ತನ್ನ ಸಂಗಡಿಗರೊಂದಿಗೆ ಈ ಹ್ಯಾಂಡಲ್ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಲು

ಯತ್ನಿಸಿದ. 1910 ಡಿಸೆಂಬರ್ 24ರಂದು ಸ್ವಯಂಚಾಲಿತ ಸ್ಟಾರ್ಟರ್ ಸಾಧನವನ್ನು ಕೆಟರಿಂಗ್ ವಿನ್ಯಾಸಗೊಳಿಸಿದ. ನಂತರದ ದಿನಗಳಲ್ಲಿ ಈ ಸಾಧನದ ಮೇಲೆ ಇನ್ನಷ್ಟು ಸುಧಾರಣೆಗಳಾದುವು. ತತ್ಫಲವಾಗಿ ನಮಗೆ ಸ್ವಯಂಚಾಲಿತ ಸ್ಟಾರ್ಟರ್‌ಗಳು ಲಭ್ಯವಾದವು.

ರಾಷ್ಟ್ರೀಯ ಹೆದ್ದಾರಿಗಳಲ್ಲಿ, ಪ್ರಮುಖ ರಸ್ತೆಗಳಲ್ಲಿ ಸಂಚರಿಸುವ ವಾಹನಗಳ ಸಂಖ್ಯೆ ಹೆಚ್ಚಿದಾಗ ಹೆಚ್ಚು ಉತ್ತಮವಾದ, ಹೆಚ್ಚು ಪರಿಣಾಮಕಾರಿಯಾದ ಪಥ ಸೂಚನಾ ಫಲಕಗಳು, ಎಚ್ಚರಿಕೆ ಸಂಕೇತಗಳು ಅಗತ್ಯವೆನಿಸಿದುವು. ಅದರಲ್ಲೂ ರಾತ್ರಿ ವೇಳೆಯಲ್ಲಿ ಅವುಗಳ ಅವಶ್ಯಕತೆ ತೀರಾ ಹೆಚ್ಚಿತ್ತು. 3M ಸಂಸ್ಥೆಯ ವಿಜ್ಞಾನಿಗಳು ಇದಕ್ಕೂ ಪರಿಹಾರ ಕಂಡು ಹಿಡಿದರು. ಸಣ್ಣಪುಟ್ಟ ಗಾಜಿನ ಮಣಿಗಳನ್ನಳವಡಿಸಿದ ಚೌಕಾಕಾರದ ಪೆಟ್ಟಿಗೆಯದು. ಈ ಗಾಜಿನ ಮಣಿಗಳು ಅತಿ ಸೂಕ್ಷ್ಮ ಮಸೂರಗಳಂತೆ ಕಾರ್ಯನಿರ್ವಹಿಸುತ್ತವೆ: ವಾಹನಗಳ ಹೆಡ್‌ಲೈಟ್‌ಗಳು ಕಣ್ಣು ಕೋರೈಸುವ ಬೆಳಕು ಬೀರಿದಾಗಲೆಲ್ಲ ಗಾಜಿನ ಮಣಿಗಳು ಕೆಂಪುಬೆಳಕು ಚೆಲ್ಲಿ ಮುಂದೆ ಚಲಿಸುವ ವಾಹನಗಳ ಬಗ್ಗೆ ಹಿಂದೆ ಬರುವ ವಾಹನಗಳ ಚಾಲಕರಿಗೆ ಎಚ್ಚರಿಕೆ ನೀಡುತ್ತವಷ್ಟೆ. ಹೀಗೆ ಇಂದು 'ಸ್ಕಾಚ್ ಲೈಟ್' (Scotchlite) ಎಂದು ಹೆಸರಾಗಿರುವ ಸೌಜನ್ಯದೀಪಗಳು 1930ರ ದಶಕದಲ್ಲಿ ರೂಪುಗೊಂಡವು. ಕಾರು, ಬಸ್, ಟ್ರಕ್‌ಗಳ ನಿಲುಗಡೆ ಸಂಕೇತ ದೀಪಗಳಲ್ಲಿ, ದಾರಿಗಳ ತಿರುವು ಸೂಚನಾ ಫಲಕಗಳಲ್ಲಿ ರಸ್ತೆಯ ತಗ್ಗು-ದಿನ್ನೆಗಳನ್ನು ತೋರಿಸುವಲ್ಲಿ, ''ಅಪಾಯ, ಸ್ಫೋಟಕಗಳಿವೆ'' ಎಂದು ಎಚ್ಚರಿಕೆ ನೀಡುವ ಫಲಕಗಳಲ್ಲಿ ಸ್ಕಾಚ್‌ಲೈಟ್‌ಗಳು ಬಳಸಲ್ಪಡುತ್ತಿವೆ. ಅಷ್ಟೇ ಅಲ್ಲ, ಸೈಕಲ್-ಮೋಟಾರ್ ಸೈಕಲ್‌ಗಳ ಹಿಂದುಗಡೆಯಲ್ಲಿಯೂ ಸುರಕ್ಷಿತತೆಯ ದೃಷ್ಟಿಯಿಂದ ಅವನ್ನು ಅಳವಡಿಸುವುದಿದೆ.

### ಲಘು ಪಾನೀಯ

ಆಹಾರ ಮಾನವ ಬದುಕಿನ ಮೂಲಭೂತ ಅವಶ್ಯಕತೆಯಷ್ಟೆ. ಆಹಾರದ ಗುಣಮಟ್ಟ, ಅದರ ಸರಬರಾಜು ಪ್ರಮಾಣ, ವಿತರಣೆ ಸ್ವರೂಪವನ್ನು ನಿರ್ಧರಿಸುವ-ಸುಧಾರಿಸುವ ಮತ್ತು ವೈವಿಧ್ಯಮಯ ಆಹಾರವಸ್ತುಗಳ ತಯಾರಿಕೆಗೂ ಕೆಲವು ಪುಟ್ಟ ಸಂಶೋಧನೆಗಳು ನೆರವಾಗಿವೆ.

75 ವರ್ಷಗಳ ಹಿಂದೆ ಕ್ಲಾರೆನ್ಸ್ ಬರ್ಡ್‌ಸ್ಕೈ ಎಂಬ ಸಂಶೋಧಕ - ತನ್ನ 26ನೇ ವಯಸ್ಸಿನಲ್ಲಿ ಕೆನಡಾದ ಪೂರ್ವಭಾಗದ ಲಾಬ್ರಡೊರ್‌ಗೆ ಪ್ರಯಾಣ ಬೆಳೆಸಿದ. ತುಪ್ಪಳ (ಫರ್) ಮಾರಾಟ ಆತನ ವೃತ್ತಿ. ಈ ಭಾಗದಲ್ಲಿ ಘನೀಕೃತ (Frozen) ಮೀನು ಮಾಂಸಗಳನ್ನು ಅಡುಗೆಯಲ್ಲಿ ಬಳಸಿರುವುದನ್ನೂ ಆಗಲೂ ಅವು ತಾಜಾತನ,






ಹಾಗೂ ಸ್ವಾದಿಷ್ಟತೆಯನ್ನು ಉಳಿಸಿಕೊಂಡಿರುವುದನ್ನೂ ಅಲ್ಲಿ ಆತ ಗಮನಿಸಿದ. ತನ್ನ ದೇಶಕ್ಕೆ ಹಿಂತಿರುಗಿದ ಬಳಿಕ ಆತ ಮೀನು ಹಾಗೂ ತರಕಾರಿಗಳನ್ನು ಕ್ಷಿಪ್ರವಾಗಿ ಘನೀಕರಿಸುವ ಹೊಸ ಯಂತ್ರದ ವಿನ್ಯಾಸಗೈದ. ಇಂದು ಜಗತ್ತಿನಾದ್ಯಂತ ಆಹಾರ ಘನೀಕರಣಕ್ಕೆ ಬಳಸಲ್ಪಡುವ ಯಂತ್ರ ಬರ್ಡ್‌ಸ್ಯೆ ವಿನ್ಯಾಸಗೊಳಿಸಿದ್ದರ ಸುಧಾರಿತ ರೂಪವೆ.

ಕಳೆದ ಶತಮಾನದ ಕೊನೆಯಲ್ಲಿ ಇನ್ನೊಬ್ಬ ಅಮೆರಿಕನ್ ಯುವಕ ಕಾಫಿಗೆ ಬದಲಾಗಿ ಇನ್ನೊಂದು ಪೇಯವನ್ನು ಶೋಧಿಸಲು ನಿರ್ಧರಿಸಿದ. ಅದಕ್ಕೆ ಕಾರಣ ಏಕೋ ಕಾಫಿ ಅವನಿಗೆ ಒಗ್ಗದಿರುವುದೇ ಆಗಿತ್ತು. ಮಾರುಕಟ್ಟೆಯಲ್ಲಿ ಕಾಫಿಗೆ ಬದಲಾಗಿ ಇತರ ಕೆಲವು ಬಿಸಿ ಪೇಯಗಳಿದ್ದುವೇನೋ ನಿಜ. ಆದರೆ ಅವಾವೂ ಆತನಿಗೆ ಇಷ್ಟವಾಗಲಿಲ್ಲ. ಆ ಯುವಕ ಅದು ಹೇಗೋ 58.75 ಡಾಲರ್ ಹಣ ಕೂಡಿಸಿ ಒಂದು ಗ್ಯಾಸೊಲೀನ್ ಸ್ಟೌ, ನೆಲಗಡಲೆ ಹುರಿಯುವ ಯಂತ್ರ, ಕಾಫಿ ಬೀಜ ಪುಡಿ ಮಾಡುವ ಯಂತ್ರ, ಉತ್ತಮ ದರ್ಜೆಯ ಕಾಕಂಬಿ ಮುಂತಾದವನ್ನು ಖರೀದಿಸಿದ. ತಿಂಗಳುಗಟ್ಟಲೇ ಆತ ಅದೇನೋ ಹುರಿಯುವುದು, ಬೇಯಿಸುವುದು, ಪುಡಿ ಮಾಡುವುದರಲ್ಲೇ ತಲ್ಲೀನನಾಗಿದ್ದ. ಕೊನೆಗೊಂದು ದಿನ ಅವನಿಗೆ ಹೊಸ ಪೇಯ ತಯಾರಿಸಲು ಅಗತ್ಯ ಸೂತ್ರ ಸಿಕ್ಕಿತು! ಆ ಪಾನೀಯವೇ ಇಂದು ಜಗತ್ತಿನಾದ್ಯಂತ ಮಾರಾಟವಾಗುತ್ತಿರುವ 'ಪೋಸ್ಟುಮ್'. ಅದರ ಸಂಶೋಧಕ ಚಾರ್ಲ್ಸ್. ಡಬ್ಲ್ಯೂ. ಪೋಸ್ಟ್.

'ಅವಶ್ಯಕತೆ ಸಂಶೋಧನೆಗಳ ತಾಯಿ' ಎಂಬ ನಾಣ್ಣುಡಿಯಿದೆ. ಕಾಫಿ ವೆಂಡಿಂಗ್ ಯಂತ್ರ ಹುಟ್ಟಿದ ಬಗೆಗಂತೂ ಈ ನಾಣ್ನುಡಿ ಅಕ್ಷರಶಃ ಸತ್ಯವೆನಿಸುತ್ತದೆ. ರಕ್ತ ಹೆಪ್ಪುಗಟ್ಟಿಸುವಷ್ಟು ಚಳಿಯ ಒಂದು ಮಧ್ಯಾಹ್ನದ ವೇಳೆಗೆ ಒಹಿಯೋದ ರೈಟ್ ಫೀಲ್ಡ್‌ನಲ್ಲಿ ಲೆಫ್ಟಿನೆಂಟ್ ಲಾಯ್ಡ್ ರುಡ್ ಮತ್ತು ಸಾರ್ಜೆಂಟ್ ಮೆಲಿಕಿಯಾನ್‌ಗೆ ಒಂದು ಕಪ್ ಬಿಸಿ ಬಿಸಿ ಕಾಫಿ ಕುಡಿಯುವ ಮನಸ್ಸಾಯಿತು. ವಾಯುನೆಲೆಯ ಕೆಫೆಟೇರಿಯಾಕ್ಕೆ ಕಾಫಿ ಕುಡಿಯಲು ಹೋದರೆ 'ಊಟಗಳ ಮಧ್ಯೆ ವಾಯುನೆಲೆಯ ಸಿಬ್ಬಂದಿಗೆ ಇನ್ನು ಮುಂದೆ ಕಾಫಿ ಸರಬರಾಜು ಮಾಡಲಾಗುವುದಿಲ್ಲ' ಎಂಬ ದೊಡ್ಡ ಸೂಚನಾ ಫಲಕ ಅವರನ್ನು ಸ್ವಾಗತಿಸಿತು. ಹತಾಶರಾದ ಅವರು ತಂಪು ಪಾನೀಯ ಒದಗಿಸುತ್ತಿದ್ದ ಯಂತ್ರದ ಬಳಿ ಹೋದರು. ''ಈ ಯಂತ್ರದೊಳಗೆ ನಾಣ್ಯ ತೂರಿದಾಗ ತಂಪು ಪಾನೀಯ ನೀಡುವ ಬದಲು ಬಿಸಿ ಬಿಸಿ ಕಾಫಿ ನೀಡುವಂತಾದರೆ ಎಷ್ಟೊಂದು ಒಳ್ಳೆಯದಲ್ಲವೆ?'' ಎಂದುಕೊಂಡರು.

ರುಡ್ ಮತ್ತು ಮೆಲಿಕಿಯಾನ್ ಅಷ್ಟಕ್ಕೇ ಸುಮ್ಮನಾಗಲಿಲ್ಲ. ಈ ಕುರಿತು ಗಾಢವಾಗಿ ಚಿಂತಿಸಿ ಪ್ರಯೋಗಗಳಲ್ಲಿ ತೊಡಗಿದರು. ಬೇಕೆಂದಾಗ ಬಿಸಿ ಕಾಫಿ ಸರಬರಾಜು ಮಾಡುವ ಸ್ವಯಂ ಚಾಲಿತ 'ಕಾಫಿ ವೆಂಡಿಂಗ್' ಯಂತ್ರವನ್ನವರು ವಿನ್ಯಾಸಗೊಳಿಸಿದರು. 1944-45ರ ಅವಧಿಯಲ್ಲಿ ಈ ಯಂತ್ರ ಬಳಕೆಗೆ ಬಂತು.

ಹೈ ಬಟನ್ ಶೂಗಳು ಕಳೆದ ಶತಮಾನದಲ್ಲಿ ಪುರುಷರ ಶೋಕಿ ವಸ್ತುಗಳಾಗಿದ್ದವು. ಮೊಣಕಾಲವರೆಗೂ ಬರುವ ಈ ಬೂಟಿನ ಕುಣಿಕೆ ಬಿಗಿಯುವುದೇ ಮಹಾ ಪ್ರಯಾಸದ ಕೆಲಸ. ಶೂ ಹಾಕಿಕೊಳ್ಳುವವರ ಈ ಪರದಾಟ ನೋಡಿ ಬೇಸತ್ತಿದ್ದ ವೈಟ್‌ಕೋಂಬ್ ಜಡ್ಸನ್ ಎಂಬಾತ ಜಿಪ್ಪರ್‌ಗಳನ್ನುಳ್ಳ ಶೂಗಳನ್ನು ವಿನ್ಯಾಸಗೊಳಿಸಿದ. ಕ್ರಮೇಣ ಉಡುಪು-ತೊಡುಪುಗಳಲ್ಲೂ ಗುಂಡಿಗಳ ಬದಲು ಜಿಪ್ಪರ್‌ಗಳು ಬಳಕೆಗೆ ಬಂದುವು.

ಹಂಫ್ರೆ ಒ ಸುಲ್ಲಿವಾನ್ ಎಂಬವ ಒಂದು ಸಣ್ಣ ಮುದ್ರಣಾಲಯದ ಪ್ರಿಂಟರ್. ನಿತ್ಯವೂ ಕೆಲಸ ಮುಗಿಸಿ ರಾತ್ರಿ ಮನೆಗೆ ಹಿಂತಿರುಗುತ್ತಿದ್ದ ಅವನಿಗೆ ಪಾದಗಳಲ್ಲಿ ಅಸಹನೀಯ ನೋವಾಗುತ್ತಿತ್ತು. ದಿನವಿಡೀ ಆತ ಒರಟು ಕಲ್ಲು ಹಾಸಿದ ನೆಲದ ಮೇಲೆ ನಿಂತೇ ಕೆಲಸ ಮಾಡುತ್ತಿದ್ದ. ಒಂದು ದಿನ ಆತ ರಬ್ಬರ್‌ನ ಹಾಸಿನ (Rubber

mat) ಮೇಲೆ ನಿಂತು ಕೆಲಸ ಮಾಡಿದ. ಎಷ್ಟೋ ಹಾಯೆನಿಸಿತು. ಆದರೆ ಅಲ್ಲಿಂದ ಕಾಲೆತ್ತಿ ನೆಲದ ಮೇಲಿರಿಸಿದ ಕೂಡಲೇ ಪಾದಗಳಲ್ಲಿ ನೋವು ಮರುಕಳಿಸಿತು. ರಬ್ಬರಿನ ಮೆತ್ತೆಯನ್ನು ಚಪ್ಪಲಿಯ ತಳಕ್ಕೆ ಅಳವಡಿಸಿದರೆ ಉತ್ತಮವಲ್ಲವೇ ಎಂದು ಆತನಿಗನಿಸಿತು. ಆತ ತನ್ನ ಪಾದರಕ್ಷೆಗಳ ಹಿಮ್ಮಡಿಯ ಗಾತ್ರಕ್ಕೆ ತಕ್ಕುದಾದ ರಬ್ಬರ್ ಪ್ಯಾಡ್‌ಗಳನ್ನು ಕತ್ತರಿಸಿ ತಳಕ್ಕೆ ಲಗತ್ತಿಸಿದ. ಹೀಗೆ 1899ರಲ್ಲಿ ರಬ್ಬರ್ ಹಿಮ್ಮಡಿಯುಳ್ಳ ಪಾದರಕ್ಷೆಗಳ ಶೋಧನೆಯಾಯಿತು.

ಮೊತ್ತಮೊದಲಬಾರಿ ವಾಣಿಜ್ಯಮಟ್ಟದಲ್ಲಿ ಹೆಚ್ಚು ಉಪಯುಕ್ತವಾದ ಶಾಖದಿಂದ ಬೆಳಗುವ ದೀಪವನ್ನು ಶೋಧಿಸಿದ ಅಮೆರಿಕದ ಸಂಶೋಧಕ ಥಾಮಸ್ ಎಡಿಸನ್‌ನ ಆನಂತರ ಇಂಥದೇ ದಿಶೆಯಲ್ಲಿ ಗೌರವಕ್ಕೆ ಪಾತ್ರನಾಗುವ ವ್ಯಕ್ತಿ ಕೊನ್ರಾಡ್ ಹ್ಯೂಬರ್ಟ್. ಶತಮಾನದ ಹಿಂದೆ ರಶಿಯದಿಂದ ಅಮೆರಿಕಕ್ಕೆ ಆಗಮಿಸಿದ ಹ್ಯೂಬರ್ಟ್ ಫ್ಲಾಶ್‌ಲೈಟನ್ನು ಸಂಶೋಧಿಸಿದ. ಒಂದು ರಾತ್ರಿ ಆತ ತನ್ನ ಮಿತ್ರನ ಮನೆಗೆ ಭೇಟಿ ನೀಡಿದಾಗ ಬೆಳಕಿನಲ್ಲಿ ಮಿಂಚುವ 'ಹೂಕುಂಡ' ವೊಂದನ್ನು ನೋಡಿದ. ಹೂಕುಂಡದ ಒಳಗೆ ಸಣ್ಣ ಬ್ಯಾಟರಿ ಮತ್ತು ಬಲ್ಬ್ ಅಳವಡಿಸಲಾಗಿತ್ತು. ಸ್ವಿಚ್ ಹಾಕಿದಾಕ್ಷಣ ಇಡಿ ಹೂಕುಂಡ ದೇದೀಪ್ಯಮಾನವಾಗಿ ಬೆಳಗುತ್ತಿತ್ತು. ಕ್ಷಣ ಹೊತ್ತು ಹ್ಯೂಬರ್ಟ್ ಅದನ್ನೇ ದಿಟ್ಟಿಸಿ ನೋಡಿದ. ಹ್ಯೂಬರ್ಟ್ ಒಂದು ಕೊಳವೆಯೊಳಗೆ ಬ್ಯಾಟರಿ ಹಾಗೂ ಬಲ್ಬ್‌ಗಳನ್ನು ಹಾಕಿ ಸ್ವಿಚ್ ಮೂಲಕ ಅದನ್ನು ಚಾಲೂ ಮಾಡಿ ಪರಿಶೀಲಿಸಿ ನೋಡಿದ. ಪರಿಣಾಮ ಫ್ಲಾಶ್ ಲೈಟ್ ಎಂಬ ಹೊಸ ವಸ್ತುವೊಂದು ನಮ್ಮ ಕೈಸೇರಿತು.

ರಬ್ಬರ್ ಪೆನ್ಸಿಲ್ ಕೂಡಾ ಸಣ್ಣ ಸಂಶೋಧನೆಗಳ ಯಾದಿಗೆ ಸೇರುತ್ತದೆ. ಫಿಲಡೆಲ್ಫಿಯದ ಎಚ್.ಎಲ್.ಲಿಪ್‌ಮನ್ ಎಂಬಾತ ಪೆನ್ಸಿಲ್ ಬರಹಗಳು ಚಿತ್ತಾದಾಗ ಅವನ್ನು ಅಳಿಸಿ ಹಾಕಲು ಹೊಸ ಸಾಧನವನ್ನು ವಿನ್ಯಾಸಗೊಳಿಸಿದ. ಆವರೆಗೂ ರಬ್ಬರ್ ತುಂಡುಗಳನ್ನು ಚಿತ್ತಾದ ಪೆನ್ಸಿಲ್ ಬರಹಗಳನ್ನ ಅಳಿಸಲು ಬಳಸುತ್ತಿದ್ದರು. ಈ ರಬ್ಬರ್ ತುಂಡು ಆಗಾಗ ಕಳೆದು ಹೋಗುತ್ತಿತ್ತು. 19ನೇ ಶತಮಾನದ ಮಧ್ಯಭಾಗದಲ್ಲಿ ಲಿಪ್‌ಮನ್ ಪೆನ್ಸಿಲಿನ ಕೊನೆಗೆ ರಬ್ಬರ್ ಬಿಗಿಯಾಗಿ ಅಂಟಿಕೊಳ್ಳುವ ವ್ಯವಸ್ಥೆ ಮಾಡಿ ರಬ್ಬರ್ ಸಹಿತ ಪೆನ್ಸಿಲನ್ನು ವಿನ್ಯಾಸಗೊಳಿಸಿದ.

ಕಿಂಗ್ ಜಿಲ್ಲೆಟೆಗೆ ನೇರವಾಗಿ ಬ್ಲೇಡಿನಿಂದ ಗಡ್ಡ ಕೆರೆಯಲು ಬಹಳ ಹಿಂಸೆಯಾಗುತ್ತಿತ್ತು. (ನಮಗೂ ಅಷ್ಟೇ ಅಲ್ಲವೇ?) ಆದ್ದರಿಂದ ಆತ ಸೇಫ್ಟಿ ರೇಜರ್‌ಗಳನ್ನು ವಿನ್ಯಾಸಗೊಳಿಸಿದ. ●

## ಆಶಾವಾದಿ - ನಿರಾಶಾವಾದಿ

*ನಗ್ನರ ಪಾಳೆಯಕ್ಕೆ ಹೋಗಿ ಅಲ್ಲಿರುವ ಜನರ ಕಿಸೆಯಿಂದ ಪರ್ಸ್ ಹಾರಿಸಿಕೊಂಡು ಬರುತ್ತೇನೆ ಎನ್ನುವ ಜೇಬುಗಳ್ಳ ಆಶಾವಾದಿ; ಹಾಕಿಕೊಂಡ ಇಜಾರ ಎಲ್ಲಿ ಕೆಳಗೆ ಬೀಳುತ್ತದೋ ಎಂದು ಹೆದರಿ ಬೆಲ್ಟ್ ಜೊತೆಗೆ ಸಸ್ಪೆಂಡರ್ಸ್ ಹಾಕಿಕೊಳ್ಳುವವ ನಿರಾಶಾವಾದಿ.*

*ಪರೀಕ್ಷೆಗೆ ಹೋಗದೆ ಪಾಸಾಗುತ್ತೇನೆ ಎನ್ನುವವ ಆಶಾವಾದಿ; ಎಲ್ಲಾ ಪತ್ರಿಕೆಗಳಿಗೆ ಸರಿಯಾಗಿ ಉತ್ತರ ಬರೆದೂ ತನ್ನ ತೇರ್ಗಡೆ ಬಗ್ಗೆ ಖಾತರಿ ಇಲ್ಲದಿರುವವ ನಿರಾಶಾವಾದಿ.*

*ಅಂಟಾರ್ಟಿಕಾದಲ್ಲಿ ಬರ್ಫ್ ಮಾರಬಲ್ಲೆ ಎನ್ನುವ ಹುಡುಗ ಆಶಾವಾದಿ; ಸಮುದ್ರದ ದಂಡೆಗೆ ಹೋದಾಗ ತನಗೆಲ್ಲಿ ಕಪ್ಪೆಚಿಪ್ಪು, ಶಂಖ ಸಿಗುವುದಿಲ್ಲವೋ ಎಂದು ಹೆದರುವವ ನಿರಾಶಾವಾದಿ.*

ಸಂಗ್ರಹ: **ಎಚ್.ಆರ್.ಸಿ**

ಕಥಾನುವಾದ

# ಈ ಹೃದಯ ಕರಗುವುದೇ?

ತೆಲುಗು ಮೂಲ: *ಮುಂಗಾರ ಶಂಕರರಾಜು*

ಕನ್ನಡಕ್ಕೆ: *ಸೊಂದಲಗೆರೆ ಲಕ್ಷ್ಮೀಪತಿ*

**ತೊಂ**ಟೆ ಎದೆಯಲ್ಲಿ ಸಿಕ್ಕಿಕೊಂಡು ಉಸಿರಾಟಕ್ಕೆ ತೊಂದರೆಯಾದಾಗ ಎಚ್ಚರಗೊಳ್ಳುತ್ತಿದ್ದೆ. ಆಗ ಮುಂಜಾನೆ ನಾಲ್ಕು ಗಂಟೆ. ಶುಷ್ಕ ಅನ್ನನಾಳದಲ್ಲಿ, ಉಸಿರು ಗೊಗ್ಗರು ಧ್ವನಿ ಮಾಡುತ್ತ ತೊಂಟೆಯ ಪೊರೆಯನ್ನು ಭೇದಿಸಿಕೊಂಡು ಹೊರಬರಲು ಹೆಣಗಾಡುತ್ತಿತ್ತು. ಸರದಿಯ ಮೇಲೆ ಬರುವ ಕೆಮ್ಮಿನೊಂದಿಗಿನ ಹೋರಾಟ. ಈ ಚಳಿಗಾಲದಲ್ಲಿ ಪ್ರತಿ ಮುಂಜಾನೆ ನನ್ನ ಕಸರತ್ತಿನ ಸರದಿ ಇದೇ ಆಗಿತ್ತು.

ಒಂದು ಗಂಟೆ ಹಿಂದೆ ಒಂದೇ ಸಮನೆ ಸರದಿಯ ಮೇಲೆ ಕೆಮ್ಮಿದ ಬಳಿಕ ಗಂಟಲು ಮತ್ತು ಎದೆಯಲ್ಲಿ ನೋವು ಕಾಣಿಸಿಕೊಂಡಿತ್ತು. ಕೊರೆಯುವ ಈ ಚಳಿಗಾಲದಲ್ಲೂ ಕತ್ತಿನ ಕೆಳಭಾಗದಲ್ಲಿ ಬೆವರಹನಿಗಳು ಪೋಣಿಸಿದ್ದವು. ಮಂಚದಡಿ ಇಟ್ಟಿದ್ದ ಮರಳು ತುಂಬಿದ ಅಲ್ಯೂಮಿನಿಯಮ್ ತಟ್ಟೆ ತುಂಬ ತೊಂಟೆ ತುಂಬಿತ್ತು.

> "ಮುಪ್ಪು ಆವರಿಸುತ್ತಿದ್ದಂತೆ ಮನುಷ್ಯರು, ಸಮಾಜ ಹಾಗೂ ಜಗತ್ತಿನೊಂದಿಗೆ ಸಂಬಂಧ ಕಳಚಿಕೊಳ್ಳುತ್ತದೆ. ಆಮೇಲೆ ಕ್ರಮೇಣ 'ಜಗತ್ತು ಕಿರಿದಾಗುತ್ತಲಿದೆ ಅನಿಸುತ್ತದೆ'. ಮುಪ್ಪು ವ್ಯಕ್ತಿಯನ್ನು ದ್ವೀಪವನ್ನಾಗಿ ಸಿಬಿಡುತ್ತದೆ..."

ಉಬ್ಬಸ, ಆಯಾಸ, ಸುಸ್ತು, ಹಾಸಿಗೆ ಪಕ್ಕ ಔಷಧಿ ಶೀಶೆ, ತಲೆದಿಂಬಿನ ಕೆಳಗೆ ಅಮೃತಾಂಜನ. ಆದರೆ ಬಗ್ಗಿ ಅವುಗಳಲ್ಲಿ ಒಂದನ್ನು ಕೈಗೆತ್ತಿಕೊಳ್ಳುವಷ್ಟು ತ್ರಾಣವೂ ಇಲ್ಲ.

ಆಗಲೇ ಐದು ಗಂಟೆ. ಸುತ್ತೆಲ್ಲ ಕತ್ತಲೆಯ ಪರದೆ ಆವರಿಸಿದೆ. ಪಾರ್ಕಿನಲ್ಲಿ ಮರಗಳು ಕತ್ತಲೆಯ ಛಾಯೆ ರೂಪ ಆವರಿಸಿದೆ. ಮೇಲೆ ಮೂಳೆ ಕೊರೆವ ಚಳಿ. ಸರದಿಯ ಮೇಲೆ ಒಂದೇ ಸಮನೆ ಬಂದ ಕೆಮ್ಮು ನೆತ್ತಿಗೇರಿ ಬೇನೆ ಶುರುವಾಯಿತು. ಅಲ್ಲದೆ ಕಣತಲೆ ಜೋಮು ಹಿಡಿಯಿತು. ಕಿವಿ, ಕತ್ತಿನ ಸುತ್ತ ಶಾಲನ್ನು ಭದ್ರವಾಗಿ ಸುತ್ತಿದೆ. ಬಿಟ್ಟು ಬಿಟ್ಟು ಬಡಿವ ಹಕ್ಕಿಗಳ ರೆಕ್ಕೆಯ ಬಡಿತವನ್ನು ಕೇಳುತ್ತಾ ಕುಳಿತೆ.

ನನಗೆ ಕೆಮ್ಮು, ಕೆಮ್ಮಿಗೆ ನಾನು. ಒಬ್ಬರಿಗೆ ಮಗದೊಬ್ಬರು. ಏಕಾಂತದಲ್ಲೂ ನಾವು ಸಂಗಾತಿಗಳು. ಹಗಲಿನ ಇಷ್ಟೊತ್ತಿನಲ್ಲಿ ನಮ್ಮನ್ನು ಯಾರೂ ಮಾತನಾಡಿಸುವುದಿಲ್ಲ, ಅಲ್ಲದೇ ಯಾರೂ ನಮ್ಮನ್ನು ಲೆಕ್ಕಕ್ಕೆ ತೆಗೆದುಕೊಳ್ಳುವುದಿಲ್ಲ. ಆದರೂ ಈ ನೀರವತೆಯಲ್ಲಿ ಸ್ವರವೊಂದು ತೂರಿಬಂತು - "ಕಾಫಿ ತಗೊಳ್ಳಿ, ಬಿಸಿ ಬಿಸಿಯಾಗಿ ತಂದಿದ್ದೀನಿ." ಸ್ವರವನ್ನು ಗುರುತಿ

ಸಿದೆ, ಅದು ನಮ್ಮ ಪಕ್ಕದ ಮನೆಯ ಜಗದಾಂಬ ಳದು. ಕಣ್ಣು ಬಿಟ್ಟೆ. ಕೈಯಲ್ಲಿ ಕಾಫಿ ಲೋಟ ಹಿಡಿದು ನನ್ನ ಮಂಚದ ಎದುರು ಆಕೆ ನಿಂತಿದ್ದಳು.

ಕೊಂಚ ಮೌನ, ಅರೆನಾಚಿಕೆ, ಅಲ್ಲದೆ ಸ್ವಲ್ಪ ನೈಚ್ಯಭಾವ ಮತ್ತು ಹಿಂಜರಿಕೆ ಅವಳಲ್ಲಿ ವ್ಯಕ್ತ ವಾಗುತ್ತಿತ್ತು.

''ಇಷ್ಟೊತ್ತಿಗೇನೆ ಯಾಕೆ ಇಷ್ಟೊಂದು ತೊಂದರೆ ತಗೊಂಡ್ರಿ?''

''ಅದೆಂತ ತೊಂದ್ರೆ, ನಮಗೆ ಮಾಮೂಲಿ ಇದು. ದಿನಾಲೂ ಇಷ್ಟೊತ್ತಿಗೆ ನಾವು ಕಾಫಿ ಮಾಡ್ತೀವಿ.'' ಎಂದ ಆಕೆ ಕಾಫಿ ಬಟ್ಟಲನ್ನು ನನ್ನ ಕೈಗಿತ್ತಳು.

ತೆಗೆದುಕೊಂಡೆ.

''ಉಸಿರಾಡೊಕ್ಕು ಆಗ್ತಿಲ್ಲ ನಿಮಗೆ. ನಿಧಾನ ವಾಗಿ ಕುಡೀರಿ. ಆಮೇಲೆ ಲೋಟ ತಗೊಂಡು ಹೋಗ್ತಿನಿ'' ಎನ್ನುತ್ತ ಆಕೆ ಹೊರನಡೆದಳು. ನಾನು ಕಾಫಿ ಗುಟುಕರಿಸಿದೆ. ಅನ್ನನಾಳದೊಳಕ್ಕೆ ಬಿಸಿ ಬಿಸಿ ಕಾಫಿ ಜಾರಿತು. ಉಸಿರಾಟ ಸರಾಗವಾ ಯಿತು. ಮನಸ್ಸಿಗೆ ನೆಮ್ಮದಿಯಾಯಿತು. ಆ ಕ್ಷಣದಲ್ಲಿ ಆಕೆ ದೇವತೆಯಂತೆಯೂ ಅಲ್ಲದೆ ಕಾಫಿ ಆ ದೇವರು ನೀಡಿದ ಅಮೃತದಂತೆಯೂ ತೋರಿತು. ದೀರ್ಘವಾಗಿ ಉಸಿರೆಳೆದುಬಿಟ್ಟೆ. ಅನಂತರ ಸಿಗರೇಟೊಂದನ್ನು ಹಚ್ಚಿದೆ.

ಪಾರ್ವತಿ ನೆನಪಿಗೆ ಬಂದಳು. ಮುಂಜಾನೆಯ ಕಾಫಿ ಅಭ್ಯಾಸವನ್ನು ನನಗೆ ಪಾರ್ವತಿ ಮಾಡಿಸಿ ದ್ದಳು. ಅದಕ್ಕೂ ಮುಂಚೆ ನಾನೆಂದೂ ಬೆಡ್ ಕಾಫಿ ಕುಡಿದವನಲ್ಲ. ಮದುವೆಯಾದ ತತ್ ಕ್ಷಣವೇ ನಾವು ಬ್ರಾಹ್ಮಣರ ಬೀದೀಲಿ ವಾಸಕ್ಕೆ ಮನೆ ಹಿಡಿದೆವು. ಮುಂಜಾನೆ ಐದು ಗಂಟೆಗೆ ಹಾಲು ಬರುತಿತ್ತು. ಪಾರ್ವತಿ ಆ ಕೂಡಲೇ ಬಿಸಿ ಬಿಸಿ ಕಾಫಿ ಮಾಡಿ ನನ್ನ ಮಂಚದ ಬಳಿ ತಂದಿಡು ತ್ತಿದ್ದಳು.

ಬಾಯಿ ಮುಕ್ಕಳಿಸಿ, ಕಾಫಿ ಸೇವಿಸಿ, ಸಿಗರೇಟ್ ಒಂದನ್ನು ಹಚ್ಚಿ, ಸನ್ಯಾಸಿಯಂತೆ ಕುಳಿತು ಆ ಕಾಫಿ ಸ್ವಾದದ ಪ್ರತಿ ಗುಟುಕನ್ನು ಆಸ್ವಾದಿಸುತ್ತಿದ್ದೆ ಆನಂದದಲ್ಲಿ. ಅಲ್ಲಿಂದೀಚೆಗೆ ನನ್ನ ಸ್ವರವು ಬೆಡ್ ಕಾಫಿಗಾಗಿ ಹಾತೊರೆಯುತ್ತಿದೆ.

ಈ ಭಯಂಕರ ಅಸ್ತಮಾ ನನಗೆ ಅಂಟಿದಾಗಿ ನಿಂದ ಮುಂಜಾನೆ ಬಿಸಿ ಕಾಫಿ ನನಗೆ ಅನಿವಾ ರ್ಯವಾಗಿದೆ. ಈಗ ಪಾರ್ವತಿಯೂ ಇಲ್ಲ. ಕಾಫಿ ಕುಡಿಯುವ ಭಾಗ್ಯನೂ ಇಲ್ಲ. ಆರುಗಂಟೆಯ ನಂತರ ನಮ್ಮ ಮನೆ ಬಾಗಿಲು ಅಕಳಿಸುತ್ತಾ ಬಾಯಿ ತೆರೆಯುತ್ತದೆ. ಆಮೇಲಷ್ಟೇ ಕಾಫಿ ಬರುವುದು ನನಗೆ.

ಆರುಗಂಟೆಯ ನಂತರ ಬಾಗಿಲು ತೆರೆದು ಹೊರಬಂದ ನನ್ನ ಸೊಸೆ ಖಾಲಿ ಲೋಟ ನೋಡಿ ಆಶ್ಚರ್ಯಗೊಂಡಳು. ಅದರ ಬಗ್ಗೆ ವಿಚಾರಿಸಿದಳು ಕೂಡ. ನನ್ನ ಮಗ ಮತ್ತು ಸೊಸೆ ನಡುವೆ ಸಣ್ಣ ವಾಗ್ವಾದವೂ ಇದರ ಮೇಲೆ ನಡೆಯಿತು.

''ಹೊತ್‌ನಂತೆ ಎದ್ದು ನಮ್ಮಪ್ಪಂಗೆ ಒಂದು ಲೋಟ ಕಾಫಿ ಮಾಡ್ಕೋಡಾಕ್ಕಾಗಲ್ವ ನಿನ್ಗೆ?'' ಎಂದು ನನ್ನ ಮಗ ಹೆಂಡತಿಗೆ ಬಯ್ದಿದ್ದ.

ಜಗದಾಂಬ ಲೋಟ ತೆಗೆದುಕೊಳ್ಳಲು ಬಂದ ವಳು ಮಧ್ಯೆ ಬಾಯಿ ಹಾಕಿ ''ಎಳೆ ಮಗು ಇದೆ. ಅಲ್ಲದೆ ಹಾಲು ಕುಡಿಸಕ್ಕೆ ಮಧ್ಯ ರಾತ್ರೀಲಿ ಏಳಬೇಕು. ಪುನಃ ಹೊತ್ತಿನಂತೆ ಏಳಬೇಕು ಅಂದರೆ ಕಷ್ಟನೇ. ಹೇಗಿದ್ರೂ ನಾವು ಹೊತ್ ನಂತೆ ಏಳ್ತೀವಿ. ದೂರಾನೂ ಇಲ್ಲ ಮನೆ. ವಯಸ್ಸಾದೋರಿಗೆ ಒಂದು ಲೋಟ ಕಾಫಿ ಕೊಡ್ತೀನಿ, ಅದೇನು ತೊಂದ್ರೆ?'' ಎಂದ ಆಕೆ ಮೆಲ್ಲನೆ ಹೊರನಡೆದಳು.

ನಾವು ಸರ್ಕಾರಿ ಕ್ವಾರ್ಟರ್ಸ್‌ನಲ್ಲಿದ್ದೆವು. ಅವು ಪಟ್ಟಣದಿಂದ ಹೊರಗಿದ್ದವು. ನಮ್ಮ ಮನೆ ಎದುರಿನ ವಿಶಾಲ ಬಯಲಿನಲ್ಲಿ ಕುರುಚಲು ಗಿಡಗಳ ಪೊದೆ ಬೆಳೆದು ನಿಂತಿತ್ತು. ಹಲವೆಡೆ ಗುಡ್ಡಗಳು ಇದ್ದವು. ಅವುಗಳನ್ನು ಸುತ್ತು ಬಳಸಿ ದಂತೆ ಟಾರ್ ರಸ್ತೆ ಇತ್ತು. ಅವುಗಳನ್ನು ವರ್ತುಲ ರಸ್ತೆ ಎಂದು ಕರೆಯುತ್ತಿದ್ದರು. ಗುಡ್ಡದ ಮೇಲೆ ರಸ್ತೆ ಪಕ್ಕದಲ್ಲಿ ಅಪಾರ ಬೆಲೆ ಬಾಳುವ ಬೀಟೆ

ಮರಗಳನ್ನು ಅರಣ್ಯ ಇಲಾಖೆಯವರು ಬೆಳೆಸಿದ್ದರು. ಸುತ್ತಮುತ್ತೆಲ್ಲ ನಿತ್ಯ ಹಸಿರು, ತಂಪು ಹವೆ, ಜೊತೆಗೆ ಪ್ರಶಾಂತತೆ ಹರಡಿತ್ತು.

ಪ್ರತಿ ಬ್ಲಾಕಿನ ಪ್ರತಿ ಕಂಪೌಂಡಿನಲ್ಲೂ ಎರಡೆರಡು ಭಾಗಗಳು. ಒಂದು ಭಾಗದಲ್ಲಿ ನಾವು, ಮತ್ತೊಂದರಲ್ಲಿ ಜಗದಾಂಬಳ ಸಂಸಾರವಿತ್ತು. ಅವಳ ಅಳಿಯ ಭೂಗರ್ಭಶಾಸ್ತ್ರಜ್ಞ. ಅವನ ಹೆಸರು ವಿಶ್ವನಾದಮ್. ಅವಳ ಮಗಳು ದುರ್ಗಾಂಬ, ಬಿ.ಎಡ್ ಪದವಿಧರೆ ಅಂತ ಅನ್ನಿಸುತ್ತಿತ್ತು. ಆಕೆ ಸೋಮಾರಿಯಾಗಿ ಮನೆಯಲ್ಲಿ ಕೂತು ಕಾಲಕಳೆಯಲು ಬಯಸವೆ ಕಾನ್ವೆಂಟ್ ವೊಂದರಲ್ಲಿ ಟೀಚರ್ ಆಗಿ ಕೆಲಸ ಮಾಡುತ್ತಿದ್ದಳು. ಅವರಿಗೆ ಪ್ರಸನ್ನ ಎಂಬ ಹೆಸರಿನ ನಾಲ್ಕು ವರುಷದ ಮಗಳು ಇದ್ದಳು. ಅವರೊಟ್ಟಿಗೆ ಜಗದಾಂಬ ವಾಸಿಸುತ್ತಿದ್ದಳು. ಈ ಟೌನಿಗೆ ಅವರು ಬಂದು ನಾಲ್ಕು ತಿಂಗಳಾಗಿತ್ತಷ್ಟೇ.

ಆ ಸಂಸಾರದೊಂದಿಗೆ ನನಗೆ ಅಷ್ಟೇನು ವಾಡಿಕೆ ಇರಲಿಲ್ಲ. ನನ್ನ ಒಂಟಿತನವೇ ನನ್ನದು. ಜಗದಾಂಬ ಆಗಾಗ್ಗೆ ನಮ್ಮ ಮನೆಗೆ ಬರುತ್ತಿದ್ದಳು. ನನ್ನ ಸೊಸೆಗೆ ಹೊಸ ಹೊಸ ಅಡುಗೆ ಮಾಡುವುದನ್ನು ಉಪ್ಪಿನಕಾಯಿ ಹಾಕುವುದನ್ನು ಹೇಳಿಕೊಡುತ್ತಿದ್ದಳು. ಆಕೆ ಆದರಣೆಯ ಹೆಂಗಸು. ಸದಾ ಮುಖದಲ್ಲಿ ನಸುನಗೆಯನ್ನು ಬೀರುತ್ತ ಉತ್ಸಾಹದಿಂದ ಇರುತ್ತಿದ್ದಳು.

ಒಮ್ಮೆಗೆ ಮುಪ್ಪು ನನ್ನನ್ನು ಆವರಿಸುತ್ತಿದ್ದಂತೆ ಮನುಷ್ಯರು ಸಮಾಜ ಹಾಗೂ ಜಗತ್ತಿನೊಂದಿ



ಗಿನ ನನ್ನ ಸಂಬಂಧ ಒಂದೊಂದಾಗಿ ಕಳಚಿಬಿತ್ತು. ನಾನು ಈ ವರಾಂಡಕ್ಕೆ ಜೋತುಬೀಳುವವರೆಗೆ ಅಷ್ಟೆ, ಆಮೇಲೆ ಕ್ರಮೇಣ ನನ್ನ ಜಗತ್ತು ಕಿರಿದಾಗುತ್ತ ಬಂದಿತು. ಸಂಬಂಧಿಕರೊಂದಿಗೆ ನಾನು ಇದ್ದರೂ ಒಂಟಿ. ಮುಪ್ಪು ನನ್ನನ್ನು ದ್ವೀಪದಂತೆ ಮಾಡಿದೆ.

ದಿನಗಳು ಬಹು ಪ್ರಯಾಸದಿಂದ ಉರುಳುತ್ತಿವೆ. ರಾತ್ರಿಗಳು ಹೆಚ್ಚು ಹೆಚ್ಚು ದೈನ್ಯಗೊಳ್ಳುತ್ತಿವೆ. ನನ್ನವರು ರಾತ್ರಿ ಸಿನಿಮಾದಿಂದ ಬಂದ ಮೇಲೆ ಊಟ ಮಾಡಿ, ರೇಡಿಯೊ ಆಲಿಸಿ, ಸ್ವಲ್ಪ ಹೊತ್ತು ಹರಟೆ ಹೊಡೆದ ನಂತರ ಬಾಗಿಲು ಭದ್ರಪಡಿಸುತ್ತಿದ್ದರು. ದೀಪ ಆರಿಸುತ್ತಿದ್ದರು. ಈ ವರಾಂಡದ ಮಂಚದ ಮೇಲೆ ನಾವಿಬ್ಬರೆ, ನಾನು, ನನ್ನ ಒಂಟಿತನ. ಅವರ್‍ಯಾರೂ ನನ್ನನ್ನು ಮಾತನಾಡಿಸುವ ಅಥವಾ ನನ್ನ ಬಗ್ಗೆ ವಿಚಾರಿಸುವ ಗೊಡವೆ ತೆಗೆದುಕೊಳ್ಳುತ್ತಿರಲಿಲ್ಲ.

ಕೆಲಸ ಇಲ್ಲ, ಹೊತ್ತು ಹೋಗದು, ನಿದ್ದೆ ಬಾರದು. ಮಲಗಿದರೂ ಬೇಗನೆ ಎಚ್ಚರಗೊಳ್ಳುತ್ತಿದ್ದೆ. ಎದ್ದು ಕುಳಿತೆ. ಅಂತಹ ನೀರವ, ಗಾಢಾಂಧಕಾರ ಕತ್ತಲೆಯಲ್ಲಿ ಯೋಚನೆಗಳು ದಪ್ಪ ಸೊಳ್ಳೆಗಳ ಹಿಂಡಿನಂತೆ ಮುಸುಕುತ್ತಿದ್ದವು. ಗತ ಕಾಲದ ನೆನಪು ನನ್ನ ಬೆನ್ನು ಹತ್ತಿತು.

ಗಂಡು ಮಕ್ಕಳು, ಹೆಣ್ಣು ಮಕ್ಕಳು, ಅಳಿಯಂದಿರು ಗಳಿಸಲು ಪ್ರಾರಂಭಿಸಿದರು. ತಮ್ಮ ಕಾಲ ಮೇಲೆ ತಾವು ನಿಂತರು, ಮೇಲಾಗಿ ಜೀವನದಲ್ಲಿ ಮೇಲೇರಿದರು. ನಾನು ಅವರಿಗೆ ಬೇಕಾಗೂ ಇರಲಿಲ್ಲ. ಅಲ್ಲದೆ ನನ್ನನ್ನು ಅವರು ಅವಲಂಬಿಸಿಯೂ ಇರಲಿಲ್ಲ. ನನ್ನ ಅನುಭವ ಹಾಗೂ ಸಲಹೆ ಅವರಿಗೆ ಅಗತ್ಯವೆನಿಸಲಿಲ್ಲ. ಅವುಗಳನ್ನು ಅವರು ಹೋಗಲಿ ಮೆಚ್ಚಲೂ ಇಲ್ಲ. ಸಾಂಬಾರಿನಲ್ಲಿ ಬಳಸಿ ಅನಂತರ ಬಿಸಾಡುವ ಕರಿಬೇವಿನ ಎಲೆಯಂತೆ ಆದೆ ನಾನು. ಅವರು ಸೌಜನ್ಯದಿಂದಲೇ ನನ್ನನ್ನು ಪಕ್ಕಕ್ಕೆ ತಳ್ಳಿದರು. ಮನೆಯನ್ನು ಚೊಕ್ಕಟ ಮಾಡುವಾಗ ಅನುಪಯುಕ್ತ ಹಾಗೂ ಮುರಿದ ವಸ್ತುಗಳನ್ನು ಮೂಲೆಗೆ ತಳ್ಳುತ್ತಾರೆ. ಸ್ವಲ್ಪ ಹೊತ್ತಿನ ಬಳಿಕ ಅವುಗಳನ್ನೆತ್ತಿ ಬೀದಿ ಬದಿಯ ಕಸದ ತೊಟ್ಟಿಗೆ ಎಸೆಯುತ್ತಾರೆ. ಈಗ ನನ್ನ ಬಾಳು ಸಹ ಹಾಗೆಯೇ ನಿಷ್ಪ್ರಯೋಜಕವಾಗಿದೆ. ಈಗ ಬಾಕಿ ಉಳಿದಿರುವುದು ಅಂದರೆ ಆಚೆಗೆ ಎಸೆಯುವುದೊಂದೆ.

ನಾನೇನಾದರೂ ಸಂಸಾರದ ದಿನಚರಿ ವಿಷಯಗಳನ್ನು ಮಾತನಾಡಲು ಪ್ರಾರಂಭಿಸಿದರೆ ''ಅಪ್ಪ, ಇನ್ನೂ ಯಾಕೆ ಈ ವಿಷಯವನ್ನೆಲ್ಲ ಇಷ್ಟೊಂದು ತಲೆಗೆ ಹಚ್ಚಿಕೊಳ್ತಿಯಾ? ಆರಾಮಾಗಿ ಕುಳಿತು ಯಾವುದಾದರೂ ಪುಸ್ತಕ ಓದು. ಅಥವಾ ಕಣ್ಣು ಮುಚ್ಚಿ ರಾಮಕೃಷ್ಣ ಅಂತ ಅನ್ನು.'' ಈ ಮಾತು ಕೈದಿಯನ್ನು ನೇಣು ಹಾಕುವ ಮುನ್ನ ಅವನಿಗೆ ಅಂತಿಮ ಪ್ರಾರ್ಥನೆಯನ್ನು ಮಾಡುವಂತೆ ನೀಡುವ ಹಿತವಚನದಂತ ತೋರಿತು ನನಗೆ.

ಸಾವು ಬದುಕಿನ ನಡುವೆ ಡೋಲಾಯಮಾನವಾಗಿರುವ ಈ ಜೀವಂತ ಅಸ್ಥಿಪಂಜರದಿಂದ ಜನರಿಗೆ ಆಗುವ ಪ್ರಯೋಜನವಾದರೂ ಏನು? ಈ ನಿಷ್ಪ್ರಯೋಜಕ ಜೀವನ ಅವರ ಎಂತಹ ತಾತ್ಸಾರ ಹಾಗೂ ನಿರ್ಲಕ್ಷ್ಯವನ್ನು ಸ್ವೀಕರಿಸುತ್ತದೆ.

ಶಾಂತವಾಗಿ ಕುಳಿತು ಯೋಚಿಸಿದರೆ ನನಗೆ ನಾನೇ ಮರುಕ ಪಡಬೇಕಾಗುತ್ತದೆ. ಆದರೆ ನನ್ನನ್ನು ಉಪೇಕ್ಷಿಸಿದ್ದಾರೆ ಎಂದು ಬೇರೆ ಯಾರನ್ನೂ ನಾನು ಬಯ್ಯಲಾರೆ. ಅವರೆಲ್ಲರಿಗೂ ಪುಟ್ಟ ಮಕ್ಕಳಿವೆ ಆರೈಕೆ ಮಾಡಲು. ಉಸಿರಾಡಲೂ ಪುರಸೊತ್ತಿಲ್ಲ. ವಿಶ್ರಾಂತಿ ಇಲ್ಲದ ದಿನ. ಸದಾ ಅವಿಶ್ರಾಂತ ಬದುಕು. ಇಂದಿನ ನಗರ ಜೀವನದಲ್ಲಿ ವೃದ್ಧರನ್ನು, ರೋಗಿಗಳನ್ನು ಶುಶ್ರೂಷೆ ಮಾಡಲು ಸಮಯವಾದರೂ ಎಲ್ಲಿ? ಯಾರನ್ನಾದರೂ ಬಯ್ಯುವುದರಲ್ಲಿ ಪ್ರಯೋಜನ ಏನು? ಮಧ್ಯಮ ವರ್ಗದ ಜನರ ಬದುಕೇ ಹೀಗೆ.

ಈ ನೋವಿನ ನಡುವೆಯೂ ನನ್ನ ಆಲೋಚನೆಗಳು ಹಾಗೆಯೆ ಉರುಳುತ್ತಾ ಹೋದವು.




ಮಧ್ಯರಾತ್ರಿಯ ಸ್ವಲ್ಪ ಹೊತ್ತಿನ ಬಳಿಕ ನಾನು ನಿದ್ರೆಗೆ ಜಾರಿಕೊಂಡೆ.

ಎಂದಿನಂತೆ ನಾನು ಕತ್ತಲೆಯಿದ್ದಂತೆ ಎಚ್ಚರಗೊಂಡೆ. ಜಗದಾಂಬ ಅವರ ಮನೆಯ ಕೆಲಸದವಳ ಕೈಯಲ್ಲಿ ಮೆಣಸು ಮತ್ತು ಒಣಶುಂಠಿ ಹಾಕಿ ಮಾಡಿದ ಕಾಫಿ ಕಳಿಸಿಕೊಟ್ಟಳು. ಮೆಣಸಿನ ಗಾಟು ಮತ್ತು ಬಿಸಿ ಕಾಫಿ ನನ್ನ ಗಂಟಲಿಗೆ ಹಗುರವನ್ನು ತಂದಿತ್ತಿತು. ಪುನಃ ನಾನು ಜಗದಾಂಬಳನ್ನು ದೇವದೂತೆ ಎಂದು ಭಾವಿಸಿಕೊಂಡೆ. ಅವಳ ಆದರಣೆ ಮತ್ತು ವಾತ್ಸಲ್ಯ ಹಾಗೂ ನನ್ನ ಆರೋಗ್ಯದ ವಿಚಾರಣೆಯಲ್ಲಿ ಅವಳು ತೋರುತ್ತಿದ್ದ ಕಾಳಜಿ ಒಣಗಿ ಬತ್ತಿ ಹೋದ ನೆಲದ ಮೇಲೆ ಮೊದಲ ಬಾರಿಗೆ ಬಿದ್ದ ಮಳೆಯಂತೆ ತೋರಿತು. ನಾನು ಕಣ್ಣು ಮುಚ್ಚಿ ನನ್ನ ಹೃದಯದಲ್ಲಿ ಅವಳನ್ನು ಅಭಿನಂದಿಸಲು ಪ್ರಾರಂಭಿಸಿದೆ.

ನನ್ನ ಕಾಲ ಬಳಿ ಕೇಳಿ ಬಂದ ಧ್ವನಿಯಿಂದ ಕಣ್ಣು ಬಿಟ್ಟೆ. ಎದುರಿಗೆ ರಾಹುಲ್. ನನ್ನ ಮಂಚದಡಿ ಇಟ್ಟಿದ್ದ ಪೀಕದಾನಿಯನ್ನು ಎಳೆದುಕೊಂಡು ಕೆಮ್ಮುತ್ತ ಅದರೊಳಗೆ ಉಗುಳುತ್ತಿದ್ದ. ತುಂಟ ಹುಡುಗ. ನೆಲದ ಮೇಲೆ ಎರಡು ಅಡಿಯೂ ಇಲ್ಲ. ತನ್ನಜ್ಜನಿಗೆ ಹೇಗೆ ಕೆಮ್ಮ ಬೇಕೆಂದು ಕಲಿಸುತ್ತಾನೆ. ನನಗೆ ತುಂಬಾ ಖುಷಿ ನೀಡುತ್ತಿದ್ದ. ಅವನನ್ನು ತೊಡೆ ಮೇಲೆ ಕುಳ್ಳಿರಿಸಿಕೊಂಡು ಮುದ್ದಿಸಿದೆ.

ಹಗಲು ಉರುಳಿ. ಪೇಪರ್ ಹಾಕುವ ಹುಡುಗ ವರಾಂಡಕ್ಕೆ ಪೇಪರ್ ಎಸೆದು ಹೋದ. ರಾಹುಲ್ ದಿಢೀರನೆ ನನ್ನ ತೊಡೆ ಮೇಲಿಂದ ಜಗಿದ. ಮನೆ ಒಳಗೆ ಓಡಿದವನೇ ನನ್ನ ಕನ್ನಡಕ ತಂದ. ತನ್ನ ಕಿವಿಗೆ ಏರಿಸಿದ; ಪೇಪರ್ ಮೇಲೆ ಬಾಗಿ ಅ...ಅ...ಕ. ಎಂದು ಓದಲು ಪ್ರಾರಂಭಿಸಿದ. ಬೆನ್ನ ಮೇಲೆ ಮೃದುವಾಗಿ ತಟ್ಟುತ್ತ ಪುನಃ ಅವನನ್ನು ಎತ್ತಿಕೊಂಡು ತೊಡೆಯ ಮೇಲೆ ಕೂರಿಸಿಕೊಂಡೆ.

ರಾಹುಲ್‌ನಿಗೆ ಇನ್ನೂ ಎರಡು ತುಂಬಿಲ್ಲ. ಅವರವ್ವನ ಮಡಲಿನಿಂದ ಏಳುತ್ತಿದ್ದಂತೆ ಕಣ್ಣುಜ್ಜುತ್ತ ನನ್ನ ಹತ್ತಿರ ಬರುತ್ತಾನೆ. ಅಲ್ಲಿಂದಾಚೆಗೆ ನಾನು ನನ್ನ ಇಡಿ ದಿನದ ವೇಳೆಯನ್ನೆಲ್ಲ ಅವನೊಂದಿಗೆ ಕಳೆಯುತ್ತೇನೆ. ಅವನೆ ನನ್ನ ಜಗತ್ತು. ನಿಸ್ತೇಜವಾದ ನನ್ನ ಜೀವನಕ್ಕೆ ಉಸಿರು ಮತ್ತು ಚೇತನ ಅವನೇ. ಅವನ ವಾತ್ಸಲ್ಯವೊಂದೇ ಈಗ ನನಗೆ ಉಳಿದಿರುವುದು. ಪ್ರಾಯಶಃ ಅನಾಥ ಅಜ್ಜಂದಿರು ಮೊಮ್ಮೊಕ್ಕಳಲ್ಲಿ ಮಾತ್ರವೇ ತಮ್ಮ ಒಡನಾಡಿಯನ್ನು ಕಾಣಬಲ್ಲರು. ಅಜ್ಜಂದಿರು ಚಿತೆ ಏರಲು ಅವಸರಿಸದೆ ಬದುಕಲು ಆಸೆಯನ್ನು ಇಟ್ಟುಕೊಂಡಿದ್ದೇ ಆದರೆ ಅದಕ್ಕೆ ಅವರ ಮೊಮ್ಮೊಕ್ಕಳು ಮಾತ್ರವೇ ಕಾರಣ. ಈ ಇಳಿಜೀವನದ ಮುಚ್ಚಂಜೆಯ ಕತ್ತಲೆಯಲ್ಲಿ ನನ್ನ ಮೊಮ್ಮೊಗ ರಾಹುಲ್ ಒಂದು ಅಸ್ಪಷ್ಟ ಬೆಳಕಿನ ಕಿರಣ.

ತರಕಾರಿ ಮಾರುವವಳು ರಸ್ತೆಯಲ್ಲಿ ಹೋಗುತ್ತಿರುವುದನ್ನು ನಾವು ನೋಡುತ್ತಿದ್ದೆವು. ರಾಹುಲ್ ಗೇಟ್ ಹತ್ತಿರ ಓಡಿ ಹೋಗಿ 'ತರ' 'ರಿ' ಎನ್ನುತ್ತಿದ್ದ. ತರಕಾರಿ ಮಾರುವ ಲಕ್ಷ್ಮಿ

ಅವನ ಕೆನ್ನೆ ಹಿಂಡಿ ಕೈಗೊಂದು ಟೊಮೆಟೊ ಇಡುತ್ತಿದ್ದಳು ಹೋಗುವ ಮುನ್ನ. ಲಕ್ಷ್ಮಿ ಬಂದು ಕಂಕುಳಲ್ಲಿ ಮಗು ಎತ್ತಿಕೊಂಡು ಮತ್ತೊಂದರಲ್ಲಿ ತರಕಾರಿ ಗಾಡಿಯನ್ನು ನೂಕುತ್ತಿದ್ದಳು. ನಿತ್ಯ ನಮ್ಮ ಕ್ವಾರ್ಟರ್ಸ್‌ಗೆ ತರಕಾರಿ ಮಾರಲು ಬರುತ್ತಿದ್ದಳು. ನಾವೆಲ್ಲರೂ ಅವಳನ್ನು ಚೆನ್ನಾಗಿ ಬಲ್ಲೆವು. ಅವಳ ಮನೆ ನಮ್ಮ ಕ್ವಾರ್ಟರ್ಸ್‌ಗೆ ಹತ್ತಿರವೇ ಇತ್ತು.

ಆಗಾಗ್ಗೆ ಲಕ್ಷ್ಮಿ ನನ್ನ ಹತ್ತಿರ ಬರುತ್ತಿದ್ದಳು, ಬ್ಯಾಂಕ್ ಸಾಲದ್ದೊ ಮನೆ ಸೈಟಿನದ್ದೋ ಅರ್ಜಿಯನ್ನು ಭರ್ತಿ ಮಾಡಿಸಿಕೊಳ್ಳಲು. ಈವರೆಗೆ ಅವಳಿಗೆ ಯಾವ ತಹಸೀಲ್ದಾರ್ ಅಥವಾ ಬ್ಯಾಂಕ್ ಸೈಟಾಗಲೀ, ಸಾಲ ಆಗಲಿ ಕೊಟ್ಟಿಲ್ಲ. ಆದರೂ ಕೂಡ ಪ್ರತಿ ವರುಷ ಅರ್ಜಿ ಹಾಕುವುದನ್ನು ಮುಂದುವರಿಸಿಕೊಂಡು ಬಂದಿದ್ದಾಳೆ. ಅವಳ ಬಹುದಿನದ ಆಸೆ ಸೈಟು ತೆಗೆದುಕೊಂಡು ಆಮೇಲೆ ಬ್ಯಾಂಕ್ ಸಾಲದಿಂದ ಇನ್ನೊಂದು ಎಮ್ಮೆ ಕೊಳ್ಳಬೇಕು ಎಂದಿತ್ತು.

ಲಕ್ಷ್ಮಿಗೆ ಇಬ್ಬರು ಮಕ್ಕಳು. ಬಹಳ ಹಿಂದೆಯೇ ಅವಳ ಗಂಡ ಅವಳನ್ನು ತ್ಯಜಿಸಿದ್ದ. ಅರಣ್ಯ ಇಲಾಖೆಯಲ್ಲಿ ಗಾರ್ಡ್ ಅಂತ ಅನ್ನಿಸುತ್ತೆ. ಮತ್ತೊಬ್ಬಳನ್ನು ಕಟ್ಟಿಕೊಂಡು ಮಾಮುಂದರ್‌ನಲ್ಲಿ ನೆಲೆಸಿದ. ದೀರ್ಘಕಾಲ ಅವಳಿಗೂ ಅವಳ ಗಂಡನಿಗೂ ಸಂಪರ್ಕವೇ ಇರಲಿಲ್ಲ. ಆಕೆ ಜೊತೆಗಾರ ಹಾಗೂ ನೆಲೆ ಇಲ್ಲದಂತಹ ಹೆಂಗಸು. ಬೆರಣಿ ತಟ್ಟಿಕೊಂಡು ತರಕಾರಿ ಮಾರಿಕೊಂಡು ಇದ್ದಳು. ಆಗಾಗ ನಮ್ಮ ಮನೆಯಲ್ಲಿ ಚೂರುಪಾರು ಕೆಲಸ ಮಾಡುತ್ತಿದ್ದಳು. ಮೂವತ್ತರ ಹರೆಯದ ಲಕ್ಷ್ಮಿ ಒಂದಿಲ್ಲೊಂದು ಕೆಲಸ ಮಾಡುತ್ತಲೇ ಇದ್ದಳು.

ಆರು ತಿಂಗಳ ಹಿಂದೆ ಲಕ್ಷ್ಮಿ ತನ್ನ ಜೊತೆಗಾರನಾಗಿ ಒಬ್ಬನನ್ನು ಇಟ್ಟುಕೊಂಡಳು. ಇತ್ತೀಚೆಗೆ ಅವನೂ ಕಾಣುತ್ತಿಲ್ಲ. ಪ್ರಾಯಶಃ ಅವನು ಅವಳಿಗೆ ಕೈಕೊಟ್ಟಿರಬೇಕು. ಅವನ ಬಗ್ಗೆ ನಾನು ಕೇಳಿದಾಗ ಅವಳು ಗೊಳ್ಳನೆ ನಕ್ಕು ಪಕ್ಕಕ್ಕೆ ತನ್ನ ಕೊರಳನ್ನು ಕೊಂಕಿಸುತ್ತ ಮರೆಯಾದಳು.

ಗಂಡ ಇಲ್ಲ. ತಂದೆ ತಾಯಿಯರ ಬೆಂಬಲವಾದರೂ ಉಂಟೆ ಅವಳಿಗೆ. ಬಹಳ ಬೇಗನೆ ಅನಾಥೆಯಾದಳು. ಎರಡು ಪುಟ್ಟ ಮಕ್ಕಳು ಅವಳಿಗೆ. ಪ್ರಾಯ ಉಕ್ಕಿ ಹರಿಯುತ್ತಿದೆ. ಅವಳಿಗೆ ಬೆಂಬಲವಾಗಿ ಯಾರು ನಿಲ್ಲದೆ ಇದ್ದರೂ, ಲಕ್ಷ್ಮಿಯ ಮುಖ ಎಂದೂ ಕಳೆಗುಂದಿಲ್ಲ. ಖಿನ್ನತೆ ಮತ್ತು ನಿರುತ್ಸಾಹವನ್ನು ದೂರ ಸರಿಸಿದ್ದಾಳೆ. ಸದಾ ಖುಷಿಯಿಂದ ಮಾತನಾಡುತ್ತಾಳೆ. ಆನಂದದ ಮುಗಳ್ನಗೆಯೊಂದಿಗೆ ನಿಸ್ಸಂಕೋಚದ ಜೀವನವನ್ನು ಸಾಗಿಸುತ್ತಿದ್ದಾಳೆ. ಲಕ್ಷ್ಮಿಯ ಖಾಸಗಿ ಬದುಕು ನನಗೆ ಜೀವನ ಒಂದು ಸಂತೋಷಕರವಾದ ನಿರೂಪಣೆ ಇರಬಹುದೇನೊ ಎಂದು ತೋರಿತು.

ಅಪರಾಹ್ನ ಮೂರು ಗಂಟೆ, ಗಾಢ ನಿದ್ರೆಯಲ್ಲಿ ಮುಳುಗಿದ್ದೆ. ''ಅಜ್ಜ'' ಎಂದು ಕರೆಯುತ್ತ ರಾಹುಲ್ ಬಂದು ಎಚ್ಚರಿಸಿದ. ನನ್ನ ಚಪ್ಪಲಿ ತಂದ, ಕಾಲಬಳಿ ಇಟ್ಟ. ಬೆತ್ತ ತಂದ ''ಹೋಗೋ.....ಣ'' ಎಂದು ಪಾರ್ಕಿನ ಕಡೆ ಸನ್ನೆ ಮಾಡಿದ.

ನಮ್ಮ ಕ್ವಾರ್ಟರ್ಸ್‌ನಿಂದ ಮಕ್ಕಳ ಪಾರ್ಕು ಕೆಲವೇ ಗಜಗಳ ದೂರದಲ್ಲಿ ಇದೆ. ದಿನಕ್ಕೆ ಕಡಿಮೆ ಅಂದರೂ ಒಂದು ಅಥವಾ ಎರಡು ಸಾರಿ ಅವನನ್ನು ಅಲ್ಲಿಗೆ ಕರೆದೊಯ್ಯುತ್ತೇನೆ. ಅಲ್ಲಿ ಆಡಲು ರಾಹುಲ್‌ನಿಗೆ ಮಜಾ ಅನ್ನಿಸುತ್ತೆ. ನನ್ನ ಕೈಯಿಡಿದು ಮುಂದು ಮುಂದಕ್ಕೆ ಎಳೆದೊಯ್ದ. ಜಗದಾಂಬ ಸಹ ಅಲ್ಲೆ ಇದ್ದಳು ತನ್ನ ಮೊಮ್ಮೊಗಳೊಂದಿಗೆ. ಮಕ್ಕಳೆಲ್ಲ ಜೊತೆಗೂಡಿ ಆಡಲು ಪ್ರಾರಂಭಿಸಿದವು. ''ಬನ್ನಿ, ಬೆಂಚಿನ ಮೇಲೆ ಕುಳಿತುಕೊಳ್ಳೋಣ'' ಎಂದಳು ಜಗದಾಂಬ. ನಾವು ಬೆಂಚಿನ ಮೇಲೆ ಕುಳಿತೆವು. ಖುಷಿಯಿಂದ ಮಕ್ಕಳು ಬೆಂಚಿನ ಮೇಲೆ ಜಿಗಿದಾಡುತ್ತಿದ್ದವು.

ಪುಷ್ಯ ಮಾಸ. ಪೂರ್ವದಿಗಂತದ ಸೂರ್ಯಾಸ್ತದ ಕಿರಣ ಪುಂಜಗಳು ಮೃದುವಾಗಿ ನಮ್ಮ ಕೆನ್ನೆಯನ್ನು ಸ್ಪರ್ಶಿಸುತ್ತಿದ್ದವು.




ನೋಡಿ ಸ್ವಾಮಿ, ನಿಮ್ಮ ಫೋಟೋದ ನೆಗೆಟಿವ್ ಕೊಡ್ತಿದ್ದೇನೆ. ಇದಕ್ಕಿಂತ ಬೆಳ್ಳಗೆ ಮಾಡು ಎಂದರೆ ನನ್ನಿಂದ ಸಾಧ್ಯವಿಲ್ಲ.

''ದಿನಾ ತಪ್ಪದೆ ನೀವು ಕಾಫಿ ಕಳಿಸ್ತೀರಾ. ನಾನು ನಿಮಗೆ ತೊಂದ್ರೆ ಕೊಡ್ತಿದ್ದೀನಿ. ನಿಮ್ಮ ದಯಾಪರತೆಗೆ ನಾನು ಕೃತಜ್ಞ'' ಎಂದೆ ತುಂಬು ಹೃದಯದಿಂದ.

''ಓ! ಈ ನಾಡಿನಲ್ಲಿ ಹೆಂಗಸರು ಹುಟ್ಟಿರೋದೆ ಜೀತ ಮಾಡೋಕ್ಕೆ. ತಂದೆ ತಾಯಿಗಳನ್ನ, ಗಂಡನ್ನ ನೆಂಟರಿಸ್ಟರನ್ನ, ಮಕ್ಕಳನ್ನ, ಮೊಮ್ಮೊಕ್ಕಳನ್ನ, ಒಬ್ಬರಾದ ಮೇಲೆ ಒಬ್ಬರನ್ನು ಪೋಷಣೆ ಮಾಡಿಕೊಂಡು ಅವರ ಕಾಲಾನೂ ನೂಕಬೇಕು. ಹೆಂಗ್ಸರಿಗೆ ಕಸಬು ಅದೇನೆ, ಉದ್ಯೋಗಾನು ಅದೇನೆ. ಮೇಲಾಗಿ ಇದು ನಮಗೆ ಹವ್ಯಾಸವಾಗಿ ಬಿಟ್ಟಿದೆ. ಅದರಲ್ಲೇ ಸಂತೋಷ ಅವರಿಗೆ.'' ಸ್ತ್ರೀಯರಿಗೆ ಇದೆಲ್ಲ ಮಾಮೂಲಿ ಕೆಲಸ ಅನ್ನೋ ತರಹ ಆಕೆ ವರ್ಣಿಸಿದಳು.

ಜಗದಾಂಬಳಿಗೆ ಹತ್ತಹತ್ತಿರ ಅರವತ್ತು. ಸರಿಸುಮಾರು ನನ್ನ ವಯಸ್ಸಿನಷ್ಟೇ ಇದ್ದರೂ ಐವತ್ತು ವರ್ಷದವಳಂತೆ ಕಾಣುತ್ತಿದ್ದಳು. ಅಂದು ಶುಕ್ರವಾರವಾದ್ದರಿಂದ ತಲೆಗೆ ಸ್ನಾನ ಮಾಡಿ ತುರುಬಿಗೆ ಒಂದು ಕೆಂಪು ಹೂ ಸಿಕ್ಕಿಸಿಕೊಂಡಿದ್ದಳು. ಮುಚ್ಚಂಜೆಯ ರಕ್ತದೋಕುಳಿಯ ರಂಗಿನಲ್ಲಿ ಅವಳ ತಾಮ್ರ ವರ್ಣದ ಕೆಂಗೂದಲು ಥಳಥಳಿಸುತ್ತಿತ್ತು.

ನಾಲ್ಕು ವರುಷದ ಪ್ರಸನ್ನ ರಾಹುಲ್‌ನನ್ನು ಎತ್ತಲು ಮುಲುಕುತ್ತಿದ್ದ. ಇಬ್ಬರೂ ಮೇಲಿಂದ ಮೇಲೆ ಬಿದ್ದು ಪಲ್ಟಿ ಹೊಡೆಯುತ್ತಿದ್ದರು. ಮೆತ್ತನೆಯ ಹುಲ್ಲಿನ ಮೇಲೆ ಕಿಲಕಿಲನೆ ನಗುತ್ತ ಬಿದ್ದೇಳುತ್ತ ಇದ್ದರು. ಜಗದಾಂಬಳ ಮುಖದಲ್ಲಿ ಆನಂದ ಹಾಗೂ ಸಂತೃಪ್ತಿಯ ಕಳೆ ತುಳುಕುತ್ತಿತ್ತು.

''ಕೇಳೋದನ್ನ ಮರೆತಿದ್ದೆ. ನಿಮ್ಮ ಯಜಮಾನ್ರು ಎಲ್ಲಿ? ಏನು ಮಾಡ್ತಾರೆ? ಇಲ್ಲಿ ಅವರನ್ನ ನಾನು ಎಂದೂ ನೋಡ್ಲೆ ಇಲ್ಲ.'' ಏನನ್ನಾದರೂ ಹೇಳಬೇಕು ಎಂಬ ನನ್ನ ಪ್ರಯತ್ನದಲ್ಲಿ ನಾನು ಅನೈಚ್ಛಿಕವಾಗಿ ಈ ವಿಷಯಕ್ಕೆ ಮುಗ್ಗುರಿಸಿದೆ.

''ನನ್ನಿಂದ ಅವರು ಶಾಶ್ವತವಾಗಿ ಬೇರ್ಪಟ್ಟರು'' ಎಂದ ಆಕೆ ನಕ್ಕಳು. ಆಕೆ ಹೇಳಿದ ರೀತಿ ನೋಡಿ ನಾನು ಚಕಿತಗೊಂಡೆ. ಅವಳ ನಗುವಿನಲ್ಲಿ ವ್ಯಥೆ ತುಂಬಿದ್ದು, ಅಲ್ಲಿ ವಿನೋದದ ಕಳೆ ಇಲ್ಲದಿರುವುದನ್ನು ಬಳಿಕ ನಾನು ಗಮನಿಸಿದೆ. ಆಮೇಲೆ, ಅವಳ ಡ್ರೆಸ್ ನೋಡಿ ನನಗೆ ಗೊಂದಲವುಂಟಾಯಿತು. ಕಾರಣ ವಿಧವೆಯರ ಉಡುಪಿನಲ್ಲಿ ಅವಳಿರಲಿಲ್ಲ.

''ಆದರೆ.......... ನೀವು'' ನಾನು ತೊದಲಿದೆ.

''ಅವರು ಬದುಕಿದ್ದಾರೆ,'' ಎಂದಳು ಕ್ಷಣ ಕಾಲ ತಡೆದು. ''ಅವರು ಈ ಲೋಕ ಬಿಟ್ಟೇನೂ ಹೋಗಲಿಲ್ಲ. ದೇಶ ಅಷ್ಟೇ ಬಿಟ್ಟಿದ್ದು.''

''ಅಂದ್ರೆ ನಿಮ್ಮ ಅರ್ಥ.......''

''ನೀವು ಕೇಳೋದು ನಿಜ! ನನ್ನ ಬಿಟ್ಟರು. ಆಮೇಲೆ ಶಾಶ್ವತವಾಗಿ ದೂರದಲ್ಲಿರಲು

ದೇಶಾನೂ ಬಿಟ್ಟರು. ಕಳೆದ ಮುವತ್ತು ವರ್ಷಗಳಿಂದ ವಿಧವೆ ಪಟ್ಟದ ಹೊರೆ ಹೊತ್ತು ಬದುಕಿದ್ದೀನಿ. ಏಕೆಂದರೆ ಶಾಸ್ತ್ರಗಳು ಒಪ್ಪುವುದಿಲ್ಲ, ಅದಕ್ಕೆ ವಿಧವೆಯ ಉಡುಪನ್ನು ತೊಟ್ಟಿಲ್ಲ.'' ಪುನಃ ಅವಳ ಮುಖದಲ್ಲಿ ನಗೆಯ ಅದೇ ಗೆರೆ ಎದ್ದಿತು.

''ಆಮೇಲೆ, ನಿಮ್ಮ ಹಿಂದಿನ ಕತೆ.....''

''ದಯಮಾಡಿ, ಇನ್ನೇನೂ ಕೇಳಬೇಡಿ! ನಮಗೆ ಹೆಂಗ್ಸರಿಗೆ ಹಿಂದಿನ ಕತೇನೂ ಇಲ್ಲ, ನೆನಪೂ ಇಲ್ಲ. ಅಕಸ್ಮಾತ್ ಅವೇನಾದರೂ ಇದ್ದರೆ, ಅವನ್ನ ದೂರ ಓಡಿಸ್ತೇವೆ. ನಾವು ಅವುಗಳಲ್ಲಿ ಭಾಗೀನೇ ಆಗೊಲ್ಲ. ಕಳೆದು ಹೊದದ್ದಕ್ಕೆಲ್ಲ ನಾವೀಗ ಮಹತ್ವ ಕೊಟ್ಟರೆ ಮನಸ್ಸಿಗೂ ತೊಂದ್ರೆ, ಆರೋಗ್ಯಕ್ಕೂ ಅಪಾಯ. ಅವುಗಳಿಂದ ಬೇರೇನೂ ಪ್ರಯೋಜನವಿಲ್ಲ. ಹೇಗಾದರೂ ನೆನಪುಗಳಲ್ಲಿ ಭಾಗಿಗಳಾಗೋದಕ್ಕೆ ಹೆಂಗ್ಸರಿಗೆ ಪುರಸೊತ್ತಾಗಲೀ ಅಥವಾ ಆರಾಮವಾಗಲೀ ಎಲ್ಲಿದೆ.'' ಹಾಗೆಂದ ಆಕೆ ಮೌನಿಯಾದಳು.

ಈ ವಿಷಯದ ಮೇಲೆ ಹೆಚ್ಚಿಗೆ ಮಾತನಾಡಲು ಆಕೆಗೆ ಇಚ್ಛೆ ಇಲ್ಲವೆಂದು ನಾನು ಭಾವಿಸಿಕೊಂಡೆ. ಯಾವ ಪ್ರಶ್ನೆಯನ್ನು ಕೇಳಲಿಲ್ಲ.

ಮಕ್ಕಳು ಪಾರ್ಕಿನಲ್ಲಿದ್ದ ಬಂಡೆ ಮೇಲಿಂದ ಒಬ್ಬರಿಂದೆ ಒಬ್ಬರು, ಜಾರುತ್ತಿದ್ದರು. ಜಗದಾಂಬ ಮೇಲೆದ್ದು ನೇರವಾಗಿ ಅವರ ಬಳಿ ಹೋದಳು.

ಇಲ್ಲಿಯವರೆಗೆ ಜಗದಾಂಬಳ ಖಾಸಗಿ ಜೀವನದ ಬಗ್ಗೆ ನನಗೇನೂ ಗೊತ್ತಿರಲಿಲ್ಲ. ಅವಳ ಬಗ್ಗೆ ತಿಳಿದುಕೊಳ್ಳಲು ತುಂಬಾ ಆಸೆ ಏನೋ ಇತ್ತು. ತರಕಾರಿ ಮಾರೋ ಲಕ್ಷ್ಮಿಯಿಂದ ಹಾಗೂ ನಮ್ಮ ಮನೆಯ ಕೆಲವರಿಂದ ಆಕೆಯ ಬಗ್ಗೆ ಕೆಲವು ವಿಷಯಗಳನ್ನು ತಿಳಿದುಕೊಂಡಿದ್ದೆ.

ಜಗದಾಂಬ ಅವಳ ತಂದೆ ತಾಯಿಗೆ ಒಬ್ಬಳೆ ಮಗಳು. ಬಾಲ್ಯದಲ್ಲಿ ತಾಯಿಯನ್ನು ಕಳಕೊಂಡ ತಬ್ಬಲಿ. ತಂದೆ ಅವಳನ್ನು ಸ್ವೇಚ್ಛೆಯಾಗಿ ಬೆಳಸಿದರು. ಜೊತೆಗೆ ಉತ್ತಮ ಶಿಕ್ಷಣವನ್ನು ಕೊಡಿಸಿದರು. ಅವರ ಜಾತಿಯವನೇ ಆದ ಖಾಸಗಿ ವೈದ್ಯವೃತ್ತಿ ಮಾಡಿಕೊಂಡಿದ್ದ ಡಾಕ್ಟರ್ ವರನೊಬ್ಬನಿಗೆ ಎಪ್ಪತ್ತು ಸಾವಿರ ವರದಕ್ಷಿಣೆ ನೀಡಿ ಮದುವೆ ಮಾಡಿದರು. ಅವಳಿಗೆ ಒಂದು ಹೆಣ್ಣು ಮಗುವಿತ್ತು. ಅವಳ ಗಂಡ ಅವಳ ತಂದೆಯಿಂದ ಮತ್ತಷ್ಟು ಹಣ ಪಡೆದು ಉನ್ನತ ವಿದ್ಯಾಭ್ಯಾಸಕ್ಕೆಂದು ಅಮೇರಿಕಕ್ಕೆ ಹೊರಟ. ಆಮೇಲೆ ಅವನು ಹಿಂದಿರುಗಲಿಲ್ಲ. ಅಮೇರಿಕ ದೇಶದ ಸ್ತ್ರೀಯೋರ್ವಳನ್ನು ಕೈಹಿಡಿದು ಅಲ್ಲೆ ತಳವೂರಿದ. ತನ್ನ ಹೆಂಡತಿ ಮಗುವಿನ ಬಗ್ಗೆ ವಿಚಾರಿಸುವ ಗೊಡವೆಗೆ ಹೋಗಲಿಲ್ಲ. ಜಗದಾಂಬಳ ಅಪ್ಪ ತನ್ನೆಲ್ಲ ಆಸ್ತಿಯನ್ನು ಮಾರಿ ಅಳಿಯನ ಮೇಲೆ ಸುರಿದಿದ್ದ. ಮಗಳ ಜೀವನ ದುಃಖಕ್ಕೆ ಈಡಾಯಿತು. ಮುದುಕ ತಂದೆ ಅದೇ ಚಿಂತೆಯಲ್ಲಿ ಹಾಸಿಗೆ ಹಿಡಿದವನಿಗೆ ಟಿ.ಬಿ. ತಗಲಿ ಅನಂತರ ಇಹಲೋಕ ತ್ಯಜಿಸಿದ.

ಗಂಡನಾಗಿದ್ದವನು ಆಮೇಲೆ ಅಮೇರಿಕದಲ್ಲಿ ತಂದೆ ಅನ್ನಿಸಿಕೊಂಡವನು ಸರಿಸುಮಾರು 16 ವರ್ಷಗಳ ಬಳಿಕ ತನ್ನ ಹೆಂಡತಿ ಮಗಳನ್ನು ನೆನಪಿಸಿಕೊಂಡ. ಭಾರತಕ್ಕೆ ಬರುತ್ತಿದ್ದ ನೆಂಟರೊಬ್ಬರ ಮೂಲಕ ಮಗಳ ಮದುವೆಗೆ ಒಂದು ಲಕ್ಷ ರೂ.ಗಳನ್ನು ಕಳಿಸಿಕೊಟ್ಟ. ಅಷ್ಟೊತ್ತಿಗಾಗಲೇ ಜಗದಾಂಬಳಿಗೆ ಲೋಕಜ್ಞಾನದ ಅರಿವಿತ್ತು; ಅನುಭವವೂ ಬಂದಿತ್ತು, ಮೇಲಾಗಿ ಜಗತ್ತಿನಲ್ಲಿ ಬದಕೋ ದಾರಿಗಳನ್ನು ಕಂಡುಕೊಂಡಿದ್ದಳು. ಬಂದ ಆ ಹಣವನ್ನು ತಿರಸ್ಕರಿಸಲಿಲ್ಲ. ತನ್ನ ಹೆಸರಿನಲ್ಲಿ ಇಪ್ಪತ್ತು ಸಾವಿರವನ್ನು ಬ್ಯಾಂಕಿನಲ್ಲಿಟ್ಟಳು. ಉಳಿದ ಹಣದಲ್ಲಿ ಮಗಳ ಮದುವೆ ಮಾಡಿದಳು ವಿಶ್ವನಾದಮ್‌ಗೆ ಕೊಟ್ಟು. ಈಗ ಮಗಳೊಟ್ಟಿಗೆ ವಾಸಿಸುತ್ತಿದ್ದಾಳೆ.

ಈಗ ಜಗದಾಂಬಳ ಏಕೈಕ ಆಸರ ಅವಳ ಮಗಳು ಮತ್ತು ಅಳಿಯ. ಕರ್ನೂಲ್‌ನಲ್ಲಿ ಒಬ್ಬ ಚಿಕ್ಕಪ್ಪ ಇದ್ದಾನೆ. ಆದರೆ ಆತ ಇವಳನ್ನು ಮನೆಗೆ ಸೇರಿಸೊಲ್ಲ. ಕಾರಣ ಮೂಲಾ ನಕ್ಷತ್ರದಲ್ಲಿ




ಪಾಪ ಅವ್ರು, ಸ್ವಾಮೀಜಿಯ ಪೂರ್ತಿ ಹೆಸರನ್ನು ಹೇಳಲು ಹೋಗಬಾರದಿತ್ತು....!

ಹುಟ್ಟಿದವಳು ಎಂದು.

ಜಗದಾಂಬಳ ಜೀವನದ ಹಿಂದಿರುವ ದುರಂತ ಕಥೆಯನ್ನು ಕೇಳಿ ನಾನು ಬೆರಗಾದೆ. ಅವಳ ಜೀವನ ಒಂದು ರೈಲು ಬಂಡಿಯಂತಿದ್ದು ಪ್ರತಿ ನಿಲ್ದಾಣದಲ್ಲಿ ಹಳಿ ಬದಲಾಯಿಸಿ ಮುಂದೆ ಹೋಗುವಂತೆ. ಎಂತಹ ವಿಸಂಗತ ಸ್ವರ? ಎಂತಹ ಸೋಲು? ಆಕೆ ಸೆರಗಿನಲ್ಲಿ ಕೆಂಡ ಕಟ್ಟಿಕೊಂಡು ಸಾಗುವ ಹೆಂಗಸು. ಅದನ್ನೇನಾದರೂ ಮುಟ್ಟಿದರೆ ಹತ್ತಿ ಉರಿಯುತ್ತದೆ. ಈ ಕಾರಣಕ್ಕಾಗಿಯೇ ಅವಳು ಆ ದಿನ ತನ್ನ ಬದುಕಿನ ಬಗ್ಗೆ ಮಾತನಾಡಲು ಮನಸಿಲ್ಲದವಳಾಗಿದ್ದುದು.

ಒಂದು ಸಂಜೆ ತಪೋವನದಲ್ಲಿ ನಡೆಯುತ್ತಿದ್ದ ಗೀತೋಪನ್ಯಾಸಕ್ಕೆ ಹೋದೆ. ಏಕೆಂದರೆ ಮಾಡಲು ಬೇರೆ ಇನ್ನೇನೂ ಇರಲಿಲ್ಲ. ಆರು ಗಂಟೆಗೆಲ್ಲ ಮುಗಿಯಿತು. ಜನಜಂಗುಳಿ ನಡುವಿನಿಂದ ಹೊರಬರುತ್ತಿದ್ದೆ. ಹೆಂಗಸರ ಗುಂಪಿನಲ್ಲಿ ಬರುತ್ತಿದ್ದ ಜಗದಾಂಬ ನನ್ನ ನೋಡಿ ''ಅದೇನು ಇವತ್ತು ನೀವು ಇಲ್ಲಿ! ಒಬ್ಬಳೆ ಮನೆಗೆ ಹೋಗಬೇಕಲ್ಲ ಅಂತ ಭಯವಾಗುತ್ತಿತ್ತು. ನೀವು ಇಲ್ಲಿ ಇದ್ದೀರಾ. ನೀವು ಮನೆಗ್ಹೋಗೊ ಹಾಗಿದ್ದರೆ ನಡೀರಿ ಜತೇಲಿ ಹೋಗೋಣ'' ಎಂದಳು. ಕ್ವಾರ್ಟರ್ಸ್‌ಗೂ ತಪೋವನಕ್ಕೂ ಎರಡು ಕಿಲೋ ಮೀಟರಿಗೂ ಹೆಚ್ಚು ದೂರ ಆಗ್ತಿತ್ತು. ಅವಳ ಜೊತೆಯಲ್ಲಿ ಒಬ್ಬನೆ ಹೇಗೆ ಆಟೋದಲ್ಲಿ ಕುಳಿತುಕೊಳ್ಳೋದು ಅಂತ ಯೋಚಿಸಿ ಮುಜುಗರಗೊಂಡೆ.

''ಅಯ್ಯೋ ಆಟೊ ಬೇರೆ ಯಾಕೆ? ವೃಥಾ ಮೂರು ರೂಪಾಯಿ ದಂಡ. ಕೆರೆ ಪಕ್ಕದಲ್ಲೇ ಹತ್ತಿರದ ದಾರಿ ಉಂಟು. ನಿಧಾನವಾಗಿ ನಡ್ಕೊಂಡು ಹೋಗೋಣ'' ಎಂದಳು.

ಗೇಟಿನ ಬಳಿ ನಿಂತು ಜನಗಳನ್ನು ಬೀಳ್ಕೊಡುತ್ತಿದ್ದ ಸಂಸ್ಥೆಯ ಕಾರ್ಯದರ್ಶಿ ಅಷ್ಟರಲ್ಲಿ ನನ್ನನ್ನು ನೋಡಿ ''ತಾವು ಬಂದದ್ದು ತುಂಬಾ ಸಂತೋಷ. ನಿಮ್ಮ ಹೆಂಗ್ಸರನ್ನ ನಾಳೇನೂ ಕರ್ಕೊಂಡು ಬನ್ನಿ. ಕರ್ಮಯೋಗದ ಮೇಲಿನ ಸ್ವಾಮಿಗಳ ಉಪನ್ಯಾಸ ತುಂಬಾ ಅದ್ಭುತವಾಗಿರುತ್ತೆ. ಇಬ್ಬರೂ ಖಂಡಿತ ಬರಬೇಕು. ತಮ್ಮಂತ ದೊಡ್ಡವರ ಉಪಸ್ಥಿತಿ ನಮಗೆ ತುಂಬಾ ಸಂತೋಷವನ್ನುಂಟು ಮಾಡುತ್ತೆ.''

ನನಗೆ ಬೆಚ್ಚಿ ಬಿದ್ದಾಂಗಾಯಿತು. ಜೊತೆಗೆ ಪಿಚ್ಚೆನಿಸಿತು. ಜಗದಾಂಬ ಖಂಡಿತವಾಗಿಯೂ ನೊಂದಿರುವಳೆಂದುಕೊಂಡೆ.

''ಅದರಲ್ಲೇನು ಬಂತು? ಅವರಿಗೆ ಗೊತ್ತಿಲ್ಲ ಅಂದ ಮೇಲೆ ಯಾರು ಬೇಕಾದರೂ ತಪ್ಪು ತಿಳಿದುಕೋ
ಬಹುದು. ಈಚಲ ಮರದ ಕೆಳಗೆ ಕುಳಿತುಕೊಂಡು ಹಾಲು ಕುಡಿದಂಗೆ'' ಎಂದಳು ನಸುನಗೆ ಬೀರುತ್ತ ತೀರಾ ಹಗುರವಾಗಿ. ''ಆಯ್ತು ಬನ್ನಿ. ಕತ್ತಲಾಯಿತಾ ಬಂತು'' ಎಂದು ಬಿರಬಿರನೆ ಹೆಜ್ಜೆ ಹಾಕಿದಳು.

ನಾವು ಕೆರೆ ಏರಿ ಮೇಲೆ ನಡೆಯುತ್ತ ಹೊರ

ಟೆವು. ಬೆಳದಿಂಗಳು, ತಂಗಾಳಿ, ಅಲೆಗಳ ಶಬ್ದ, ಸುತ್ತೆಲ್ಲಾ ಪ್ರಶಾಂತ ವಾತಾವರಣ. ಗಂಗಿನೇನಿ ಕೆರೆಯಲ್ಲಿ ಕಳೆದ ಹತ್ತು ವರ್ಷಗಳಿಂದ ನೀರೇ ಇಲ್ಲ. ಈ ವರ್ಷ ಮಾತ್ರವೇ ಭಾರಿ ಮಳೆಯಾಗಿ ರೋದು. ಕೆರೆ ತುಂಬಿ ಮಿಂಚುತ್ತಿದೆ. ಬಾಲ್ಯದಿಂದಲೂ ನಾನು ನೀರಿನ ಬಗ್ಗೆ ಕಾಣದ ಯಾವುದೊ ಭೀತಿಗೆ ಪಕ್ಕಾಗಿದ್ದೇನೆ. ಕಡು ಶ್ಯಾಮಲ ವರ್ಣದ ಆಳಸಾಗರದ ಮೇಲೆ ನೆಟ್ಟ ನನ್ನ ನೋಟವನ್ನು ತೆಗೆದು ಎಚ್ಚರಿಕೆಯಿಂದ ನಡೆಯುತ್ತ ಮುಂದೆ ಮುಂದೆ ಬಂದೆ, ಆ ಕಡೆ ಈ ಕಡೆ ನೋಡದೆ.

''ನೀರ ಕಂಡರೆ ಭಯವಾಗಲ್ವ ನಿಮಗೆ?'' ಎಂದೆ ನಾನು.

''ನೀರಿಗೆ ನಾನ್ಯಾಕೆ ಹೆದರಲಿ? ಬೆಳದಿಂಗಳಲ್ಲಿ ಕುಳಿತು ತುಂಬಿದ ಕೆರೆಯಲ್ಲಿ ಏಳೋ ಅಲೆಗಳನ್ನು ನೋಡೋದು ಅಂದ್ರೆ ಖುಷಿ ನನಗೆ. ನಾನೊಂದು ಸತ್ಯ ಹೇಳ್ಲಾ ನಿಮಗೆ? ನನಗೊಬ್ಬಳಿಗೆ ಅಲ್ಲ. ಇಡೀ ಹೆಂಗ್ಸರ ಜಾತಿಗೇನೆ ಬಾವಿ, ಕೆರೆ, ನದಿ ಕಂಡರೆ ಇನ್ನಿಲ್ಲದ ಪ್ರೀತಿ. ಕಷ್ಟ ಕಾಲದಲ್ಲಿ ನಮಗೆ ಆಶ್ರಯ ನೀಡೋಳು ಆ ಗಂಗಮ್ಮನೆ'' ಎಂದಳು ಆಸಕ್ತಿಯಿಂದ. ಮರುಕ್ಷಣ ಆಕೆ ಮೃದುವಾಗಿ ನಗುತ್ತ ''ಹೆದರಬೇಡಿ, ನಿಮ್ಮ ಜೊತೇಲಿ ಬರ್‍ತೀನಿ'' ಎನ್ನುತ್ತ ನನ್ನ ಸಮೀಪಕ್ಕೆ ಬಂದಳು.

ನನ್ನನ್ನೇನು ಜರಿಯಲಿಲ್ಲ. ಜಗದಾಂಬಳಿಗೆ ಕಟು ಸತ್ಯವನ್ನು ಸಹ ಮನ ಮುಟ್ಟುವ ಹಾಗೆ ಹೇಳುವ ಜಾಣ್ಮೆ ಇತ್ತು. ಕುಪ್ಪಳಿಸುವ ಕಪ್ಪೆಗಳ, ಏರಿಗೆ ಬಡಿಯುವ ನೀರಿನ ಅಲೆ ಹಾಗೂ ನೀರಿನ ಮೇಲೆ ಬಂದು ಬಡಿವ ಹಕ್ಕಿಗಳ ರೆಕ್ಕೆಯ ಶಬ್ದವನ್ನು ಆಲಿಸುತ್ತ ನಾವಿಬ್ಬರೂ ನಡೆದೆವು.

ಲಕ್ಷ್ಮೀ ನಮ್ಮ ಕಡೆಗೆ ನಡೆಯುತ್ತ ಬಂದಳು.

''ಈ ಕತ್ತಲೇಲಿ ಎತ್ಲಕಡೀಕೆ ಹೊಂಟದ್ದಿ ಲಕ್ಷ್ಮೀ?'' ಎಂದಳು ಜಗದಾಂಬ.

''ಎಲ್ಲೂ ಇಲ್ಲ, ಕಣವ್ವಾ, ನಿಮ್ಮ ಕಡನೆ ಬತ್ತಿದ್ದೆ. ಹೊತ್ತಾರೆಯಿಂದ್ಲೂ ತಲೆನೋವು. ಅಮೃತಾಂಜನ ಕೇಳೋಣ ಅಂತ ನಿಮ್ಮ ಮನೆಗ್ಹೋಗಿದ್ದೆ. ಅಕ್ಕ ಹೇಳ್ತು, ಅವ್ವಾರು ಭಜನೆಗ್ಹೋಗವರೆ, ಇನ್ನೂ ಬಂದಿಲ್ಲ. ಒಬ್ಬರೆ ಕತ್ತಲೇಲಿ ಕೆರೆ ಏರಿ ಮೇಲೆ ಬರಬಹುದು. ಸ್ವಲ್ಪ ನೋಡು ಅಂದರು. ಅದಕ್ಕೆ ಹಿಂಗ್ ಬಂದೆ. ಈಗೇನು ಭಯ? ಸ್ವಾಮಿಯೋರು ಜತೇಲಿ ಅವರಲ್ಲ.'' ಎಂದಳು ಲಕ್ಷ್ಮೀ ನಮ್ಮೊಂದಿಗೆ ಹೆಜ್ಜೆ ಹಾಕುತ್ತ.

''ನಮ್ಮ ಎಮ್ಮೆ ಎಲ್ಲೊ ತಪ್ಪಿಸಿಕೊಂಡಿದೆ. ಈವತ್ತು ಸಂಜೆ ಹಾಲು ಕರೆದ ಮೇಲೆ ಮೇಯ್ಯಕ್ಕೆ ಬಿಟ್ಟೆ. ಇನ್ನೂ ಮನೆಗೆ ಬಂದಿಲ್ಲ. ಎಲ್ಲಾ ಕಡೆ ಹುಡುಕಿ ಕಾಲು ಬಿದ್ಹೋದ್ವು. ಈಗ ತಲೇನೂ ನೋಯ್ತಿದೆ. ಕಳ್ಳ ನನ್ಮಗನದು. ಎಲ್ಲಿ ನೆಗೆದು ಬಿತ್ತೊ. ಕತ್ತಲೆಹೊತ್ತು, ಹುಡುಗರು ಮನೇಲಿ ಒಂಟಿ ಅವೆ. ಕದಾನು ಹಾಕಿಲ್ಲ. ಒಂಟ್ ಹೆಂಗ್ಸು ಎಲ್ಲಾ ಹೆಂಗೆ ಒಬ್ಬಳೆ ಸಿಬಾಯ್ಸಲಿ?'' ಎಂದು ಬಡಬಡಿಸಿದಳು ಏದುಸಿರು ಬಿಡುತ್ತ ಲಕ್ಷ್ಮಿ.

''ಲಕ್ಷ್ಮಿ, ಯಾರೋ ಒಬ್ಬನಿಗೆ ಜಾಗ ಕೊಟ್ಟಿದ್ಯಲ್ಲ. ಈಗ ಅವನಿಲ್ವೇನೆ ಮನೇಲಿ'' ಜಗದಾಂಬ ಕೇಳಿದಳು.

''ದರಿದ್ರ ಬಡ್ಡಿ ಮಗನ್ನಾ ಒಳಕ್ಕೆ ಸೇರಿಸ್ಕೊಂಡೆ, ಕೂಳು ಅಂತ ಸಾಯ್ತಿದ್ದ. ಮಾರಿಗೆ ಬಿಟ್ಟ ಟಗರ ಮೇಯಿಸೊಂಗೆ ಮೇಯ್ಸದೆ. ಎರಡು ತಿಂಗಳು ಕೊಬ್ಬಿದ. ಇನ್ನೊಂದು ಎಮ್ಮೆ ತಗೋಬೇಕು ಅಂತ ಕೂಡಿಟ್ಟಿದ್ದ ದುಡ್ಡೆತ್ತಿಕೊಂಡು ಓಡೋದಾ? ನನ್ನ ಹಣ ತಿಂದ ಮೇಲೆ ಇನ್ನೆಲ್ಲಿ ಬತ್ತಾನೆ ಹಿಂದಕ್ಕೆ! ಈ ಕೆಲಸಕ್ಕೆ ಬಾರದ ಬ್ಯಾಂಕ್‌ನೋರಾದರೂ ಸಾಲ ಕೊಟ್ಟರೆ ಕಡೆಪಕ್ಷ, ಇನ್ನೊಂದು ಎಮ್ಮೆ ನಾದರೂ ಕೊಂಡುಕೊಳ್ಳುತ್ತೀನಿ.....'' ಎಂದು ಗೊಣಗಿದಳು ಲಕ್ಷ್ಮಿ.

''ಇನ್ನು ಮೇಲೆ ಅಂತಹ ಪೋಲಿಗಳಿಗೆಲ್ಲ ಜಾಗ ಕೊಡಬೇಡ. ನೀನೆ ಹೇಗೊ ಹೆಣಗಾಡು. ನಿನಗೆ ಯಾರು ದಿಕ್ಕು. ನಿನ್ಗೆ ನಾಮ ಹಾಕಿ ನಿನ್ನೂ ಬೀಕಾರಿ ಮಾಡ್ತಾರೆ.'' ಎಂದು ಜಗದಾಂಬ ಬುದ್ಧಿ ಮಾತು ಹೇಳಿದಳು. ಲಕ್ಷ್ಮಿ ಮೌನವಾಗಿ ಎರಡೆಜ್ಜೆ ಮುಂದೆ ಹಾಕಿ ಅನಂತರ ಬಿರುಸಾಗಿ



ಹೇ ದೇವಾ, ದುಷ್ಟರ ನಿಗ್ರಹಕ್ಕಾಗಿ ವಿವಿಧ ಅವತಾರವೆತ್ತಿದ ನೀನು ಈಗ ಯಾವುದಾದ ರೊಂದು ಅವತಾರ ತಾಳಿ ವೀರಪ್ಪನ್‌ನಿಂದ ನಮ್ಮನ್ನು ರಕ್ಷಿಸು....

ಕತ್ತಿನ ನೆಟಿಕೆ ಮುರಿದು ''ಯಾಕವ್ವಾ, ಅಂತ ಊನ ಬಾಳ್ ಬಾಳ್ಲಿ? ನನ್ನ ಕಾಲ ಮೇಲೆ ನಾನ್ ನಿಂತಿರೋಳು. ನನ್ಗೆನಾನೇ ದಿಕ್ಕು. ಉಪ್ಪು ಖಾರ ತಿನ್ನೊ ಹೆಂಗ್ಸು. ಗಂಡ್ಸು ಇಲ್ಲದೆ ಎಷ್ಟು ದಿನ ಅಂತ ಬಾಳಕಾಯ್ತದೆ?''

''ಎಂತಹ ದಿಟ್ಟ ಉತ್ತರ! ಜಗದಾಂಬಳಿಗೆ ಸಿಡಿಲಪ್ಪಳಿಸಿದಂತಾಯಿತು. ಆಕೆ ಮೌನಿಯಾ ದಳು. ನಾವು ಮನೆ ತಲುಪಿದೆವು.

★

ಬೆಳಿಗ್ಗೆ ಎಂಟು ಗಂಟೆಯಾದರೂ ಚಳಿ ಕೊರೆ ಯುತ್ತಿತ್ತು. ನಾನು ಪಾರ್ಕಿಗೆ ಹೋಗಿ ಕುಳಿತೆ, ಮಬ್ಬು ಮುಂಜಾನೆಯ ಬೆಳಕಿನಲ್ಲಿ. ಇಳಿವಯ ಸ್ಸಿನ ಯೋಚನೆಗಳು ನನ್ನ ಬೆನ್ನು ಹತ್ತಲು ಪ್ರಾರಂಭಿಸಿದವು. ಯಾವಾಗಲೋ ಒಮ್ಮೆ ಹಳ್ಳಿಯ ಸಂಬಂಧಿಕರೊಬ್ಬರ ಮನೆಗೆ ಹೋಗಿದ್ದೆ. ಅವರಿಗೆ ಎಪ್ಪತ್ತು ವರುಷ. ಅವರ ಕಡೆಯ ದಿನಗಳಲ್ಲಿ ಹಾಸಿಗೆ ಹಿಡಿದ ಮೇಲೆ ಪಡಬಾರದ ಕಷ್ಟಗಳನ್ನೆಲ್ಲ ಪಟ್ಟರು. ಎಲ್ಲಾನೂ ಹಾಸಿಗೆ ಮೇಲೆ ಮಾಡಬೇಕಿತ್ತು...... ಕುಳಿತು ಕೊಳ್ಳಲಾಗಲೀ ಅಥವಾ ಮಲಗಲಾಗಲೀ ಇಬ್ಬರು ಹಿಡಿದು ಎತ್ತಿ ಇಳುಕ ಬೇಕಾಗಿತ್ತು. ಅವರು ಸಾಯುವುದಕ್ಕೆ ಮುಂಚೆ ಹೀಗೇನೆ ಎರಡು ವರುಷ ಹೆಣಗಾಡಿದರು. ವೃದ್ಧ ಹೆಂಗಸು ಪಾಪ! ಮಗು ಪಾಲನೆ ಮಾಡಿದಂತೆ ಪಾಲನೆ ಮಾಡಿತು. ಆದರೂ ಕೂಡ ಅವರು ಪುಣ್ಯವಂತರು ಎಂದು ಹೇಳಬೇಕು. ಕಾರಣ ಅವರು ಹಳ್ಳಿಯಲ್ಲಿ ವಾಸಿಸುತ್ತಿದ್ದರು ಮೇಲಾಗಿ ಅವರ ಆರೈಕೆ ಮಾಡಲು ಅವರ ಹೆಂಡತಿ ಬಳಿ ಇದ್ದರು.

ಯಾರೊಬ್ಬರಿಗೂ ಗೊತ್ತಾಗುವುದಿಲ್ಲ ಯಾವಾಗ ಎಂಥ ಕಷ್ಟಾನ ಇಳಿವಯಸ್ಸು ತರು ತ್ತದೆ ಎಂದು. ಅಂತಹ ದುರವಸ್ಥೆಗೇನಾದರೂ ನಾನು ಬಿದ್ದು ಬಿಟ್ಟರೆ ನನ್ನಗತಿ ಏನು? ಅದ ರಲ್ಲೂ ಇಂತಹ ಪಟ್ಟಣದಲ್ಲಿ ನಾನು ಕುಗ್ಗಿ ಹೋದೆ.

ಇದೇ ಸಮಯಕ್ಕೆ ತನ್ನ ಮೊಮ್ಮೊಗಳೊಂದಿಗೆ ಜಗದಾಂಬ ಬಂದಳು. ''ಆ! ಒಬ್ಬರೆ ಕುತ್ಗೊಂಡು ಏನೋ ಯೋಚನೇಲಿ ಮುಳ್ಗೋ ದಂಗೆ ಕಾಣ್ತದೆ'' ಎಂದೆನ್ನುತ್ತ ಆಕೆ ಸ್ವಲ್ಪ ದೂರದಲ್ಲಿದ್ದ ಬೆಂಚಿನ ಮೇಲೆ ಕುಳಿತಳು.

''ಬಡವನಿಗೆ ಅವನ ಹೆಂಡ್ತೀನೇ ಸಂಪತ್ತು ಎನ್ನುವುದು ಬರೀ ಗಾದೆ ಅಷ್ಟೇ. ಆದರೆ ಇಳಿವ ಯಸ್ಸಿನಲ್ಲಿ ಗಂಡಸಿಗೆ ಹೆಂಡತಿ ಹತ್ತಿರ ಇರೋದು ಅತ್ಯಂತ ಅತ್ಯಗತ್ಯ. ಅದ್ನೆ ಯೋಚ್ನೆ ಮಾಡ್ತಿದ್ದೆ'' ಎಂದೆ ಆಕೆಗೆ.

''ಎಷ್ಟೇ ಆಗಲಿ. ನೀವು ಗಂಡ್ಸರು. ನೀವು ಅಂಗೂ ಯೋಚ್ನೆ ಮಾಡಬಹುದು.'' ಎನ್ನುತ್ತ ತನ್ನ ಮೊಮ್ಮೊಗಳನ್ನು ತೊಡೆ ಮೇಲಿಂದ ಕೆಳಗಿಳಿ ಸಿದಳು. ''ಈ ಗಾದೆಗೀದೆಗಳೆಲ್ಲ ಗಂಡ್ಸರು ಮಾಡ್ಕೋವು ಅವರ ಅನುಕೂಲಕ್ಕೆ. ಅದೇ ಹೆಂಗ್ಸರ ಅನುಕೂಲಕ್ಕಾಗೋ ಗಾದೆ ಎಲ್ಲೂ ಇಲ್ಲ'' ಓ ಆಗಲ್ಲ! ನಾನು ಹೇಳಿದ್ದು ಗಂಡ-

ಹೆಂಡ್ತಿ ಸಂಬಂಧದ ಬಗ್ಗೆ ಅಷ್ಟೆ'' ಎಂದೆ ನಾನು ನಾನಾಡಿದ ಮಾತನ್ನು ತಿದ್ದಿಕೊಳ್ಳುತ್ತಾ.

''ಅಂಗಲ್ಲ: ಹೆಂಡ್ತೀನೂ ಇಲ್ಲ, ಸಂಬಂಧನೂ ಇಲ್ಲ. ಇದೆಲ್ಲ ಗಂಡ್ಸರ ಸ್ವಾರ್ಥ. ಗಂಡ್ಸಿಗೆ ಬಡತನದಲ್ಲೂ, ಪ್ರಾಯದಲ್ಲೂ, ಮುಪ್ಪಿನಲ್ಲೂ ಹೆಂಗ್ಸು ಬೇಕು, ಅವನ ಬೇಕು ಬೇಡಗಳನ್ನು ಪೂರೈಸಲು. ಸಾಯೋ ಸಮಯದಲ್ಲೂ ಸಹ ಹೆಂಗ್ಸಿನ ತೊಡೆ ಮೇಲೆ ತನ್ನ ತಲೆ ಇಟ್ಟುಕೊಂಡು ಆರಾಮಾಗಿ ಸಾಯಕ್ಕೆ ಬಾಯಿ ಬಿಡ್ತಾನೆ.'' ಎಂದ ಆಕೆ ಮೇಲೆ ದಿಟ್ಟಿಸಿ ಮುಗುಳ್ನಗುತ್ತ ''ಈಗ ನಿಮ್ಮದ್ನೆ ತೆಗೊಳ್ಳನಾ. ನೀವೇಳ್ತಿರಾ ದುಃಖ ಬಂದಾಗಲಲ್ಲ ನನ್ನ ಹೆಂಡ್ತಿನ ನೆನಸಿಕೊಳ್ತೀನಿ ಅಂತ. ಅಕಸ್ಮಾತ್ ಇನ್ನೊಬ್ಬಳು, ನಿಮ್ಮ ಹೆಂಡ್ತಿ ಬದಲಿಗೆ ತುಂಬ ಭಯ ಭಕ್ತಿಯಿಂದ ನಿಮ್ಮ ಸೇವೆ ಮಾಡಿದರೆ ಆಗ಼್ೂ ನೀವು ಪಾರ್ವತಮ್ಮನ್ನ ನೆನಸಿಕೊಳ್ತೀರಾ? ಇಲ್ಲ ನೀವು ನೆನಸಿಕೊಳ್ಳಲ್ಲ. ಜ್ಞಾಪಕ ಅನ್ನೋ ಪಿಠಾರೀಲಿ ಹೂತು ಬಿಡ್ತೀರ, ಆವಮ್ಮನ್ನ. ಇದು ಸತ್ಯ. ಗಂಡಸರು ಸ್ವಭಾವತಃ ಹಾಗೇನೆ. ಮುಪ್ಪು ಗಂಡ್ಸರು ಹೆಂಗ್ಸರು ಎಲ್ಲರಿಗೂ ಒಂದೇ ಸಮನಾಗಿ ಬರುತ್ತೆ. ಆದರೆ ಗಂಡು ತನ್ನ ತೀಟೆಗೋಸ್ಕರ ಹೆಂಗ್ಸರ ಸೇವೆಗೆ ಬಾಯಿಬಿಡ್ತಾನೆ. ಅದ್ನೆ ದೊಡ್ಡದಾಗಿ ಪ್ರಚಾರಾನೂ ಮಾಡ್ತಾನೆ. ಆದರೆ ಹೆಂಗ್ಸಿಗೆ. ನಮ್ಮ ಸಾಂಸಾರಿಕ ಪದ್ಧತೀಲಿ ಅಂತಹ ಅವಕಾಶವೇನಾದರೂ ಉಂಟಾ? ಅಂತಹ ಸ್ವಾತಂತ್ರ್ಯವಿದೆಯಾ? ನೀವು ಶಾಂತವಾಗಿ ಯೋಚ್ನೆ ಮಾಡಿದರೆ ನಾನೇಳಿದ ಸತ್ಯಾನ ನೀವು ಅಲ್ಲಗಳೆಯಲಾರಿರಿ.''

ನಾನು ಕಸಿವಿಸಿಗೊಳ್ಳಲಿಲ್ಲ. ಏಕೆಂದರೆ ಆಕೆ ನನ್ನ ಸ್ವಂತ ಉದಾಹರಣೆಯನ್ನೇ ಕೊಟ್ಟಿದ್ದಳು. ಆಕೆ ಬೊಟ್ಟು ಮಾಡಿದ ಸತ್ಯವನ್ನು ನಾನು ಅಲ್ಲಗಳೆಯಲಾರೆ. ಏಕೆಂದರೆ ನಾವೀರ್ವರು ಜೀವನದ ಅಂತಿಮ ಹಂತದ ಯಾತ್ರೆಯ ಯಾತ್ರಿಕರು. ನಮ್ಮ ವಯಸ್ಸು, ನಮ್ಮ ಆಲೋಚನೆಗಳು, ನಮ್ಮ ದುಃಖದುಮ್ಮಾನಗಳು ಎಲ್ಲವೂ ಒಂದೇ ತರಹ. ಅವು ಅದೇ ಧಾಟಿಯಲ್ಲಿದ್ದವು. ನಮ್ಮ ತೀರ್ಪು ಮತ್ತು ನಮ್ಮ ಅನುಭವಗಳಿಗೆ ಸಂಬಂಧವಿತ್ತು.

ನಾನು ನನ್ನ ಮೊಮ್ಮಗನೊಂದಿಗೆ, ಆಕೆ ಅವಳ ಮೊಮ್ಮಗಳೊಂದಿಗೆ ಪಾರ್ಕಿನಲ್ಲಿ ಭೇಟಿಯಾಗುತ್ತಿದ್ದೆವು. ಹೃದಯಪೂರ್ವಕವಾಗಿ ಒಬ್ಬರಿಗೊಬ್ಬರು ಮಾತನಾಡುತ್ತಿದ್ದೆವು.

ವಾರಗಳು ಉರುಳಿದವು.

ಶಿಕ್ಷಣ, ಸಂಸ್ಕೃತಿ ಮತ್ತು ಹಿತವಾದ ವಾಕ್ಚಾತುರ್ಯದಿಂದ ಕೂಡಿದ ಜಗದಾಂಬಳೊಂದಿಗಿನ ಒಡನಾಟ ಹಾಗೂ ಚರ್ಚೆ ನನ್ನಲ್ಲಿ ಹೊಸ ಜಾಗೃತಿಯನ್ನು ಮತ್ತು ಜೀವನದ ಅರಿವನ್ನು ತಂದಿತ್ತಿತು.

★

ಇದ್ದಕ್ಕಿದ್ದಂತೆ ಜಗದಾಂಬ ಎರಡು ದಿನ ಕಾಣಲಿಲ್ಲ. ಕರ್ನೂಲಿಗೆ ಹೋಗಿದ್ದಾಳೆಂದು ಆಮೇಲೆ ಗೊತ್ತಾಯಿತು. ''ಓ! ಒಂದು ಮಾತನ್ನು ಹೇಳಲಿಲ್ಲವಲ್ಲ ನನಗೆ.'' ಎಂದುಕೊಂಡೆ. ಎರಡು ದಿನಗಳ ಕಾಲ ಕಾಣದೆ ಹೋದ ಆಕೆಯ ಬಗ್ಗೆ ನನ್ನಲ್ಲಿ ಏನೋ ಶೂನ್ಯ ತುಂಬಿದಂತೆ ಭಾಸವಾಯಿತು.

ಮೂರನೆ ದಿನ ಮುಂಜಾನೆ ಬೇಗನೆ ಎಚ್ಚರಗೊಂಡೆ. ಆಗ ಪಕ್ಕದ ಮನೆಯಲ್ಲಿ ಗಟ್ಟಿಯಾಗಿ ಕೂಗಾಡುವ ಸದ್ದು ಹಾಗೂ ಆಕ್ರಂದನ ಕೇಳಿಸಿತು. ಅಷ್ಟೊತ್ತಿಗೆ ಅಕ್ಕಪಕ್ಕದವರು ವಿಶ್ವನಾದಮ್ ಮನೆಯನ್ನು ಮುತ್ತಿಕೊಂಡಿದ್ದರು. ದುರ್ಗ ಕಂಕುಳಲ್ಲಿ ಮಗು ಹಿರುಕಿಕೊಂಡು ರೋದಿಸುತ್ತ ಓಡಿಬಂದಳು.

''ನಮ್ಮ ಅಮ್ಮ ಸತ್ತೋದ್ರು ಅಂತಾರೆ ಅವರು. ಗುರುವಾರ ಬೆಳಿಗ್ಗೆ ಸಾಯಿಬಾಬಾ ಮಂದಿರಕ್ಕೆ ಹೋದರು. ತುಂಗಭದ್ರ ನದೀಲಿ ಸ್ನಾನ ಮಾಡುವಾಗ ಕಾಲು ಜಾರಿ ಮುಳುಗಿದರಂತೆ. ನನ್ನ ದೊಡ್ಡಪ್ಪ. 'ಹೆಣ ಮನೆಗೆ ತಂದಿದ್ದೀವಿ. ತಕ್ಷಣ ಬನ್ನಿ' ಅಂತ ಟೆಲಿಗ್ರಾಮ್ ಕಳಿಸವ್ರೆ. ಕರ್ನೂಲ್ ಬಸ್ಸಿಗೆ ಈಗ ಹೋಯ್ತಿ

ದ್ದೀವಿ'' ಅಳುವಿನ ಮಧ್ಯೆ ಹೇಗೋ ಸಾವರಿಸಿಕೊಂಡು ಹೇಳಿದಳು.

ಜಗದಾಂಬ ಸತ್ರಾ? ನಿಜವಾಗ್ಲೂ ಆಯಮ್ಮ ಸತ್ರಾ?

ನನಗೆ ಆಘಾತವಾಯಿತು. ಕಂಪನಗಳು ನನ್ನ ದೇಹಾದ್ಯಂತ ಹರಿದಾಡಿದವು. ನನ್ನ ಮೆದುಳು ಒಂದು ನಿಮಿಷ ಹೆಪ್ಪುಗಟ್ಟಿತು. ನನ್ನಲ್ಲಿ ದುಃಖದ ಅಲೆ ಏಳುತ್ತಿರುವಂತೆ ಅನುಭವವಾಯಿತು. ಗಂಡಸಾಗಿ ನಾನು ನನ್ನ ಕಣ್ಣೀರನ್ನು ಬೇರೆಯವರು ನೋಡಲು ಬಿಡಲಿಲ್ಲ. ನನ್ನ ಮುಖವನ್ನು ಹೊರಳಿಸಿಕೊಂಡು ಪಾರ್ಕಿನ ಕಡೆ ಓಡಿದೆ. ನಾನು ಅಲ್ಲಿ ನಿಂತಿದ್ದೆನೋ, ಕುಳಿತಿದ್ದೆನೋ, ಹಿಂದಕ್ಕೂ ಮುಂದಕ್ಕೂ ತಿರುಗಾಡಿದನೋ ಜ್ಞಾಪಿಸಿಕೊಳ್ಳಲಾರೆ; ಆದರೆ ಅರ್ಧ ಗಂಟೆ ಕಳೆದ ಬಳಿಕ ಮನೆಗೆ ಹಿಂದಿರುಗಿದೆ.

ಪಕ್ಕದ ಮನೆ ಬೀಗ ಹಾಕಿತ್ತು. ಸ್ತ್ರೀಯರು ಮಂಕು ಕವಿದ ಮೋರೆ ಹೊತ್ತು ನಮ್ಮ ಮನೆಯ ವರಾಂಡದಲ್ಲಿ ನಿಂತಿದ್ದರು.

''ಹೋದ ಸೋಮವಾರ ದುರ್ಗಳ ಅತ್ತೆ ಇಲ್ಲಿಗೆ ಬಂದಿದ್ದಳು. ಇಡೀ ದಿನ ಹುಯಿಲೋ ಹುಯಿಲು. ಆ ಪಿಶಾಚಿ ಹೆಂಗ್ಸು ಆ ಅವ್ವನ ಬಯ್ಯಕ್ಕೆ ಬಂದಿದ್ಲು. ತಾಯಿ ಮಗಳು ಜೊತೆ ಸೇರಿ ನನ್ನ ಮಗನ್ನ ಹಾಳು ಮಾಡಿದ್ರಿ. ನನ್ನಿಂದ ಅವನ್ನ ಕಿತ್ಕೊಂಡ್ರಿ. ಪವಿತ್ರವಾದ ತಾಳೀನಾ ಕಟ್ಟಿರೋದು ನನ್ನ ಮಗಳ ಕೊರಳಿಗೆ, ನಿನ್ನ ಕೊರಳಿಗಲ್ಲ.'' ಅಂಗೆ ಆ ಮುದುಕಿ ಅವ್ವನಿಗೆ ಬಯ್ಯುತ್ತಿದ್ದುದನ್ನು ನಾನು ಕೇಳಿಸಿಕೊಂಡೆ.'' ಎಂದು ಲಕ್ಷ್ಮಿ ಮತ್ತೊಬ್ಬಳಿಗೆ ಹೇಳುತ್ತಿದ್ದಳು.

''ಅವ್ರಿಗೆ ಈ ಬಯ್ಗುಳ, ಈ ಹಗರಣನೆಲ್ಲ ಸಹಿಸಕ್ಕಾಗಲಿಲ್ಲ. ಹೊತ್ತಿಗೆ ಮುಂಚೆ ಎದ್ದು ಕರ್ನೂಲ್ ಬಸ್ಸಿಡಿದರು. ಅಲ್ಲಿಗೆ ಅವ್ವ ಹೋಗಿದ್ದು ನೆಂಟರನ್ನು ನೋಡಕ್ಕಲ್ಲ, ಪ್ರಾಣ ಬಿಡಕ್ಕೆ.'' ಕಣ್ಣೀರನ್ನು ಒರೆಸಿಕೊಳ್ಳುತ್ತ ಲಕ್ಷ್ಮಿ ಬೇರೆಯವರಿಗೆ ಹೇಳುತ್ತಿದ್ದಳು. ನಾನು ಕೇಳಿಸಿಕೊಂಡೆ. ಜನರ ಗುಂಪಿನ ನಡುವೆ ದಾರಿ ಮಾಡಿಕೊಂಡು ಒಳಗೆ ಹೋದ ಕೂಡಲೆ - ಸೋಫಾದ ಮೇಲೆ ಮುದುರಿಕೊಂಡೆ.

ಹಿಂದುಗಡೆಯಿಂದ ತಟ್ಟಾಡಿಕೊಂಡು ಬಂದ ರಾಹುಲ್ ''ಅಜ್ಜಿ ಹೊಂಟೋಯ್ತು'' ಎಂದ ತನ್ನ ಪುಟ್ಟ ಕೈ ತಿರುಗಿಸುತ್ತ. ಆತನಿಗೂ ಅದೊಂದು ಕೆಟ್ಟ ವಾರ್ತೆ ಎನ್ನುವುದು ಅರ್ಥವಾಗಿತ್ತು.

ಮಾರನೇ ದಿನ ನನಗೆ ಒಂದು ರಿಜಿಸ್ಟರ್ಡ್ ಕವರ್ ಬಂತು. ಅದರೊಳಗೆ ಒಂದು ಡಿ.ಡಿ. ಹಾಗೂ ಒಂದು ಪತ್ರ ಇತ್ತು.

''ಮಿ. ರಾಜು,

ನಮಸ್ತೆ. ಇದರೊಂದಿಗೆ ಎರಡು ಸಾವಿರ ರೂಗಳ ಡಿ.ಡಿ. ಲಗತ್ತಿಸಿರುವೆ. ದಯಮಾಡಿ ಈ ಹಣವನ್ನು ಬ್ಯಾಂಕಿನಿಂದ ಪಡೆದು ಅದನ್ನು ಲಕ್ಷ್ಮಿಗೆ ಕೊಡಿ. ಈ ಹಣದಲ್ಲಿ ಒಂದು ಎಮ್ಮೆ ಕೊಳ್ಳುವಂತೆ ಆಕೆಗೆ ಹೇಳಿ. ಲಕ್ಷ್ಮಿ ಯಾರ ನೆರವನ್ನಾಗಲೀ ಅಥವಾ ಅನುಕಂಪವನ್ನಾಗಲೀ ಬಯಸುವವಳಲ್ಲ. ಆದಾಗ್ಯೂ ನಾನು ನನ್ನ ಸ್ವಇಚ್ಛೆಯಿಂದ ಕಳುಹಿಸುತ್ತಿದ್ದೇನೆ. ನನ್ನ ಮನಸ್ಸಮಾಧಾನಕ್ಕಾಗಿ ತೆಗೆದುಕೊಳ್ಳುವಂತೆ ಆಕೆಗೆ ತಿಳಿಸಿ. ಅವಳ ಮಕ್ಕಳಿಗೆ ನನ್ನ ಆಶೀರ್ವಾದಗಳನ್ನು ತಿಳಿಸಿ.

ನನ್ನ ಜೀವನದ ಪ್ರತಿ ಹಂತದಲ್ಲಿ ಭುಗಿಲೆದ್ದ ಆಮಿಷಗಳನ್ನು ಒಂದೇ ಸಮನೆ ಹತ್ತಿಕ್ಕಲು ಯತ್ನಿಸಿದೆ. ಆದರೂ ಕೂಡ ಸಮಾಜ ಸಹಿಸಲಿಲ್ಲ. ಪ್ರತಿ ಹೆಜ್ಜೆಯಲ್ಲೂ ನಾನು ಕಷ್ಟಗಳನ್ನು ಎದುರಿಸಬೇಕಾಯಿತು. ನಿಮ್ಮಿಂದ ಬೀಳ್ಕೊಡುತ್ತಿದ್ದೇನೆ.

ಕರ್ನೂಲ್ 10-2-89. ನಿಮ್ಮ ಚಿರಪರಿಚಿತಳಾದ

ಜಗದಾಂಬ

ಭಾವನೆಗಳು ನನ್ನನ್ನು ಬಹುದೂರಕ್ಕೆ ಎಳೆದೊಯ್ಯುತ್ತಿದ್ದಂತೆ ನಾನು ಶಿಲಾ ಮೌನಿಯಾದೆ. ಇನ್ನು ಕರಗಲು ಹೃದಯಕ್ಕೆ ಶಕ್ತಿ ಇಲ್ಲವಾಗಿತ್ತು. ಅದಕ್ಕೆ ಇದ್ದಿದ್ದೆ ಆದರೆ, ಆ ಕ್ಷಣದಲ್ಲೇ ಅದು ಕರಗಿ ನೀರಾಗಿ ಹರಿಯುತ್ತಿತ್ತು.

●

# ಪುನರ್ಜನ್ಮ : ಎರಡು ದೃಷ್ಟಿ

'ನೆನಪುಗಳು ಮರುಕಳಿಸುತ್ತವೆಯೆ?' (ಕಸ್ತೂರಿ, ಮೇ 92) ಲೇಖನದಲ್ಲಿ ಲೇಖಕರು ''ಪುನರ್ಜನ್ಮ ಸಿದ್ಧಾಂತದ ಬಗ್ಗೆ ವೃತ್ತಪತ್ರಿಕೆಗಳಲ್ಲಿ ಅನೇಕ ಬಾರಿ ಸುದ್ದಿ ಪ್ರಕಟವಾಗಿದ್ದರೂ, ಅವುಗಳ ಬಗ್ಗೆ ಸಂಶೋಧನೆ, ಅಧ್ಯಯನ ನಡೆಸಿದಾಗ ಅವೆಲ್ಲ ನಿರಾಧಾರವಾದುವು'' ಎಂಬ ವಿಚಾರವನ್ನು ಅನೇಕ ದೃಷ್ಟಾಂತಗಳಿಂದ ಎತ್ತಿ ಹಿಡಿದಿದ್ದಾರೆ.

ಉಪನಿಷತ್ತಿನಲ್ಲಿ ಬರುವ ಪುನರ್ಜನ್ಮದ ವಿಚಾರವಾಗಿ ಬರೆಯುತ್ತ 'ವರ್ಗವಿಭಕ್ತ ಸಮಾಜ ವ್ಯವಸ್ಥೆಯನ್ನು ಶಾಶ್ವತವಾಗಿಸಲು ಇದೊಂದು ಬಲವಾದ ಅಸ್ತ್ರ' ಎಂದಿದ್ದಾರೆ. ಆದರೆ ತ್ಯಾಗ, ಅಹಿಂಸೆ, ಲೋಕಕಲ್ಯಾಣಗಳೇ ತಮ್ಮ ಉಸಿರಾಗಿಟ್ಟುಕೊಂಡಿದ್ದ ಶಂಕರ, ರಾಮಾನುಜ, ಮಧ್ವ, ಬುದ್ಧ, ರಮಣಮಹರ್ಷಿ, ಅರವಿಂದರು ಮುಂತಾದವರೆಲ್ಲ ಪುನರ್ಜನ್ಮದಲ್ಲಿ ನಂಬಿಕೆಯಿಟ್ಟವರೆ. ಆದ್ದರಿಂದ ಪುನರ್ಜನ್ಮದಲ್ಲಿ ನಂಬಿಕೆಯಿಟ್ಟವರೆಲ್ಲ ಸ್ವಾರ್ಥಿಗಳು, ಕುಟಿಲರು ಎಂದು ಹೇಳುವುದು ಸತ್ಯಕ್ಕೆ ದೂರವಾಗುತ್ತದೆ.

ಮಾನವನಿಗೆ ತಾನು ಅಮರನಾಗಬೇಕು ಎಂಬ ಅದಮ್ಯ ಆಸೆಯೇ ಪುನರ್ಜನ್ಮದ ಉಗಮದ ಬೀಜವಾಗಿದ್ದಿರಬೇಕು. ಜತೆಗೆ ಅಕಸ್ಮಾತ್ತಾಗಿ ಅನಿರೀಕ್ಷಿತ ಘಟನೆ ಏನಾದರೂ ಸಂಭವಿಸಿದಾಗ, ಎಷ್ಟೇ ಪ್ರಯತ್ನಿಸಿದರೂ ನಿರೀಕ್ಷಿಸಿದ ಫಲ ದೊರಕದಾಗ, ಅಪಘಾತದಲ್ಲಿ ಯಾರಾದರೂ ಮರಣ ಹೊಂದಿದಾಗ ತನ್ನ ಮನಸ್ಸನ್ನು ಸಮಾಧಾನ ಮಾಡಿಕೊಳ್ಳಲು 'ಹಿಂದಿನ ಜನ್ಮದ ಫಲ' ಎಂದುಕೊಂಡು, ಪುನರ್ಜನ್ಮವನ್ನು ಸೃಷ್ಟಿಸಿಕೊಂಡಿರಬಹುದು. ಇದಲ್ಲದೆ ಪ್ರಪಂಚದಲ್ಲಿ ಕಾಣುವ ಏರುಪೇರು - ಶ್ರೀಮಂತರು, ಬಡವರು, ಮೇಧಾವಿಗಳು, ಮೂರ್ಖರು, ಶ್ರಮಜೀವಿಗಳು, ಸುಖಲೋಲುಪರು ಈ ಅಸಮಾನತೆಯ ಕಾರಣ ಕಂಡುಹಿಡಿಯಲು ಪ್ರಯತ್ನಿಸಿ 'ಜನ್ಮಾಂತರದ ಕರ್ಮ' ಎಂಬ ಭಾವನೆ ಉದ್ಭವಿಸಿರಬಹುದು.

ಪುನರ್ಜನ್ಮದ ಬಗ್ಗೆ ಆಳವಾಗಿ ಯೋಚಿಸಿದಂತೆಲ್ಲ ಪ್ರಶ್ನೆಗಳು ಪುಂಖಾನುಪುಂಖವಾಗಿ ಏಳುತ್ತವೆ. ಅದನ್ನು ನಂಬುವವರ ಪ್ರಕಾರ ಸಕಲ ಜೀವಿಗಳೂ (ಮನುಷ್ಯ ಮಾತ್ರವೇ ಅಲ್ಲ) ತಮ್ಮ ಕರ್ಮಕ್ಕನುಸಾರವಾಗಿ ಜನ್ಮಗಳನ್ನು ಪಡೆಯುತ್ತ ಹೋಗಿ ಕೊನೆಗೆ ಜನ್ಮದಿಂದಲೇ ಮುಕ್ತಿ ಪಡೆಯುತ್ತವೆ. ಇದನ್ನು ಒಪ್ಪಿಕೊಳ್ಳುವ ಮೊದಲು ಸ್ವಲ್ಪ ಸ್ಥೂಲವಾಗಿ ವಿಚಾರಮಾಡಿದರೂ ಅನೇಕ ಪ್ರಶ್ನೆಗಳು ಏಳುತ್ತವೆ. (1) ನಮ್ಮ ಭೂಮಿ ಹುಟ್ಟಿದ್ದು ಸುಮಾರು 500 ಕೋಟಿ ವರ್ಷಗಳ ಹಿಂದೆ. ವಿಜ್ಞಾನಿಗಳ ಪ್ರಕಾರ ಭೂಮಿಯ ಮೇಲೆ ಬಿಟ್ಟು ಬೇರೆ ಯಾವ ಗ್ರಹದಲ್ಲೂ ಜೀವಿಗಳಿರುವ ಸಾಧ್ಯತೆಯಿಲ್ಲ. ಹಾಗಿದ್ದಲ್ಲಿ ಭೂಮಿ ಹುಟ್ಟುವ ಮುಂಚೆ ಈಗ ಇಲ್ಲಿರುವ ಅಮರ ಜೀವಿಗಳೆಲ್ಲ ಎಲ್ಲಿದ್ದವು? (2) ಭೂಮಿಯ ಮೇಲಿರುವ ಜೀವಿಗಳಿಗೆಲ್ಲ ಆಧಾರ ಸೂರ್ಯ. ಅವನೂ ಒಂದು ದಿನ ಸಾಯುತ್ತಾನೆ. ಆಗ ಭೂಮಿಯ ಮೇಲಿನ ಸಕಲ ಜೀವರಾಶಿಗಳು ನಾಶವಾಗುತ್ತವೆ. ಅವುಗಳು ಹೋಗುವುದಾದರೂ ಎಲ್ಲಿಗೆ? ಕೋಟ್ಯನುಕೋಟಿ ವಿಭಿನ್ನ ಜೀವಿಗಳಿಗೆಲ್ಲ ಒಂದೇ ಬಾರಿ ಮುಕ್ತಿ ಸಿಕ್ಕುವುದೆ? (3) ಒಂದು ಜೀವ ಮೊದಲಬಾರಿ ಜನ್ಮ ತಾಳುವುದಾದರೂ ಏಕೆ? ಆ ಜನ್ಮದಲ್ಲಿ ಶೇಕಡಾವಾರು ಕುಸಂಸ್ಕಾರ ಮತ್ತು ಸುಸಂಸ್ಕಾರಗಳು ಎಷ್ಟು ಮತ್ತು ಹೇಗೆ? (4) ವೈಚಾರಿಕ ಸಾಮರ್ಥ್ಯವೇ ಇಲ್ಲದ ಹುಳು, ಕ್ರಿಮಿಕೀಟಗಳು ವಿಕಸನಗೊಂಡು ಮುಕ್ತಿ ಪಡೆಯುವದಾದರೂ ಹೇಗೆ? (5) ವೈಚಾರಿಕತೆ ಹೊಂದಿರುವ ಮಾನವನಲ್ಲಿ ಕೂಡ ಅವನ ಆಲೋಚನೆಗಳು, ಕರ್ಮಗಳು ಅವನ ಹಿಂದಿನ ಜನ್ಮದಿಂದ ಬಂದ ಸಂಸ್ಕಾರದ ಫಲವಾಗಿದ್ದಲ್ಲಿ ಸುಸಂಸ್ಕಾರ ಅವನಲ್ಲಿ ಹೆಚ್ಚುವುದು ಹೇಗೆ? (6) ವಿಧಿ ಮತ್ತು ಸ್ವಪ್ರಯತ್ನ ಇವುಗಳ ಪಾತ್ರ

ವೇನು? (7) ಭಗವಂತನ 'ಕೃಪೆ' ಎಂದರೇನು?

ತರ್ಕಕ್ಕೆ ನಿಲುಕದ್ದು ಈ ಪ್ರಪಂಚದಲ್ಲಿ ಏನೂ ಇಲ್ಲ ಎಂದು ಹೇಳಲಾಗುವುದಿಲ್ಲ. ಮಹಾತ್ಮರ ಎಷ್ಟೋ ಅನುಭವಗಳು ತರ್ಕಕ್ಕೆ ಎಟುಕಲಾರವು. ಆದರೆ ಪುನರ್ಜನ್ಮದ ವಿಚಾರದಲ್ಲಿ ಅನುಭವವೂ ಸಾಧ್ಯವಿಲ್ಲ. ಹೀಗಾಗಿ ಅದೊಂದು ಕೇವಲ ನಂಬಿಕೆಯಾಗಿಯೇ ಉಳಿಯುತ್ತದೆ.

● ಎ. ಪದ್ಮಾವತಮ್ಮ

ಲೇಖಕರು ಪುನರ್ಜನ್ಮ ಸಿದ್ಧಾಂತಕ್ಕೂ ವರ್ಗ ವಿಭಕ್ತ ವ್ಯವಸ್ಥೆಯ ಶಾಶ್ವತೀಕರಣಕ್ಕೂ ಗಂಟು ಹಾಕಿ ಉಪನಿಷತ್ತುಗಳು ಶೋಷಿತವರ್ಗಗಳಿಗೆ ಸಾಮಾಜಿಕ ವಿಷಮತೆ ಮತ್ತು ದಾರಿದ್ರ್ಯವನ್ನು ತೊಲಗಿಸಿಕೊಳ್ಳಲು ಪ್ರಯತ್ನಿಸಬೇಡಿ ಮುಂತಾಗಿ ಉಪದೇಶಿಸುತ್ತವೆ ಎಂದೆಲ್ಲಾ ಬರೆದಿರುವುದು ಅತ್ಯಂತ ಹಾಸ್ಯಾಸ್ಪದ.

''ಯಾವುದೋ ಕರ್ಮವು ನನ್ನನ್ನು ಪ್ರೇರಿಸುತ್ತಿದೆ'' ಎನ್ನುವುದು ಅರ್ಥವಿಲ್ಲದ ಕುಕಲ್ಪನೆ. ಯಾವನು ಹೀಗೆನ್ನುತ್ತಾ ಪ್ರತ್ಯಕ್ಷ ವಿಷಯದಲ್ಲಿ ಪುರುಷ ಪ್ರಯತ್ನವನ್ನು ಬಿಟ್ಟು ಕೂಡುವನೋ ಅವನನ್ನು ದೂರೀಕರಿಸಬೇಕು.

ಶ್ರುತಿಸ್ಮೃತಿಗಳಲ್ಲಿ ಇಂತಹ ಅಸಂಖ್ಯಾತ ನಿದರ್ಶನಗಳಿದ್ದು ಸರಿಯಾದ ದೃಷ್ಟಿಕೋನ ಮತ್ತು ಬಿಚ್ಚುಮನಸ್ಸಿನ ಯಾರಿಗೇ ಆಗಲಿ ಈ ಉದಾತ್ತ ನಿಲುವು ಗೋಚರವಾಗದಿರದು.

ತಲೆಕೆಳಗಾಗಿ ನಿಂತು ನೋಡುವುದಾದರೆ "Blessed are ye when men shall revile you and persecute you" ಮುಂತಾದ ಕ್ರೈಸ್ತ ವಾಣಿಯು ''ಶೋಷಿತರೆ ನೀವು ಬಂಡಾಯ ಮಾಡಬೇಡಿ, ನೀವು ತುಳಿಸಿಕೊಳ್ಳುತ್ತಿದ್ದರೆ ನಿಮಗೆ ಸ್ವರ್ಗ ಕಟ್ಟಿಟ್ಟ ಬುತ್ತಿ'' ಎಂದು ಹೇಳುವುದರ ಮೂಲಕ ವರ್ಗವಿಭಕ್ತ ವ್ಯವಸ್ಥೆಯನ್ನು ಶಾಶ್ವತವಾಗಿಸುವ ಉದ್ದೇಶದಿಂದ ಕೂಡಿತ್ತು ಎಂಬ ಅರ್ಥವನ್ನೂ ತೆಗೆಯಬಹುದು. ಹೀಗೆಲ್ಲಾ ಸಾಧಿಸುತ್ತಾ ಹೋದರೆ ಯಾವುದರಿಂದ ಯಾವುದೇ ಅರ್ಥವನ್ನು ಹೊರಡಿಸಬಹುದು.

ಲೇಖಕರು ತಿಳಿದಿರುವಂತೆ ವೇದೋಪನಿಷತ್ತುಗಳು ವಾಸ್ತವಿಕ ಜಗತ್ತಿನ ಅಸ್ತಿತ್ವ ಹಾಗೂ ಸಮಸ್ಯೆಗಳನ್ನು ತುಚ್ಛವೆನ್ನುವುದಿಲ್ಲ. ''ಕುರ್ವನ್ನೇವೇಹಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ '' ಸಕ್ರಿಯವಾಗಿಯೇ ನೂರು ವರ್ಷಗಳು ಜೀವಿಸಿರಬೇಕು) ಎಂಬುದು ನಮ್ಮ ಹಿರಿಯರ ಧೋರಣೆಯಾಗಿತ್ತು. ಅವರು ''ಪಶ್ಯೇಮ ಶರದಃ ಶತಂ, ಜೀವೇಮ ಶರದಃ ಶತಂ,... ಶರದಃ ಶತಾತ್'' (ನೂರು ಶರತ್ಕಾಲ ನೋಡೋಣ, ನೂರು ಶರತ್ಕಾಲ ಬದುಕಿರೋಣ... ನೂರಕ್ಕೂ ಮೀರಿ) ಎನ್ನುತ್ತಿದ್ದ ಜೀವನೋತ್ಸಾಹಿಗಳಾಗಿದ್ದರು. ''ತೇಜೋಮಯಿ ದೇಹಿ, ವೀರ್ಯಂಮಯಿದೇಹಿ, ಬಲಂಮಯಿ ದೇಹಿ'' (ನನಗೆ ತೇಜಸ್ಸನ್ನು ಕೊಡು, ಪೌರುಷವನ್ನು ಕೊಡು, ಬಲವನ್ನು ಕೊಡು) ಮುಂತಾಗಿ ಕೋರುತ್ತಿದ್ದ ಮಹತ್ವಾಕಾಂಕ್ಷಿಗಳಾಗಿದ್ದರು. ವೇದೋಪನಿಷತ್ತುಗಳು ವಾಸ್ತವಿಕ ಜಗತ್ತನ್ನು ಕಡೆಗಣಿಸುವುದೆಂಬ ವಾದವನ್ನು ಹುಟ್ಟುಹಾಕಿ ಪ್ರಚಾರ ಮಾಡಿದವರು ಹೊರಗಿನಿಂದ ಭಾರತಕ್ಕೆ ಬಂದವರು. ತಮ್ಮದು ಶ್ರೇಷ್ಠವೆಂದು ಅವರು ಹೇಳಿಕೊಳ್ಳಬೇಕಿತ್ತು.

ಉಪನಿಷತ್ತುಗಳಲ್ಲಿ ಕರ್ಮ, ಪುನರ್ಜನ್ಮ ಮುಂತಾದ ಸಿದ್ಧಾಂತಗಳಿಗೆ ನೀಡಲಾಗಿರುವ ಪ್ರಾಶಸ್ತ್ಯ ತೀರ ಗೌಣ. ಇವೇ ಪರಮಾರ್ಥ ಎಂದೇನೂ ನಮ್ಮ ಋಷಿಮುನಿಗಳು ಅಭಿಪ್ರಾಯ ಪಟ್ಟಿರಲಿಲ್ಲ. ಆದರೆ ಅವರು ಇವುಗಳನ್ನು ಆತ್ಮೈಕತ್ವವನ್ನು ಪ್ರತಿಪಾದಿಸಬಹುದಾದ ಪ್ರಕ್ರಿಯೆಗಳಾಗಿ ಬಳಸಿಕೊಂಡರು. ಗೌಡಪಾದರು ''ಉಪಾಯಃ ಸೋವತಾರಾಯ ನಾಸ್ತಿಭೇದಃಕಥಂಚನ'' ಎಂಬಲ್ಲಿ ಹೇಳಿರುವಂತೆ ಇವೆಲ್ಲಾ ತತ್ವಕ್ಕೆ ವಿಚಾರವನ್ನು ಇಳಿಬಿಡುವ ಉಪಾಯಗಳಷ್ಟೆ. ಲೇಖಕರು ಇದನ್ನು ಮನಗಾಣಬೇಕು.

● ಲಾಲಪ್ಪ ಶಕ್ರೆಪ್ಪ ಲಂಬಾಣಿ

# ಗೋರಿ

ತನ್ನ ಇಳಿ ವಯಸ್ಸಿನಲ್ಲೂ
ಅಂವ ಕಾಣಬಯಸಿದ್ದು;
ಪ್ರಿಯತಮೆಯ ಬೊಚ್ಚುಬಾಯಿ...
ಸುಕ್ಕಾದ ಮೂತಿ, ಮೈ ತೊಗಲಗಂಧ

ಆಕೆ ಇನ್ನೂ ಚೈತ್ರ
ಕನಸುಗಳ ಪಕಳೆ ಉದುರದಹಾಗೆ
ಮೆತ್ತಗೆ ಬಿರಿವ ಮುತ್ತುಗವು

ಅಂವ ಬರುವ ದಾರಿಯಲಿ
ಹರಡಿದ ಸುಖದ ಏದುಸಿರುಗಳು, ಪುಳಕಗಳು

ಅಂವ ಬಂದ
ಬಿಂದಿಗೆಯ ತುಂಬ
ಬೆಂದ ಕಡಲ ತಂದ

ಆಕೆ ಭೂತವನೆ ಬಗೆದು ಹದಿವಯದ
ತನ್ನ ಆಳೆತ್ತರ ಮೈ ಮಾಟವನು ಬರೆದಿಟ್ಟಳು

ಅಂವ -
ಕಣ್ಣು ಪರೆ ಹರಿದು ಆ ಚಹರೆ ಮೇಲೆ
ನೆದರ ನಾಜೂಕು ಮಂಜನು ಸುರಿದ

ಚಣ ಹೊತ್ತಲಿ ನಿರಿಗೆಗಟ್ಟಿತು ಚಹರೆ
ಕೆನೆಗಟ್ಟಿದ ರಂಗು ಕೋರಿ...
ಬಿಂದುವಿನಲಿ ಹರಿವ ನದಿಯು
ಘಾತವಾದವು ಮತ್ತೇರಿದ ಮಹಾಚೈತ್ರಕೆ
ಮಳೆಗಾಳಿ ಬೆಳಕು ಗೋರಿ ಹಾಡಿದವು
ಈ ನೆಲವ ಸೇರದೆ, ಸೇರದಿರಲೂ ಆಗದೆ.

● *ಶಂಕರ ಕಟಗಿ*

[*ಗೋರಿ : ಪ್ರಾಣಿಗಳನ್ನು ಮರುಳುಗೊಳಿಸಿ ಬೇಟೆಗೆ ಆಕರ್ಷಿಸುವ ಬೇಟೆಗಾರ ಹಾಡುವ ಗೀತೆ.]



**ಹೊರ ದೇಶದಲ್ಲಿ ನೆಲೆಸಿದಾಗ ರಾಯಭಾರಿ ಕಚೇರಿಯೊಂದಿಗೆ ಒಂದು ಬಗೆಯ ಭಾವನಾತ್ಮಕ ಸಂಬಂಧವೇರ್ಪಟ್ಟಿರುತ್ತದೆ. ಆದರೆ ಈ ರಾಯಭಾರಿಗಳ ಸ್ವಭಾವ, ವರ್ತನೆ ಒಂದೇ ಬಗೆಯಲ್ಲಿರುವುದಿಲ್ಲ. ಇವರೊಂದಿಗಿನ ಸಂಪರ್ಕದಲ್ಲಿ ಕಂಡುಂಡ ಸಿಹಿ-ಕಹಿ ಅನುಭವಗಳನ್ನು ಇಲ್ಲಿ ಹಂಚಿಕೊಂಡಿದ್ದಾರೆ ಕನ್ನಡದ ವೈದ್ಯರೊಬ್ಬರು.**

# ರಾಯಭಾರಿಗಳು: ಅನುಭವ ಸ್ವಾರಸ್ಯ

● *ಡಾ. ಪ್ರಕಾಶ ಕೊಣ್ಣೂರ*

**ಯಾ**ವುದೇ ಕಾರಣದಿಂದ ಹೊರದೇಶಕ್ಕೆ ಹೋದರೂ ಅಲ್ಲಿಯ ನಮ್ಮ ದೇಶದ ರಾಯಭಾರಿ ಕಚೇರಿಯ ಸಂಪರ್ಕ ಅನಿವಾರ್ಯ. 'ಪರದೇಶಿ'ಯಾದಾಗ 'ನಮ್ಮ ದೇಶದ್ದು' ಎಂಬ ಅಭಿಮಾನ ಸೃಜಿಸುವ ಕಚೇರಿಯಿದು. ರಾಯಭಾರಿ ಕಚೇರಿಗಳೊಂದಿಗೆ ಕಾಯ್ದೆ-ಕಾನೂನಿನ ಸಂಬಂಧವಷ್ಟೇ ಅಲ್ಲದೆ ಒಂದು ಬಗೆಯ ಭಾವನಾತ್ಮಕ ಬೆಸುಗೆಯೂ ಉಂಟಾಗಿರುತ್ತದೆ. ಆದರೆ ಈ ಕಚೇರಿಗಳಲ್ಲಿ ಎದುರಾಗುವ ಅಧಿಕಾರಿಗಳ ವರ್ತನೆಗಳೆಲ್ಲ ಒಂದೇ ರೀತಿಯಾಗಿರುವುದಿಲ್ಲ. ಕೆಲವರ ಹುಬ್ಬುಗಳು ಗಂಟಿಕ್ಕಿಕೊಂಡು ಮುಖದ ತುಂಬ ಸದಾ ಸಿಡುಕು ಕಿಡಿಕಾರುತ್ತಿದ್ದರೆ ಇನ್ನೂ ಕೆಲವು ಅಧಿಕಾರಿಗಳ ವರ್ತನೆಯಲ್ಲಿ ಆತ್ಮೀಯತೆ ಹಾಸುಹೊಕ್ಕಾಗಿರುತ್ತದೆ. ಇಂಥ ತರಹೇವಾರಿ ಸ್ವಭಾವದ ರಾಯಭಾರಿಗಳೊಂದಿಗೆ ವ್ಯವಹರಿಸುವಾಗ ಸ್ವಾರಸ್ಯಕರ ಪ್ರಸಂಗಗಳಿಗೇನೂ ಕೊರತೆಯುಂಟಾಗದು.

ನೆನಪಿನ ಪಾತ್ರೆಯಲ್ಲಿ ಕೆಲವು ಪ್ರಸಂಗಗಳು 'ಕಹಿಗಸಿ' ಉಳಿಸಿದರೆ, ಉಳಿದವು 'ಸಿಹಿಕೆನೆ' ತೇಲಿಸಿರುತ್ತವೆ. ಉಗಾಂಡಾ, ಕೀನ್ಯಾ, ಸೌದಿ ಅರೇಬಿಯಾ ರಾಷ್ಟ್ರಗಳಲ್ಲಿ ಹಲವಾರು ವರ್ಷಗಳನ್ನು ಕಳೆದ ನನಗೂ ಕೆಲವು ಕಹಿ-ಸಿಹಿ ಅನುಭವಗಳಾದವು.

ಮೊಟ್ಟಮೊದಲು ಭಾರತದಾಚೆ ಹೋಗುವ ಅವಕಾಶ ನನಗೆ ಒದಗಿದ್ದು 1977ರಲ್ಲಿ. ದೆಹಲಿಯಲ್ಲಿರುವ ಉಗಾಂಡಾ ದೇಶದ ರಾಯಭಾರಿ ಕಚೇರಿಯವರು ನನ್ನನ್ನು ಸಂದರ್ಶನಕ್ಕೆ ಕರೆದರು. ಪ್ರಥಮ ದರ್ಜೆ ರೈಲು ಪ್ರಯಾಣದ ವೆಚ್ಚ ಹಾಗೂ ಎರಡು ದಿನ ತಂಗುವ ಖರ್ಚನ್ನು ತಾವೇ ಭರಿಸುವ ಆಕರ್ಷಣೆ ಬೇರೆ.

ಉಗಾಂಡಾದ ರಾಯಭಾರಿಗಳು ಅಧ್ಯಕ್ಷರಾಗಿದ್ದ ಸಂದರ್ಶಕ ಸಮಿತಿಯಲ್ಲಿ ಅಲ್ಲಿಯ ಕೆಲವು ಪ್ರಮುಖ ವೈದ್ಯಾಧಿಕಾರಿಗಳೂ ಇದ್ದರು. ಉಗಾಂಡಾ ಆಗ ಇದಿ ಅಮೀನನ ಆಳ್ವಿಕೆಯಲ್ಲಿತ್ತು. ಸಂದರ್ಶನವನ್ನು ತೃಪ್ತಿಕರವಾಗಿ ಮುಗಿಸಿ ಕೋಣೆಯಿಂದ ಹೊರಬರುತ್ತಿದ್ದಂತೆ ನನ್ನನ್ನು ಮತ್ತೆ ಕೊಠಡಿಯೊಳಗೆ ಕರೆಯಲಾಯಿತು.

ರಾಯಭಾರಿ ಮಾತನಾಡಿದರು:

''ನೀವು ಸಂದರ್ಶನದಲ್ಲಿ ಯಶಸ್ವಿಯಾಗಿದ್ದೀರಿ. ಈಗ ನಾನು ಮತ್ತೊಂದು ಪ್ರಶ್ನೆ ಕೇಳುತ್ತೇನೆ. ಉಗಾಂಡಾದ ಬಗೆಗೆ ನಿಮಗೇನು ಗೊತ್ತಿದೆ?''

''ಅದು ಸಾಕಷ್ಟು ಶ್ರೀಮಂತವಾದ ಸುಂದರ ದೇಶವೆಂದು ಕೇಳಿದ್ದೇನೆ. ಇದಿ ಅಮೀನರು ಒಬ್ಬ ಸುಪ್ರಸಿದ್ಧ ರಾಜಕಾರಣಿ. ಉಗಾಂಡಾದ ಬಗ್ಗೆ ಭಾರತದಲ್ಲಿ ಒಳ್ಳೆಯ ಭಾವನೆಯಿದೆ.'' (ಕೆಲವೇ ವರ್ಷಗಳ ಹಿಂದೆ ಇದಿ ಅಮೀನ್ ಉಗಾಂಡಾದಲ್ಲಿಯ ಭಾರತೀಯರೆಲ್ಲರನ್ನು ಮೂರು ತಿಂಗಳ ನೋಟೀಸು ಕೊಟ್ಟು ಹೊರದಬ್ಬಿದ್ದ!)

ನನ್ನ ಉತ್ತರವನ್ನು ಕೇಳಿದ ರಾಯಭಾರಿಗಳು ಮುಗುಳು ನಕ್ಕು (ಯಾವ ಅರ್ಥದಲ್ಲಿ?!) ನನ್ನನ್ನು ಆಯ್ಕೆ ಮಾಡಿರುವುದಾಗಿಯೂ ಕೆಲವೇ ದಿನಗಳಲ್ಲಿ ಭಾರತ ಸರ್ಕಾರದ ಮುಖಾಂತರ ಉದ್ಯೋಗಪತ್ರ ಕಳಿಸುವುದಾಗಿಯೂ ಹೇಳಿದರು.

ಆ 'ಕೆಲವು ದಿನಗಳ' ನಂತರ ಉಗಾಂಡಾ ಸರ್ಕಾರದ ಆರೋಗ್ಯ ಇಲಾಖೆಯಲ್ಲಿ ವಿಶೇಷ ವೈದ್ಯಾಧಿಕಾರಿಯಾಗಿ ನೇಮಕಗೊಂಡ ನಾನು ರಾಜಧಾನಿ ಕಂಪಾಲಾದಲ್ಲಿಳಿದೆ. ಅಲ್ಲಿ ಭಾರತದ ರಾಯಭಾರಿಯಾಗಿದ್ದ ಮದನ್‌ಜೀತ್ ಸಿಂಗರು ಅತ್ಯಂತ ಸಭ್ಯ ಹಾಗೂ ಸುಸಂಸ್ಕೃತ ವ್ಯಕ್ತಿ. ಸ್ವತಃ ಕಲಾವಿದರಾಗಿದ್ದ ಅವರು ಇಟಲಿ ಹಾಗೂ ಭಾರತೀಯ ಚಿತ್ರಕಲೆಯ ಬಗೆಗೆ ಗ್ರಂಥಗಳನ್ನೂ ರಚಿಸಿದ್ದರು. ಭಾರತದಿಂದ ಹೊರಗೆ ಬರುವುದರಿಂದ ಆಗುವ ಲಾಭಗಳನ್ನು ವಿವರಿಸಿದ ಸಿಂಗರು ನನಗೆ ಏನಾದರೂ ಸಮಸ್ಯೆ ಎದುರಾದರೆ ಸಂಕೋಚಪಡದೆ ತಮ್ಮನ್ನು ಭೇಟಿಯಾಗಲು ಹೇಳಿದರು. ಕಚೇರಿಯ ಇನ್ನಿಬ್ಬರು ಹಿರಿಯ ಅಧಿಕಾರಿಗಳಾದ ಭೋಜರಾಜ್ ಹಾಗೂ ದೀಪಕ್ ಮಿಶ್ರಾರ ಪರಿಚಯವೂ ಆಗಿ ನಾನು ರಾಯಭಾರಿ ಕಚೇರಿಗೆ ವಾರದಲ್ಲಿ ಒಂದೆರಡು ಸಲ ತಪ್ಪದೇ ಭೇಟಿಕೊಡತೊಡಗಿದೆ.

ಕಂಪಾಲಾದಲ್ಲಿ ಆಗ ಭಾರತೀಯರ ಸಂಖ್ಯೆ ತುಂಬಾ ಕಡಿಮೆ ಇತ್ತು. ಇಂತಹ ಪುಟ್ಟ ಸಮುದಾಯದಲ್ಲಿ ಪರಸ್ಪರರ ಸಂಪರ್ಕ ಹೆಚ್ಚಾಗಿ ಸಂಬಂಧಗಳು ಗಾಢವಾಗುವುದು ಸಹಜ. ಗಣರಾಜ್ಯೋತ್ಸವ ಮತ್ತು ಸ್ವಾತಂತ್ರ್ಯ ದಿನಾಚರಣೆಯಂದು ಮದನ್‌ಜೀತ್ ಸಿಂಗರು ತಮ್ಮ ಮನೆಯಲ್ಲಿ ಎಲ್ಲರಿಗೂ ಭೋಜನ ಏರ್ಪಡಿಸುತ್ತಿದ್ದರು.

ಕಂಪಾಲಾದಲ್ಲಿ ನಮ್ಮ ಸಂತಸದ ದಿನಗಳು ಉರುಳುತ್ತಿದ್ದಂತೆಯೇ ಟಾಂಜಾನಿಯಾ - ಉಗಾಂಡಾಗಳ ನಡುವಿನ ಯುದ್ಧ ತನ್ನ ಕರಿನೆರಳನ್ನು ಹರಡತೊಡಗಿತು. ವೈರಿಗಳ ಬಾಂಬುದಾಳಿಯಿಂದ ಕಂಪಾಲಾ ನಗರ ನಡುಗಿತು. ಯುದ್ಧ ತನ್ನೆಲ್ಲ ಭಯಾನಕ ರೂಪುರಂಗುಗಳನ್ನು ಹೊಳೆಯಿಸತೊಡಗಿದ್ದರಿಂದ ಸಿಂಗರು ಕಂಪಾಲಾದಲ್ಲಿನ ಭಾರತೀಯರನ್ನು ತಂಡತಂಡವಾಗಿ ನೆರೆಯ ನೈರೋಬಿಗೆ (ಕೀನ್ಯಾದ ರಾಜಧಾನಿ) ಸಾಗಿಸತೊಡಗಿದರು. ಒಂದು ದಿನ ನಮಗೂ ಕನಿಷ್ಠ ಸಾಮಾನುಸರಂಜಾಮಿನೊಂದಿಗೆ ನೈರೋಬಿಗೆ ಹೊರಡಲು ಒಂದು ಗಂಟೆಯೊಳಗಾಗಿ ಸಿದ್ಧರಾಗಬೇಕೆಂಬ ಕರೆಬಂತು.

ನೈರೋಬಿಗೆ ಹೋದ ನಂತರ ಬಳಸಲು ನನ್ನ ಬಳಿ ಅಮೇರಿಕನ್ ಡಾಲರ್ ಅಥವಾ ಬ್ರಿಟಿಷ್ ಪೌಂಡುಗಳಿರಲಿಲ್ಲ. ಈ ಸಮಸ್ಯೆಯನ್ನು ನಾನು ಮದನ್‌ಜೀತ್ ಸಿಂಗರೆದುರು ತೋಡಿಕೊಂಡೆ.

''ಚಿಂತೆ ಮಾಡಬೇಡಿ. ನಿಮ್ಮ ಹತ್ತಿರವಿರುವ ಉಗಾಂಡಾ ಹಣವನ್ನು ನಮಗೆ ಕೊಡಿ. ನೈರೋಬಿಯಲ್ಲಿ ನಮ್ಮ ರಾಯಭಾರಿ ಕಚೇರಿಯವರು ನಿಮಗೆ ಕೀನ್ಯಾ ಹಣವನ್ನು ಕೊಡುತ್ತಾರೆ. ನಾನು ಅವರಿಗೊಂದು ಪತ್ರ ಬರೆದುಕೊಡುವೆ'' ಎಂದ ಸಿಂಗರು ನನ್ನ ಸಮಸ್ಯೆಯ ಗಂಟನ್ನು ಸಡಿಲಿಸಿದರು.

ನೈರೋಬಿಗೆ ಬಂದ ನಂತರ ನಮ್ಮ ರಾಯಭಾರಿ ಕಚೇರಿಗೆ ಹೋಗಿ ಅಲ್ಲಿಯ ಮೂರನೇ ಕಾರ್ಯದರ್ಶಿ ತ್ರಿವೇದಿಯವರನ್ನು ಭೇಟಿಯಾದೆ. ಸಿಂಗರ ಪತ್ರವನ್ನು ಓದಿದ ಅವರು, ''ನಿಮಗೆ ಹಣ ಕೊಡಲು ಇಲ್ಲಿ ನಾವೇನು ಬ್ಯಾಂಕ್ ತೆರೆದಿದ್ದೇವೇನು?'' ಎಂದು ತಿರಸ್ಕಾರದಿಂದ ಪತ್ರ ಹಿಂದಿರುಗಿಸಿದರು. ''ನಿಮಗೆ ಈ ರಾಯಭಾರಿ ಕಚೇರಿಯಲ್ಲಿ ಯಾವ ಹಣವೂ ಸಿಗುವುದಿಲ್ಲ'' ಎಂದು ನಿರ್ದಾಕ್ಷಿಣ್ಯವಾಗಿ



ನೈರೋಬಿಯ ಕೆನ್ಯಾಟಾ ಅಂತಾರಾಷ್ಟ್ರೀಯ ಸಭಾಕೇಂದ್ರ

ನುಡಿದು ನನ್ನನ್ನು ಪೇಚಿಗೆ ಸಿಕ್ಕಿಸಿದರು. ನನಗೆ ಹಣಕ್ಕಿಂತ ಹೆಚ್ಚಾಗಿ ನಮ್ಮದೇ ದೇಶದ ಬೇರೊಬ್ಬ ರಾಯಭಾರಿಯ ಪತ್ರಕ್ಕೆ ಮೂರು ಕಾಸಿನ ಬೆಲೆಯನ್ನೂ ಕೊಡದೆ ಅದನ್ನು ರದ್ದಿಕಾಗದದ ತುಂಡೆಂಬಂತೆ ನಡೆದುಕೊಂಡಿದ್ದನ್ನು ನೋಡಿ ಆಘಾತ, ಆಶ್ಚರ್ಯ ಮತ್ತು ಕೋಪ ಒಟ್ಟಿಗೇ ಉಂಟಾದವು. ಭ್ರಮನಿರಸನಗೊಂಡ ನಾನು ರಾಯಭಾರಿ ಕಚೇರಿಯಿಂದ ಹಣ ಪಡೆಯುವ ಪ್ರಯತ್ನವನ್ನು ತ್ಯಜಿಸಿ ಕಂಪಾಲಾದಿಂದ ಬಂದ ಇತರ ಮಿತ್ರರ ನೆರವಿನಿಂದ ನನ್ನ ಹಣದ ಸಮಸ್ಯೆಯನ್ನು ನೀಗಿಸಿಕೊಂಡೆ.

ಯುದ್ಧವು ಕೊನೆಗೊಂಡು ಕಂಪಾಲಾದಲ್ಲಿ ಹೊಸ ಸರ್ಕಾರದ ಸ್ಥಾಪನೆಯಾಯ್ತು. ನಾವು ಭಾರತೀಯರು ಕಂಪಾಲಾಗೆ ಮರಳಿ ನಮ್ಮ ನಮ್ಮ ಉದ್ಯೋಗಗಳನ್ನು ಸೇರುವ ಸಿದ್ಧತೆಗಳನ್ನು ಮಾಡತೊಡಗಿದೆವು. ಉಗಾಂಡಾದ ಸಕ್ಕರೆ ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿದ್ದ ಕೆಲವು ಅನಕ್ಷರಸ್ಥ ಶಿಖ್ ಕಾರ್ಮಿಕರು ನಮ್ಮೊಂದಿಗಿದ್ದರು. ಅವರಿಗೆ ಶಿಖ್ ಗುರುದ್ವಾರದಲ್ಲಿ ಆಶ್ರಯ ಸಿಕ್ಕಿದ್ದರೂ ಸರಿಯಾದ ಹಣದ ಸೌಕರ್ಯವಿರಲಿಲ್ಲ. ಅವರೂ ನಮ್ಮಂತೆ ಉಗಾಂಡಾಕ್ಕೆ ಮರಳಲು ಉತ್ಸುಕರಾಗಿದ್ದರು.

ನಾನು ಮತ್ತೆ ನಮ್ಮ ರಾಯಭಾರಿ ಕಚೇರಿಯಲ್ಲಿ ಈ ಮೊದಲು ಭೇಟಿಯಾಗಿದ್ದ ತ್ರಿವೇದಿಯವರನ್ನು ಕಂಡು ಈ ಕಾರ್ಮಿಕರು ಉಗಾಂಡಾಕ್ಕೆ ಹಿಂದಿರುಗಲು ಹಣದ ನೆರವು ನೀಡಬೇಕೆಂದು ಕೇಳಿಕೊಂಡೆ. ಅವರು ತಮ್ಮ ಎಂದಿನ ತಾಪೇದಾರಿ (Beuracracy) ಶೈಲಿಯಲ್ಲಿ ಹಣಕಾಸಿನ ನೆರವಿಗಾಗಿ ಸಲ್ಲಿಸಬೇಕಾದ ಅರ್ಜಿಯ ದೊಡ್ಡ ಪಟ್ಟಿಯನ್ನೇ ತಯಾರಿಸಿ ಅದನ್ನು ಕೆಲಸಗಾರರು ತುಂಬಿಕೊಡಬೇಕೆಂದು ಸೂಚಿಸಿದರು. ಈ ಪಟ್ಟಿಯನ್ನು ನೋಡಿದ ಸಿಖ್‌ರು ತಮಗೆ ಭಾರತ ಸರ್ಕಾರದ ಗೊಡವೆಯೇ ಬೇಡವೆಂದುಕೊಂಡು ನೈರೋಬಿಯಲ್ಲಿಯ ಸಿಖ್ ಧುರೀಣರನ್ನು ಕಂಡು ತಮ್ಮ ಆರ್ಥಿಕ ಅಡಚಣೆಯನ್ನು ನಿವಾರಿಸಿಕೊಂಡರು.

ನಾನು ಕಂಪಾಲಾಕ್ಕೆ ಮರಳಲು ಬಸ್ಸೊಂದನ್ನು ಗೊತ್ತು ಮಾಡಿದೆ. ಯುದ್ಧಾನಂತರ ಕೀನ್ಯಾ ಕಡೆಯಿಂದ ಉಗಾಂಡಾವನ್ನು ಪ್ರವೇಶಿಸಿದ ಮೊದಲ ಪ್ರಯಾಣಿಕರ ವಾಹನವದು.

## ಧೃತರಾಷ್ಟ್ರನಿಗೆಲ್ಲಿಯ ಬೆಳಕು?

*ಹುಟ್ಟುತ್ತಲೆ*
*ಧೃತರಾಷ್ಟ್ರನಿಗೆ*
*ಇರಲಿಲ್ಲ ದೃಷ್ಟಿ*
*ಏನೂ ಕಾಣಲಿಲ್ಲ*
*ಬದುಕೆಲ್ಲ ಕತ್ತಲೆ*
*ಗಾಂಧಾರಿ ಕೈಹಿಡಿದು*
*ಕನಸಿದ:*
*ಬಾಳು ಬೆಳಕಾಗಬಹುದು*
*ಜಗವೆಲ್ಲ ಬೆತ್ತಲೆ!*
*'ಆದರ್ಶಸತಿ' ಗಾಂಧಾರಿ ಬಂದಳು*
*ಭಾರೀ ಉದಾರಿ*
*ಯ'ಪೋಸಿ'ನಲಿ*
*ದೃಷ್ಟಿಯಿಲ್ಲವ ಕೊಟ್ಟು*
*ಕಣ್ಣಿವಟ್ಟಿ ಕಟ್ಟಿಕೊಂಡಳು ಮಡದಿ.*
*ಕಾಣುವುದಕ್ಕಿನ್ನೇನಿದೆ*
*ಧೃತರಾಷ್ಟ್ರನಿಗೆಲ್ಲಿಯ ಬೆಳಕು!*
*ಗಾಂಧಾರಿಯೂ ಕತ್ತಲೆ!*

● *ಹಾ. ಉ. ಸೊರಬ*

ನಾವು ಹೊರಟ ಸುದ್ದಿ ಅದ್ಹೇಗೋ ನಮ್ಮ ರಾಯಭಾರಿ ಕಚೇರಿಯ ಕಿವಿಗೆ ಬಿದ್ದ ಅಂತಿಮ ಕ್ಷಣದಲ್ಲಿ ತ್ರಿವೇದಿಯವರು ಸಾರ್ವಜನಿಕ ಸಂಪರ್ಕಾಧಿಕಾರಿ ಖನ್ನಾ ಎಂಬಬವರೊಂದಿಗೆ ಬಂದರು. ಉಗಾಂಡಾ ಗಡಿಯಲ್ಲಿ ನಮ್ಮ ಪ್ರವೇಶವನ್ನು ಸುಲಭಗೊಳಿಸಲು ಖನ್ನಾ ಅವರನ್ನು ನಮ್ಮೊಂದಿಗೆ ಕಳಿಸುವುದಾಗಿ ಹೇಳಿದರು. ನಾವು ಒಪ್ಪಿಕೊಂಡೆವು. ನಮ್ಮ ನೈರೋಬಿಯ ವಾಸ್ತವ್ಯದಲ್ಲಿ ತಮ್ಮಿಂದ ಕೆಲವು ತಪ್ಪುಗಳಾಗಿರುವುದಾಗಿಯೂ ಅದಕ್ಕಾಗಿ ಮನ್ನಿಸಬೇಕೆಂದೂ ಹೇಳಿ ಹೊರಟುಹೋದರು.

ಮುಂದೆ ಕಂಪಾಲಾಕ್ಕೆ ಭೇಟಿ ನೀಡಿದ ಉಪ ವಿದೇಶಾಂಗ ಮಂತ್ರಿ, ಸಮರೇಂದ್ರ ಕುಂದು ಅವರಿಗೆ ನಮ್ಮ ನೈರೋಬಿ ರಾಯಭಾರಿ ಕಚೇಯ ಅವ್ಯವಸ್ಥೆ ಕುರಿತಂತೆ ಮನವಿಯೊಂದನ್ನು ಸಲ್ಲಿಸಿದೆ. ಅದು ಅವರ ಕಿಸೆಯಲ್ಲೇ ಕರಗಿ ಹೋಯ್ತೇ ಹೊರತು ಫಲಿತಾಂಶ ಹೊರಬರಲಿಲ್ಲ!

ಹಲವು ತಿಂಗಳುಗಳ ನಂತರ ಇದೇ ನೈರೋಬಿಗೆ ನಾನು ಉದ್ಯೋಗಸ್ಥನಾಗಿ ಬಂದೆ. 1983ರಲ್ಲಿ ರಿಚರ್ಡ್ ಅಟೆನ್ ಬರೋ ಅವರ 'ಗಾಂಧಿ' ಚಿತ್ರ ತೆರೆಕಂಡು ಜಗತ್ತಿನಾದ್ಯಂತ ಪ್ರಭಾವ ಹರಡಿತ್ತು. ನೈರೋಬಿಯಲ್ಲಿ ಈ ಚಲನಚಿತ್ರದ ಮೊದಲ ಪ್ರದರ್ಶನವನ್ನು ಭಾರತೀಯ ರಾಯಭಾರಿ ಕಚೇರಿ ಮತ್ತು ಯುನೆಸ್ಕೋದ ಸಹಯೋಗದಲ್ಲಿ ಏರ್ಪಡಿಸಿದ್ದರು. ಯುನೆಸ್ಕೋದ ಸಹಾಯಾರ್ಥ ನಡೆದ ಅಂದಿನ ಪ್ರದರ್ಶನಕ್ಕೆ ಮುಂಚೆ ಒಂದು ಸಮಾರಂಭ ಏರ್ಪಟ್ಟಿತ್ತು. ಈ ಸಂದರ್ಭದಲ್ಲಿ ನಮ್ಮ ರಾಯಭಾರಿ ಕಚೇರಿಯವರು ಗಾಂಧೀಜಿಯ ಭಾವಚಿತ್ರವನ್ನು ವೇದಿಕೆಯ ಮೇಲೆ ತಂದಿರಿಸಿದರು. ಇದರಿಂದ ಸಿಡಿಮಿಡಿಗೊಂಡ ಯುನೆಸ್ಕೋದ ಬಿಳಿಯ ಅಧಿಕಾರಿಗಳು ರಾಯಭಾರಿ ಸಿಬ್ಬಂದಿಯ ಪ್ರತಿಭಟನೆಯನ್ನು ಲೆಕ್ಕಿಸದೆಯೇ ಫೋಟೋವನ್ನು ಅಲ್ಲಿಂದ ಕಿತ್ತಿ ಒಳಗೆ ಒಯ್ದರು. ಭಾರತಕ್ಕಾದ ಈ ಅವಮಾನವನ್ನು ಪ್ರತಿಭಟಿಸಿ ರಾಯಭಾರಿಯವರು ಸಮಾರಂಭವನ್ನು ಬಹಿಷ್ಕರಿಸುವ ನಿರ್ಧಾರವನ್ನು ತಳೆಯುವುದು ಅಪೇಕ್ಷಣೀಯವಾಗಿತ್ತು. ಆದರೆ 'ಗಾಂಧಿ' ಚಿತ್ರದಿಂದ ಹಣ ಮಾಡಿಕೊಂಡು ಅವರ ಭಾವಚಿತ್ರಕ್ಕೆ ಅವಮಾನ ಮಾಡಿದ ಯುನೆಸ್ಕೋದ ನೀಚತನವನ್ನು ವಿರೋಧಿಸುವ ಎದೆಗಾರಿಕೆ ಭಾರತ ಸರ್ಕಾರದ ಪ್ರತಿನಿಧಿಗೆ ಇರಲಿಲ್ಲ.

'ಗಾಂಧಿ' ಚಿತ್ರ ನೈರೋಬಿಯಲ್ಲಿ ಜಯಭೇರಿ ಬಾರಿಸುತ್ತಿರುವಾಗಲೇ ಅಲ್ಲಿನ ಇಂಗ್ಲಿಷ್ ದೈನಿಕಗಳಾದ 'ನೇಶನ್' ಮತ್ತು 'ಸ್ಟ್ಯಾಂಡರ್ಡ್'ಗಳಲ್ಲಿ Myth of the Mahatma (ಮಹಾತ್ಮನೆಂಬ ಕಟ್ಟುಕಥೆ) ಎಂಬ ಶೀರ್ಷಿಕೆಯಡಿ, ಮಹಮೂದ' ಎಂಬುವನ ಪತ್ರ ಪ್ರಕಟವಾಯಿತು. ಗಾಂಧೀಜಿಯನ್ನು ತೆಗಳುವುದೇ ಗುರಿಯಾಗಿದ್ದ

ಆ ಪತ್ರದಲ್ಲಿ ಅವರ ದೊಡ್ಡತನವೆಲ್ಲ ಕಟ್ಟುಕಥೆಯೆಂದೂ ಮೋಸವೆಂದೂ ಅವರು ಆಫ್ರಿಕನ್ನರಿಗಾಗಿ ಏನನ್ನೂ ಮಾಡಲಿಲ್ಲವೆಂದೂ ಬಿಂಬಿಸಲಾಗಿತ್ತು. ಇದರಿಂದ ರೋಷಗೊಂಡ ನಾನು ತಕ್ಕ ಉತ್ತರ ನೀಡಬೇಕೆಂದು ಯೋಚಿಸಿ ರಾಯಭಾರಿ ಕಚೇರಿಯ ವಾಚನಾಲಯಕ್ಕೆ ಹೋದೆ.

ವಿಶ್ವೇಶ್ವರನ್ ಎಂಬುವವರು ಗ್ರಂಥಪಾಲಕರಾಗಿದ್ದ ಅಲ್ಲಿ ಗಾಂಧೀಜಿಯ ಕೃತಿಗಳ ಒಂದು ಪ್ರತ್ಯೇಕ ವಿಭಾಗವೇ ಇದೆ. ನಾನು ಗ್ರಂಥಪಾಲಕರನ್ನು ಭೇಟಿಯಾಗಿ ಗಾಂಧಿಯವರ ಆಫ್ರಿಕಾವಾಸದ ಅನುಭವಗಳಿರುವ ಪುಸ್ತಕಕ್ಕಾಗಿ ವಿನಂತಿಸಿದೆ. ನಿಯಮಗಳ ಪ್ರಕಾರ ಪುಸ್ತಕವನ್ನು ವಾಚನಾಲಯದಲ್ಲೇ ಓದಬೇಕೆಂದು ವಾದಿಸಿದ ಅವರು ಪುಸ್ತಕವನ್ನು ಹೊರಗೆ ಕೊಡಲು ಒಪ್ಪಲಿಲ್ಲ. ನನಗಿರುವ ವೇಳೆಯ ಅಭಾವವನ್ನು ವಿವರಿಸಿ ಡಿಪಾಸಿಟ್ ಹಣವನ್ನಿರಿಸಿಕೊಂಡಾದರೂ ಪುಸ್ತಕವನ್ನು ಕೊಡಬೇಕೆಂದು ನಾನು ಮಾಡಿಕೊಂಡ ಮನವಿಗೆ ಫಲ ಸಿಗಲಿಲ್ಲ. ಅವರನ್ನೂ ಭಾರತ ಸರ್ಕಾರವನ್ನೂ ಏರಿದ ದನಿಯಲ್ಲಿ ಶಪಿಸುತ್ತಲೇ ಅಲ್ಲಿಂದ ನಿರ್ಗಮಿಸಿದೆ.

ಹೇಗಾದರೂ ಮಾಡಿ ಒಂದೆರಡು ದಿನಗಳಲ್ಲಿ ಪತ್ರಿಕೆಯ ಪತ್ರಕ್ಕೆ ಉತ್ತರ ಬರೆಯಲೇಬೇಕಿದ್ದ ನನಗೆ ನೈರೋಬಿ ನಗರಸಭೆಯ ಗ್ರಂಥಾಲಯ ನೆರವಿಗೆ ಬಂತು. ಅಲ್ಲಿ ದೊರಕಿದ ಗಾಂಧೀಜಿಯ 'Satyagraha in South Africa' ಕೃತಿಯನ್ನು ಬಳಸಿಕೊಂಡು ಪತ್ರಿಕೆಗಳಿಗೆ ವಿವರವಾದ ಪತ್ರ ಬರೆದೆ. ಈ ಪತ್ರ ಪತ್ರಿಕೆಗಳಲ್ಲಿ ಪ್ರಮುಖ ಸ್ಥಾನ ಪಡೆದ ನಂತರ ನನ್ನ ಬಳಿಗೆ ಅಭಿನಂದನೆಯ ಹೊಳೆಯೇ ಹರಿದು ಬಂತೆನ್ನಿ. ನಿಂದನೆಯ ಪತ್ರಕ್ಕೆ ಸೂಕ್ತ ಸಮಜಾಯಿಷಿ ನೀಡಿ ಭಾರತದ ಘನತೆಯನ್ನು ಎತ್ತಿಹಿಡಿಯುವುದು ರಾಯಭಾರಿ ಕಚೇರಿಯ ಸಾರ್ವಜನಿಕ ಸಂಪರ್ಕ ಅಧಿಕಾರಿಯ ಕರ್ತವ್ಯವಾಗಿತ್ತು. ಆದರೆ ಕೀನ್ಯಾ ಸರ್ಕಾರದ ನೌಕರಿಯಲ್ಲಿದ್ದ ನನ್ನಂತಹ ಸಾಮಾನ್ಯ ವೈದ್ಯನೊಬ್ಬ ಈ ಕೆಲಸ ಮಾಡಬೇಕಾಗಿ ಬಂದುದು ವಿಪರ್ಯಾಸವಲ್ಲದೇ ಮತ್ತಿನ್ನೇನು?

ಕೆಲವು ತಿಂಗಳುಗಳ ನಂತರ ಸಮಾರಂಭವೊಂದರಲ್ಲಿ ಲೈಬ್ರರಿಯ ಅಧಿಕಾರಿ ವಿಶ್ವೇಶ್ವರನ್ ನನ್ನನ್ನು ನೋಡಿದಾಗ ಆತ ನಾಚಿಕೆಯಿಂದಲೋ ಪಶ್ಚಾತ್ತಾಪದಿಂದಲೋ ಮುಖವನ್ನು ಕಪ್ಪಾಗಿಸಿಕೊಂಡದ್ದನ್ನು ಗಮನಿಸಿದೆ

ಹೊರದೇಶದಲಿ ನಾನು ಪ್ರಕಟಪಡಿಸಿದ ದೇಶಾಭಿಮಾನ ಇಂದಿಗೂ ಮುದ ನೀಡಿದರೆ ರಾಯಭಾರಿಗಳೊಂದಿಗಿನ ಅನುಭವಗಳು ಸಮ್ಮಿಶ್ರಭಾವ ಉಳಿಸಿವೆ.

●

## ಆದ್ಯತೆ

*ಮಹಾತ್ಮಾ ಗಾಂಧೀಜಿ ಪರದೇಶಕ್ಕೆ ಹೋದಾಗ ಸ್ಥಳೀಯರನೇಕರು ಅವರ ಭೇಟಿಗೆಂದು ಬರುತ್ತಿದ್ದರು. ಹೀಗೊಂದು ದಿನ ಅವರನ್ನು ಕಾಣಲು ಇಬ್ಬರು ರಾಜಕಾರಣಿಗಳು ಬಂದಿದ್ದರು. ಅದೇ ವೇಳೆಗೆ ಅಲ್ಲಿಗೆ ಅಂಚೆ ಪೇದೆಯೊಬ್ಬ ಬಂದು ನಿಂತ. ಪರಿಚಾರಕನಿಗೆ ಮೊದಲು ಯಾರನ್ನು ಒಳಗೆ ಬಿಡಬೇಕೆಂಬ ಸಂದಿಗ್ಧ ಉಂಟಾಗಿ ಕೊನೆಗೆ ಆತ ಗಾಂಧೀಜಿಯವರನ್ನೇ ಆ ಬಗ್ಗೆ ಕೇಳಿದ. ಅವರು ಹೀಗೆಂದರು:*

*''ಅಂಚೆಯವನನ್ನು ಮೊದಲು ಒಳಗೆ ಕಳುಹಿಸು. ಏಕೆಂದರೆ ಅವನಿಗೆ ಕಾಯಲು ಸಮಯವಿರುವುದಿಲ್ಲ.''*

● ಎಂ. ಬಿ. ಖೋದಾನಪೂರ

## ನೆನಪು ನೆರಳಿನಲ್ಲಿ

ನಾನಾಗ ತುಂಬಾ ಚಿಕ್ಕವಳು; ಬಹುಶಃ ಎರಡು ವರ್ಷದವಳು. ನಮ್ಮ ತಾಯಿ ನನ್ನ ಹಿರಿಯಣ್ಣನಿಗೆ ಎಂಟಾಣೆ ಕೊಟ್ಟು ಸ್ನೇಹಿತರೊಂದಿಗೆ ಜಾತ್ರೆಗೆ ಕಳುಹಿಸಿದ್ದರಂತೆ. ಇಡೀ ಜಾತ್ರೆಯನ್ನು ತಿರುಗಾಡಿದ ಅಣ್ಣ ಏನನ್ನೂ ತಿನ್ನದೆ ಆ ಎಂಟಾಣೆಯಲ್ಲಿ ಒಂದು ಚಿಕ್ಕ ಪ್ಲಾಸ್ಟಿಕ್ ಬಾತುಕೋಳಿಯನ್ನು ನನಗಾಗಿ ತಂದಿದ್ದರಂತೆ. ಈಗ ಆ ಬಾತುಕೋಳಿ ಇದೆ. ಆದರೆ ಅಣ್ಣ ನಮ್ಮನ್ನು ಅಗಲಿದ್ದಾರೆ.

ನಾನು ಮದುವೆಯಾಗಿ ಗಂಡನ ಮನೆಗೆ ಬರುವಾಗ ಅಣ್ಣನ ನೆನಪಿಗೆಂದು ಆ ಬಾತುಕೋಳಿಯನ್ನು ನನಗೆ ಕೊಟ್ಟರು ನಮ್ಮ ತಾಯಿ. ಆದಾಗಿ ಹದಿನೈದು ವರ್ಷಗಳು ಗತಿಸಿವೆ. ನಮ್ಮ ಮನೆಯ ಶೋ ಕೇಸಿನಲ್ಲಿ ಆ ಬಾತುಕೋಳಿಗೊಂದು ಭದ್ರ ಸ್ಥಾನ ಲಭಿಸಿದೆ. ನನ್ನ ಮಕ್ಕಳೂ ಅಗಲಿದ ಮಾವನ ನೆನಪಿನ ಕುರುಹನ್ನು ಬಹುವಾಗಿ ಪ್ರೀತಿಸುತ್ತಾರೆ. ಅರುವತ್ತರ ದಶಕದ 'ಕಸ್ತೂರಿ'ಯ 'ಇದುವೆ ಜೀವ ಇದು ಜೀವನ' ಅಂಕಣದಲ್ಲಿ ನನ್ನ ಣ್ಣನ ಬರಹವೊಂದು ಪ್ರಕಟವಾಗಿದೆ ಎಂದು ನನ್ನ ತಂದೆ-ತಾಯಿ ಹೇಳುತ್ತಾರೆ. ಅದರ ಪ್ರತಿ ನಮ್ಮಲ್ಲಿಲ್ಲ. ಆದರೆ ಅವರು ಸಂಪಾದಕರಿಗೆ ಬರೆದ ಪತ್ರ ಮತ್ತು ಬರಹದ ನಕಲು ನನ್ನಲ್ಲಿವೆ. ಬಹುಶಃ ಕಸ್ತೂರಿಯೊಂದಿಗಿನ ಈ ನಂಟೂ ನನ್ನ ನೆನಪಿನ ಗಣಿ ಕೆದಕಲು ಪ್ರಚೋದಿಸಿತೇನೋ!

● ವರಲಕ್ಷ್ಮಿ ಮುಕುಂದರಾವ್

ನನ್ನ ಬಾಲ್ಯದಲ್ಲಿ ಘಟಿಸಿದ ಎರಡು ಘಟನೆಗಳನ್ನು ನೆನೆದಾಗ ಇಂದಿಗೂ 'ಆ' ಗುರು ಮತ್ತು ಗೋಕರ್ಣದ ಪೂಜಾರಿಯ ಬಗ್ಗೆ ನನಗೆ ತಾತ್ಸಾರ ಭಾವ. ಇದಕ್ಕೆ ಕಾರಣ ನನ್ನ ಮುಖದ ಮೇಲೆ ಮೂಡುತ್ತಿದ್ದ ತೊನ್ನು! (ಬಿಳುಪು)

ನಾಲ್ಕನೇ ವರ್ಗದಲ್ಲಿದ್ದಾಗ ಮುಖದ ತುಂಬ ಅಲ್ಲಲ್ಲಿ ನಾಲ್ಕಾಣೆಯಷ್ಟು ತನ್ನತನವನ್ನು ತೋರಿದ ಈ ಚರ್ಮರೋಗ ಉಳಿದ ಹುಡುಗರಂತೆ ನಗುನಗುತ್ತ ಇರಲು ಅಡ್ಡಿಮಾಡುತ್ತಿತ್ತು. ನನಗೆ ಮೊದಲಿನ ಸಾಲಿನಲ್ಲಿ ಕೂಡ್ರಲು 'ಆ' ಗುರುಗಳು ಎಂದೂ ಅವಕಾಶ ಕೊಡುತ್ತಿರಲಿಲ್ಲ ಮತ್ತು ಅಭ್ಯಾಸದಲ್ಲಿ ಎಲ್ಲಿಯಾದರೂ ತಪ್ಪಿದರೆ ಅವರದೇ ಆದ ಧಾಟಿಯಲ್ಲಿ - ''ಲೇ!.... ಮಸೂತಿ ಗ್ವಾಡಿಗಿ ಸುಣ್ಣ ಗೊಜ್ಜಿದಂಗ ಮಕಾ ಮಾಡಕೊಂಡರ ಲೆಕ್ಕ ತಲಿಗಿ ಹತ್ತಾಂಗಿಲ್ಲಲೆ...'' ಎಂದು ಹೀಯಾಳಿಸುತ್ತಿದ್ದರು. ಆಗಉಳಿದಹುಡುಗ-ಹುಡುಗಿಯರ ಅಪಹಾಸ್ಯದ ನಗು. ಶಾಲೇನೆ ಬೇಡ ಅನ್ನಿಸ್ತಿತ್ತು.

ಇನ್ನು ಗೋಕರ್ಣದ ಪ್ರಕರಣ - ನಮ್ಮ ಮನೆಯವರು ಶಿವನ ಭಕ್ತರು. ತಾವಾರೂ ನೋಡದ ಆತ್ಮಲಿಂಗವನ್ನು ನಾನು ನೋಡಿ ಅಲ್ಲಿನ ತೀರ್ಥ ಕುಡಿದರೆ ನನ್ನ ತೊನ್ನು ಕಡಿಮೆಯಾಗುತ್ತದೆಂದು ಭಾವಿಸಿ ಸಾಲ ಮಾಡಿ ಶಾಲೆಯ ಪ್ರವಾಸಕ್ಕೆ ಕಳಿಸಿದ್ದರು. ಬರುವಾಗ ತಮಗೂ ಪ್ರಸಾದ ತರಲು ಹೇಳಿದ್ದರು. ಆದರೆ ಗೋಕರ್ಣದ ಗುಡಿಯ ಬಾಗಿಲಿಗೆ ನಿಂತಿದ್ದ ಪೂಜಾರಿಯೊಬ್ಬ ನನ್ನನ್ನು ತಡೆದು ಒಳಗೆ ಹೋಗಲು ಅನುಮತಿ ನೀಡಲಿಲ್ಲ! ಕಾರಣ ಬಿಳುಪು. ಕೊನೆಗೂ ದೇವರ ದರ್ಶನ ಆಗಲೇ ಇಲ್ಲ. (ಮನೆಯವರ ಮೂಢ ನಂಬಿಕೆಗೆ ಮತ್ತೊಂದು ಕಡೆಯಿಂದ 'ಬೂದಿ' ಬಿತ್ತು ಎಂಬುದು ಬೇರೆ ಮಾತು!)

ಈ ಎರಡು ಪ್ರಕರಣಗಳಿಂದ ನಾನು ನಾಸ್ತಿಕತೆಗೆ ಒಲಿದಿದ್ದು ಮನೆಯವರಿಗೆ

ತುಂಬಾ ಬೇಸರ ತಂದಿದೆ. ಚಾರ್ವಾಕನೀಗ ನನ್ನ ಆದರ್ಶ ಪುರುಷ.

● ರಮೇಶ ಜವಳಗಿ

**ಹೊ**ನ್ನೂರು ಎಂಬುದೊಂದು ಪುಟ್ಟ ಹಳ್ಳಿ. ಗ್ರಾಮದ ಜನಸಂಖ್ಯೆ ಮುನ್ನೂರೂ ಸಹ ಮೀರಲಿಕ್ಕಿಲ್ಲ. ಅಲ್ಲೊಂದು ಆರೋಗ್ಯಕೇಂದ್ರವೂ ಇತ್ತು. ಈಗ್ಗೆ 30 ವರ್ಷಗಳ ಹಿಂದೆ, ಮಿಡ್‌ವೈಫ್ ಕೆಲಸದಲ್ಲಿದ್ದ ನನ್ನ ತಾಯಿ ಇದೇ ಊರಿಗೆ ವರ್ಗವಾಗಿ ಬರಬೇಕಾಯ್ತು. ನನಗಾಗ 7-8 ವರ್ಷಗಳಿರಬಹುದು.

ಆ ಊರಿನ ಗೌಡರು ಧರ್ಮಾತ್ಮರು. ಗ್ರಾಮಸ್ಥರು ಯಾರೇ ಬರಲಿ, ಚೊಂಬಿನ ತುಂಬಾ ಮಜ್ಜಿಗೆ ಕೊಡುವುದು ಗೌಡತಿಯ ವಾಡಿಕೆ. ಹೊಸದಾಗಿ ಬಂದ ನಾವೂ ಸಹ ಪ್ರತಿನಿತ್ಯ ಗೌಡರ ಮನೆಯಿಂದಲೇ ಮಜ್ಜಿಗೆ ತರುತ್ತಿದ್ದೆವು. ನಮ್ಮ ಮನೆಯಿಂದ ಒಂದು ಫರ್ಲಾಂಗ್ ದೂರದಲ್ಲಿ ಗೌಡರ ಮನೆಯಿತ್ತು. ಒಂದು ದಿನ ನನ್ನಣ್ಣ ಮಜ್ಜಿಗೆ ತರಲು ಹೊರಟಾಗ ಹಠಮಾಡಿ ನಾನೂ ಹಿಂಬಾಲಿಸಿದೆ.

ವೇಗದ ನಡಿಗೆಯಲ್ಲಿ ಅಣ್ಣ ಸಾಗುತ್ತಿದ್ದಾಗ, ಅವನ ಹಿಂದೆ ನಾನೂ ಓಡತೊಡಗಿದೆ. ಮನೆಯಿಂದ ಅರ್ಧದಾರಿ ಬಂದಿರಬಹುದು. ಇದ್ದಕ್ಕಿದ್ದಂತೆಯೇ ನನ್ನ ಕಾಲಡಿಯ ನೆಲ ಧೊಪ್ಪೆಂದು ಕುಸಿದಂತಾಯ್ತು. ಎದುರಿಗಿನ ದಾರಿಯೇ ಮಾಯವಾಗಿತ್ತು. ಹಿಂದಿನ ದಿನವಷ್ಟೇ ಬಾಯ್ತೆರೆದು ಇಟ್ಟಿದ್ದ ರಾಗಿಯ ಕಣಜ (ಹಗೇವು) ದೊಳಗೆ ನಾನು ಬಿದ್ದಿದ್ದೆ. ಮುಂದೆ ಹೋಗಿದ್ದ ನನ್ನ ಅಣ್ಣನಿಗೆ ಗೊತ್ತೇ ಇಲ್ಲ. ಪುಣ್ಯವಶಾತ್ ನನ್ನ ಹಿಂದೆಯೇ ಬರುತ್ತಿದ್ದ ಒಬ್ಬ ವಯೋವೃದ್ಧ ಇದನ್ನು ಕಂಡು ಕಣಜದೊಳಗಿನಿಂದ ನನ್ನನ್ನು ಮೇಲೆ ತಂದು ರಕ್ಷಿಸಿದ. ಇಲ್ಲವಾದ್ರೆ, ನಾನು ಅಂದೇ ಭೂಸಮಾಧಿಯಾಗುತ್ತಿದ್ದೆನೋ ಏನೋ. ಹರಿಜನನಾಗಿದ್ದ ಆ ಮುದುಕ ಬ್ರಾಹ್ಮಣ ಹುಡುಗಿಯನ್ನು ಮುಟ್ಟಿದನೆಂದು ಅನಂತರ ಹಳಹಳಿಸಿದಾಗ, ವಿಶಾಲ ಮನೋಭಾವನೆಯುಳ್ಳ ನನ್ನ ತಾಯಿ ಅವರನ್ನು ಸಂತೈಸಿದರು.

ಆ ವೃದ್ಧನ ಚಿತ್ರ ಇನ್ನೂ ನನ್ನ ಕಣ್ಮುಂದೆ ಅಚ್ಚಳಿಯದೇ ನಿಂತಿದೆ. ಹಗೇವಿನಲ್ಲಿ ಹೆದರಿ ಥರ ಥರನೇ ನಡುಗುತ್ತಿದ್ದ ನಾನು ಆ ಮುದುಕನನ್ನು ಕಂಡಕೂಡಲೇ ಆತ್ಮೀಯ ಬಂಧುವೆಂಬಂತೆ ಬಾಚಿ ತಬ್ಬಿಕೊಂಡಿದ್ದೆ. ಆಗ ಜಾತಿ ಅಡ್ಡ ಬಂದಿದ್ದರೆ ಎಂಬ ಕಲ್ಪನೆ ಜೀವ ಝಲ್ಲೆನ್ನಿಸುತ್ತದೆ!

● ಯಶೋದ ಎಂ. ಗೋಪಿ



ಹೀಗೊಬ್ಬ

# ಅಪ್ರಿಯ ನ್ಯಾಯವಾದಿ....

ಅಮೇರಿಕದ ಬಹುತೇಕ ನ್ಯಾಯವಾದಿಗಳು ಲಕ್ಷಾಂತರ ಹಣ ಸಂಪಾದಿಸುತ್ತಿದ್ದರೆ, ತನ್ನೆಲ್ಲಾ ಹಣವನ್ನೂ ಪ್ರಾಣವನ್ನೂ ಒತ್ತೆಯಿಟ್ಟು, ಶಿಕ್ಷೆಗೊಳಗಾದವರ ಜೀವ ಉಳಿಸಲು ಹೆಣಗುತ್ತಾ, ಅಪ್ರಿಯ ನ್ಯಾಯವಾದಿ ಎನ್ನಿಸಿದ್ದಾನೆ, ಕ್ಲೈವ್ ಸ್ಟಾಫೋರ್ಡ್ ಸ್ಮಿತ್.

● ಟಿ.ಎಂ. ಸುಬ್ಬರಾಯ

ಆತನಿಗೆ ಪ್ರತಿನಿತ್ಯ ನೂರಾರು ಬೆದರಿಕೆಯ ಕರೆಗಳು ಬರುತ್ತವೆ. ಬೀದಿಗಿಳಿದರೆ ಸಾಕೆಂದು ಆತನನ್ನು ಇರಿದುಕೊಲ್ಲಲು ಹೊಂಚು ಹಾಕಿ ಕಾಯುವವರೆಷ್ಟೋ. ತನ್ನ ಸಾವು ಯಾವುದೇ ಗಳಿಗೆಯಲ್ಲಿಯೂ ಸಂಭವಿಸಬಹುದೆಂಬುದನ್ನು ಕ್ಲೈವ್ ಚೆನ್ನಾಗಿ ಬಲ್ಲ.

'' 'ಬೆನ್ನ ಹಿಂದೆ ಮರಣ ಹಿಂಬಾಲಿಸುತ್ತದೆ' ಎನ್ನುತ್ತಾರೆ. ಆದರೆ ನನ್ನ ಪಾಲಿಗಂತೂ ಮರಣ ನನ್ನ ಮುಂದೆಯೇ ಸಾಗುತ್ತಿದೆ. ಯಾವ ಗಳಿಗೆಯಲ್ಲಾದರೂ ಯಾವ ರೂಪದಲ್ಲಾದರೂ ಅದು ಬರಬಹುದು. ಆದರೆ ನಾನು ಸಾಯುವ ಮೊದಲು, ತಾವು ಮಾಡಿದರೆನ್ನಲಾದ ಅಪರಾಧಗಳಿಗಾಗಿ ಮರಣದಂಡನೆ ಶಿಕ್ಷೆಗೆ ಗುರಿಯಾಗಿ ಸಾವಿನ ದಿನವನ್ನು ಎದುರು ನೋಡುತ್ತಿರುವ ಹಲವರ ಜೀವ ಉಳಿಸಬೇಕು. ಇದು ನನ್ನ ಬದುಕಿನ ಮುಖ್ಯ ಉದ್ದೇಶ'' ಎನ್ನುತ್ತಾನೆ ಕ್ಲೈವ್. ಈ ಕಾರಣದಿಂದಾಗಿಯೇ ಆತ ಬಹುತೇಕ ಅಮೇರಿಕನ್ನರ ಅಪ್ರಿಯ ವ್ಯಕ್ತಿ ಎನ್ನಿಸಿದ್ದಾನೆ. ಅಮೇರಿಕ ಸಂಯುಕ್ತ ಸಂಸ್ಥಾನಗಳ 50 ರಾಜ್ಯಗಳ ಪೈಕಿ 42 ರಾಜ್ಯಗಳಲ್ಲಿ ಮರಣದಂಡನೆ ಕಾನೂನು ಜಾರಿಯಲ್ಲಿದೆ. ಸುಮಾರು 2,100 ಮಂದಿ ಮರಣದಂಡನೆ ಶಿಕ್ಷೆಗೆ ಗುರಿಯಾಗಿದ್ದು 'ನೇಣುಗಂಬದ ಸರದಿ'ಯಲ್ಲಿದ್ದಾರೆ. ಇವರಲ್ಲಿ ಹೆಚ್ಚಿನವರು - ಕೊಲೆಯ ಅಪರಾಧದ ಮೇಲೆ ಮರಣದಂಡನೆ ಶಿಕ್ಷೆಗೆ ಗುರಿಯಾದವರು. ಆದರೆ ಕ್ಲೈವ್ ''ಇವರೆಲ್ಲಾ ಕೊಲೆಪಾತಕಿಗಳಲ್ಲ. ಒಂದು ವೇಳೆ ಕೊಲೆಪಾತಕಿಗಳಾಗಿದ್ದರೂ ಮರಣದಂಡನೆಯಂಥ ಕಠಿಣ ಶಿಕ್ಷೆಯನ್ನು ಇವರಿಗೆ ವಿಧಿಸುವುದು ಸರಿಯಲ್ಲ,'' ಎಂದು ವಾದಿಸುತ್ತಾನೆ. ಎಡ್ವರ್ಡ್ ಅರ್ಲ್ ಜಾನ್‌ಸನ್ ಎಂಬಾತನಿಗೆ ಸಂಬಂಧಿಸಿದಂತೆ ನಡೆದಿರುವ ಘಟನೆ ಕ್ಲೈವ್‌ನ ಈ ವಾದಕ್ಕೆ ಪುಷ್ಟಿ ಕೊಡುವಂತಿದೆ: ಎಡ್ವರ್ಡ್ ಮಿಸಿಸ್ಸಿಪ್ಪಿ ಗ್ಯಾಸ್ ಛೇಂಬರ್‌ನ ನೌಕರ. ಹತ್ತು ವರ್ಷಗಳ ಹಿಂದೆ, ತನ್ನ 18ನೆಯ ವಯಸ್ಸಿನಲ್ಲಿ ಬಿಳಿ ಹುಡುಗಿಯೊಬ್ಬಳನ್ನು 'ಕೆಡಿಸಲು' ಯತ್ನಿಸಿದ ಮತ್ತು ಬಿಳಿಯನೊಬ್ಬನ ಕೊಲೆಗೈದ - ಎಂಬುದು ಜಾನ್‌ಸನ್‌ನಿಗೆ ಮರಣದಂಡನೆ ಶಿಕ್ಷೆ ವಿಧಿಸುವುದಕ್ಕೆ ಕಾರಣವಾದ ಅಂಶಗಳು. ಈ ಎರಡೂ ಅಪರಾಧಗಳ ಬಗ್ಗೆ ಪೊಲೀಸರೆದುರು ತಪ್ಪು ಒಪ್ಪಿಕೊಂಡು, ಅವರು 'ಸಿದ್ಧಗೊಳಿಸಿದ್ದ' ಕಾಗದ - ಪತ್ರಗಳಿಗೆ ಸಹಿ ಮಾಡಿದ್ದೇ ಸಾಕ್ಷ್ಯ ಎಂಬುದನ್ನು ಬಿಟ್ಟರೆ ಜಾನ್‌ಸನ್ ಮಾಡಿದನೆನ್ನಲಾದ ಮಾನಭಂಗ ಮತ್ತು ಕೊಲೆಗಳ ಕುರಿತು ಬೇರೆ ಯಾವುದೇ ಸಾಕ್ಷಿ

ಪುರಾವೆಗಳಿರಲಿಲ್ಲ.

ಒಂದು ದಶಕದಷ್ಟು ಸುದೀರ್ಘಕಾಲ ನಡೆದ ವಿಚಾರಣೆಯ ಕೊನೆಯಲ್ಲಿ ಜಾನ್‌ಸನ್ ಅಪರಾಧಿ ಎಂದೇ ನಿರ್ಧರಿಸಲ್ಪಟ್ಟು ಆತನಿಗೆ ಮರಣದಂಡನೆ ಶಿಕ್ಷೆಯನ್ನು ವಿಧಿಸಲಾಯಿತು. ಆತನನ್ನು ಗಲ್ಲಿಗೇರಿಸುವುದನ್ನು ಕ್ಲೈವ್ ಪ್ರತ್ಯಕ್ಷವಾಗಿ ನೋಡಿದ.

''ಎಡ್ವರ್ಡ್ ಅರ್ಲ್ ಜಾನ್‌ಸನ್ ಸಾಯುವ ಗಳಿಗೆಯಲ್ಲಿಯೂ ನಿರಪರಾಧಿ ಭಾವ ಆತನ ಮುಖದಲ್ಲಿತ್ತು. ಆತ ಬಡವ, ಕರಿಯ ಮತ್ತು ದಕ್ಷಿಣ ಭಾಗಕ್ಕೆ ಸೇರಿದವ ಎಂಬುದೇ ಆತನಿಗೆ ಮರಣದಂಡನೆ ವಿಧಿಸಲು ಕಾರಣವಾದ ಅಂಶಗಳೇ ಹೊರತು ಆತನ ಅಪರಾಧಕ್ಕಾಗಿ ಅಲ್ಲ. ಯಾಕೆಂದರೆ ಆತ ಅಪರಾಧಿಯೇ ಅಲ್ಲ.'' ಕ್ಲೈವ್‌ನ ಈ ಮಾತುಗಳು, ಜಾನ್‌ಸನ್ ಗಲ್ಲಿಗೇರಿದ ಒಂದು ವಾರದಲ್ಲಿ 'ಸತ್ಯ'ವೆನಿಸಿದವು. ಜಾನ್‌ಸನ್ ನಿರಪರಾಧಿ ಎಂದು ಸಾರುವ ಪುರಾವೆಗಳು ದೊರೆತವು. ಆತನಿಂದ ಮಾನಭಂಗಕ್ಕೀಡಾದಳೆಂದು ಹೇಳಲಾದ ಆ ಬಿಳಿ ಹುಡುಗಿಯೇ, ''ಜಾನ್‌ಸನ್ ಅಂಥ ಯಾವುದೇ ದುಸ್ಸಾಹಸಕ್ಕೂ ಎಳೆಸಿರಲಿಲ್ಲ.. ನಾನು ಕೆಲವರ ಒತ್ತಾಯದಿಂದಾಗಿ ಜಾನ್‌ಸನ್ ತನ್ನನ್ನು ರೇಪ್ ಮಾಡಲು ಯತ್ನಿಸಿದ ಎಂಬುದಾಗಿ ಹೇಳಿಕೆ ಕೊಟ್ಟಿದ್ದೆ'' ಎಂದು ಪತ್ರಿಕೆಗಳೆದುರು ಹೇಳಿದಳು. ಬಿಳಿಯ ಸೋರ್ವನನ್ನು ಜಾನ್‌ಸನ್ ಕೊಲೆ ಮಾಡಿದನೆಂದು ಹೇಳಲಾಗಿತ್ತಷ್ಟೆ. ಆದರೆ ಆ ''ವೇಳೆಯಲ್ಲಿ ತನ್ನ ಸಂಗಾತಿಯೊಂದಿಗೆ ಆ ಬಿಳಿಯನು ಒಂದು ಈಜುಕೊಳದಲ್ಲಿದ್ದ'' ಎಂದು ಕೊಲೆಗೀಡಾದವನ ಮಿತ್ರನೊಬ್ಬ ಬಹಿರಂಗಪಡಿಸಿದ.

ಇದರಿಂದಾಗಿ ಕ್ಲೈವ್‌ನ ಆತ್ಮವಿಶ್ವಾಸ ಹೆಚ್ಚಿತು. 'ನ್ಯಾಯಾಲಯ ಅಪರಾಧಿಗಳೆಂದು ಗುರುತಿಸಿ, ಗಲ್ಲು ಶಿಕ್ಷೆ ವಿಧಿಸಿರುವ ವ್ಯಕ್ತಿಗಳು ನಿಜಕ್ಕೂ ಅಪರಾಧಿಗಳಾಗಿರುವುದಿಲ್ಲ' ಎಂದು ಆತನ ಅಂತರಂಗ ಸಾರಿ ಹೇಳತೊಡಗಿತು. ಸರಿ.. 'ನೇಣು ನಿರೀಕ್ಷೆಯಲ್ಲಿ'ರುವವರ ರಕ್ಷಣೆಗೆ ಕ್ಲೈವ್ ಕಟಿಬದ್ಧನಾದ.

ಮರಣದಂಡನೆ ಶಿಕ್ಷೆಗೆ ಗುರಿಯಾಗಿ ಸಾವಿನ ದಿನವನ್ನು ಎದುರು ನೋಡುತ್ತಿರುವವರಲ್ಲಿ 35 ಜನರ ಜೀವ ಉಳಿಸುವ ಕಾರ್ಯದಲ್ಲಿ ಕ್ಲೈವ್ ಈಗ ನಿರತನಾಗಿದ್ದಾನೆ. ವಿಶೇಷವೆಂದರೆ, ಈ ಮೂವತ್ತೈದೂ ಜನ ಬಡವರು, ಅನಕ್ಷರಸ್ಥರು ಮಾತ್ರವಲ್ಲ ಕರಿಯರು ಕೂಡ.

ಅಮೇರಿಕದಲ್ಲಿ ಇತ್ತೀಚೆಗೆ ನಡೆದ ಅಧ್ಯಯನವೊಂದರ ಮೂಲಕ ಸ್ಪಷ್ಟವಾಗಿರುವ ಅಂಶ: ಬಿಳಿಯನೊಬ್ಬ ಕರಿಯನೊಬ್ಬನನ್ನು ಕೊಂದರೆ ವಿಧಿಸುವ ಶಿಕ್ಷೆಗಿಂತ ಕರಿಯನೊಬ್ಬ ಬಿಳಿಯನನ್ನು ಕೊಂದರೆ ವಿಧಿಸುವ ಶಿಕ್ಷೆ ತೀರ ಭಿನ್ನ, ತೀರ ಕ್ರೂರ.

''ಅಮೇರಿಕದ ನ್ಯಾಯ ಪದ್ಧತಿಯೇ ಒಟ್ಟಾರೆ ಒಂದು ಬಗೆಯ ತಮಾಷೆ'' ಎನ್ನುತ್ತಾನೆ ಕ್ಲೈವ್. ಹಲವು ಉದಾಹರಣೆಗಳನ್ನು ನೀಡಿ ಅಲ್ಲಿಯ ನ್ಯಾಯ ನೀಡಿಕೆ ಹೇಗೆ ದೋಷಪೂರ್ಣ ಎಂಬುದನ್ನಾತ ಪ್ರತಿಪಾದಿಸುತ್ತಿದ್ದಾನೆ. ಆಲ್‌ಫ್ರೆಡ್ ಲೆದರ್‌ಹುಡ್ ಎಂಬಾತನಿಗೆ ಗಲ್ಲು ಶಿಕ್ಷೆ ವಿಧಿಸಲಾಗಿದೆ. ಹನ್ನೊಂದು ವರ್ಷದ ಕಿಶೋರಿಯೊಬ್ಬಳ ಮೇಲೆ ಅತ್ಯಾಚಾರ ನಡೆಸಲು ಯತ್ನಿಸಿದ ಎಂಬುದು ಆತನ ಮೇಲೆ ಹೊರಿಸಲಾಗಿರುವ ಆಪಾದನೆ. ಆದರೆ ಕ್ಲೈವ್ ಇದನ್ನು ನಂಬುವುದಿಲ್ಲ. ಆಲ್‌ಫ್ರೆಡ್ ಲೆದರ್‌ಹುಡ್‌ನಿಂದ ಅತ್ಯಾಚಾರ ಯತ್ನಕ್ಕೊಳಗಾಗಿದ್ದಾಳೆನ್ನಲಾದ ಕಿಶೋರಿ ಮಾನಸಿಕ ರೋಗಿ. ಈ ಕುರಿತು ನ್ಯಾಯಾಲಯಕ್ಕೆ ದೂರು ಹೋದದ್ದು ಘಟನೆ ನಡೆದಿದೆ ಎನ್ನಲಾದ ಘಟನೆಯ ಆರು ವಾರಗಳ ನಂತರ. ಅದೂ ಆ ಕಿಶೋರಿಯಾಗಲೀ, ಅವಳ ತಂದೆ-ತಾಯಿಳಾಗಲೀ, ಸಮೀಪದ ಬಂಧುಗಳಾಗಲೀ ಸಲ್ಲಿಸಿದ ದೂರಲ್ಲ. ಅದಾರೋ ಆ ಹುಡುಗಿಯ ಸಹಪಾಠಿ ಸಲ್ಲಿಸಿದ್ದು. ಇದನ್ನು ನಂಬುವುದಾದರೂ ಹೇಗೆ.. ಎಂಬುದು ಕ್ಲೈವ್‌ನ ಪ್ರಶ್ನೆ.

''ಅಮೇರಿಕದ ನ್ಯಾಯಾಧೀಶರು ಕೇವಲ ಜನಾಭಿಪ್ರಾಯದ ಮೇಲೆ ನ್ಯಾಯ ನಿರ್ಣಯ

## ಕಲೆ

ಅವನೂ
ಕಲಾವಿದ
ಬೆಳ್ಳಿಗೆ
ಚಿನ್ನ ಲೇಪಿಸುತ್ತಾನೆ
ಇವನೂ
ಕಲಾವಿದ
ಮಾತಿಗೆ
ಮೌನ ಲೇಪಿಸುತ್ತಾನೆ

● ಹೆಚ್. ಟಿ. ರಂಗನಾಥ್‌ಗೌಡ

ನೀಡುತ್ತಾರೆ. ಸರಿಯಾದ ಸಾಕ್ಷ್ಯಾಧಾರಗಳನ್ನು ಅವರು ನೋಡುವುದೇ ಇಲ್ಲ..'' ಎನ್ನುವ ಕ್ಲೈವ್, ಅಲ್ಲಿಯ ನ್ಯಾಯದಾನದ ವಿರೋಧಾಭಾಸಗಳತ್ತ ಬೊಟ್ಟು ಮಾಡುತ್ತಾನೆ.

ಜ್ಯೂಡಿ ಹಡ್ಸನ್ ಮೂವತ್ತೈದು ವರ್ಷ ವಯಸ್ಸಿನ ಆಂಗ್ಲ ಮಹಿಳೆ. ತನ್ನ ಹದಿನಾಲ್ಕು ವರ್ಷ ವಯಸ್ಸಿನ ಮಗಳನ್ನು ಕೊಲೆ ಮಾಡಿದ್ದಾಳೆ ಎನ್ನುವ ಆಪಾದನೆಯನ್ನು ಹೊತ್ತು ಆಕೆ ಮರಣದಂಡನೆ ಶಿಕ್ಷೆಗೆ ಗುರಿಯಾಗಿದ್ದಾಳೆ. ಪೊಲೀಸರೆದುರು ತಪ್ಪನ್ನು ಒಪ್ಪಿಕೊಂಡಿದ್ದಾಳೆ ಎನ್ನುವುದೊಂದನ್ನು ಬಿಟ್ಟರೆ ಜ್ಯೂಡಿ ಹಡ್ಸನ್ ತನ್ನ ಮಗಳನ್ನು ಕೊಲೆ ಮಾಡಿದ್ದಕ್ಕೆ ಇನ್ನಾವುದೇ ಸಾಕ್ಷ್ಯಾಧಾರಗಳಿಲ್ಲ.

ಕ್ಲೈವ್ ಈ ಕೇಸನ್ನು ಎತ್ತಿಕೊಂಡ. ಜ್ಯೂಡಿ ಹಡ್ಸನ್ನಳ ಜೀವ ಉಳಿಸಲು ಸಿದ್ಧನಾದ. ಅವಳ ಕೌಟುಂಬಿಕ ಹಿನ್ನೆಲೆಯನ್ನು ಅಭ್ಯಾಸ ಮಾಡಿದ.

ಜ್ಯೂಡಿ ಹಡ್ಸನ್ನಳ ವಿವಾಹವಾಗಿ ಹದಿನೈದು ವರ್ಷಗಳಾಗಿದ್ದವು. ಮದುವೆಯಾದ ಮೇಲೆ ಮೊದಲ ನಾಲ್ಕೈದು ವರ್ಷಗಳನ್ನುಳಿದು, ಮತ್ತೆಲ್ಲಾ ವರ್ಷಗಳೂ ಅವಳ ಪಾಲಿಗೆ ಯಾತನಾಮಯವೆ. ಗಂಡ ಚಿಕ್ಕಪುಟ್ಟ ವಿಷಯಗಳ ಬಗ್ಗೆಯೂ ಹೆಂಡತಿ ಮಕ್ಕಳ ಮೇಲೆ ರೇಗುತ್ತಿದ್ದ, ಬಡಿಯುತ್ತಿದ್ದ. ಜ್ಯೂಡಿಯ ಮಗಳ ಕೊಲೆಯ ವಿಷಯವನ್ನು ಪೊಲೀಸರಿಗೆ ತಿಳಿಸಿದವನು ಯಾರೆಂದು ನೋಡಿದರೆ ಆತ ಜ್ಯೂಡಿ ಹಡ್ಸನ್ನಳ ಗಂಡನೇ. ಈ ಎಲ್ಲಾ ಹಿನ್ನೆಲೆಯ ಆಧಾರವಾಗಿರಿಸಿಕೊಂಡು ಕ್ಲೈವ್ ಕೇಳುತ್ತಾನೆ: ''ಜ್ಯೂಡಿ ಹಡ್ಸನ್ನಳ ಗಂಡನೇ ತನ್ನ ಮಗಳ ಕೊಲೆ ಮಾಡಿರಬಾರದೇಕೆ?''

ಒಂದು ವೇಳೆ ಜ್ಯೂಡಿ ಹಡ್ಸನ್ನಳೇ ತನ್ನ ಮಗಳನ್ನು ಕೊಲೆ ಮಾಡಿದ್ದಾಳೆ ಎಂದರೂ - ಅದಕ್ಕಾಗಿ ಅವಳು ಸಾಯಬೇಕೆಂದಿಲ್ಲ. ''ಸಾವಿಗೆ ಸಾವೇ ಮದ್ದಲ್ಲ'' ಎಂಬುದೂ ಕ್ಲೈವ್‌ನ ವಾದ.

ಈ ಪ್ರಕರಣ ಕುರಿತು ಕ್ಲೈವ್ ಇನ್ನೂ ಒಂದು ವಾದವನ್ನು ಮಂಡಿಸುತ್ತಾನೆ: ಅಮೇರಿಕದಲ್ಲಿ ಹಾದಿತಪ್ಪುವ ಕಿಶೋರಿಯರ ಮತ್ತು ಅವರನ್ನು ಸರಿದಾರಿಗೆ ತರಲು ಯತ್ನಿಸುವ ತಂದೆ ತಾಯಿಗಳ ನಡುವೆ ಘರ್ಷಣೆ ಇತ್ತೀಚೆಗೆ ಸಾಮಾನ್ಯ. ಇಂಥ ಘರ್ಷಣೆಗೆ ಸಿಲುಕಿದವರಲ್ಲಿ ಜ್ಯೂಡಿ ಹಡ್ಸನ್ನಳೂ ಒಬ್ಬಳು. ಅವಳಿಗೆ ಮರಣದಂಡನೆ ವಿಧಿಸುವುದರಿಂದ ಇಂಥ ತಿಕ್ಕಾಟಗಳಿಗೆ ಪರಿಹಾರವೇನೂ ಸಿಗುವುದಿಲ್ಲ.

ಟ್ರಾಯ್ ಡೋಗರ್ ಹದಿನಾರು ವರ್ಷದ ಯುವಕ. ನೇಣಿನ ಅಂಚಿನಲ್ಲಿರುವ ಅತಿ ಕಿರಿಯ. ''ಮಾನಸಿಕ ಚಿಕಿತ್ಸಾಲಯದಲ್ಲಿರಬೇಕಾಗಿದ್ದ ಟ್ರಾಯ್ ಡೋಗರ್ ಸೆರೆಮನೆಯಲ್ಲಿರುವಂತಾಗಿದೆ'' ಎನ್ನುತ್ತಾನೆ ಆತನ ಪರ ವಕಾಲತ್ತು ನಡೆಸುತ್ತಿರುವ ಕ್ಲೈವ್.

'ಡಿಲ್ಲಿಂಗರ್' ಚಿತ್ರವನ್ನು ವೀಡಿಯೋದಲ್ಲಿ ಹಲವು ಬಾರಿ ವೀಕ್ಷಿಸಿದ ಟ್ರಾಯ್ ಡೋಗರ್ ಮತ್ತು ಆತನ ಸ್ನೇಹಿತ ಜೇಮ್ಸ್ ಮೂರ್ ಆ ಚಿತ್ರದಲ್ಲಿ ತೋರಿಸಿದ ಲೂಟಿಯ ಪ್ರಕರಣವನ್ನು ಅನುಕರಿಸಲು ಯತ್ನಿಸಿದರು. ಒಂದು ಅಂಗಡಿಗೆ ಹೋಗಿ, ಕೆಲವು ವಸ್ತುಗಳನ್ನು ಕೊಂಡು ''ನಾವು ಪೊಲೀಸರು.. ನಿಮ್ಮನ್ನು ಅರೆಸ್ಟ್ ಮಾಡುತ್ತಿದ್ದೇವೆ'' ಎಂದು ಬೆದರಿಸಿದರು. ಗುಣಮಟ್ಟ ಪರಿಶೀಲನೆಗೆಂದು ಮತ್ತೆ ಕೆಲವು ವಸ್ತುಗಳನ್ನು ತೆಗೆದುಕೊಂಡರು. ವಿಚಾರ

ಣೆಯ ಸಲುವಾಗೆಂದು ಅಂಗಡಿಯಲ್ಲಿದ್ದ ಹುಡುಗಿಯರಿಬ್ಬರನ್ನು ಜೊತೆಯಲ್ಲಿ ಕರೆದುಕೊಂಡು ಹೊರಟರು.

''ಆ ಹುಡುಗಿಯರ ಮೇಲೆ ಅತ್ಯಾಚಾರ ನಡೆಸಿದರು'' ಎಂಬುದು ಟ್ರಾಯ್ ಡೋಗರ್ ಮತ್ತು ಜೇಮ್ಸ್ ಮೂರ್‌ನ ಮೇಲಿರುವ ಆಪಾದನೆ. ಜೇಮ್ಸ್ ಮೂರ್ ತಪ್ಪಿಸಿಕೊಂಡ. ತಲೆ ಮರೆಸಿಕೊಂಡಿರುವ ಆತನನ್ನು ಪೊಲೀಸರು ಹುಡುಕುತ್ತಿದ್ದಾರೆ. ಸಿಕ್ಕಿಬಿದ್ದ ಟ್ರಾಯ್ ಡೋಗರ್‌ನಿಗೆ ಮರಣದಂಡನೆ ಶಿಕ್ಷೆಯನ್ನು ವಿಧಿಸಲಾಗಿದೆ. ಸ್ನೇಹಿತ ಸಿಕ್ಕಿದ ಮರು ದಿನವೇ ಟ್ರಾಯ್ ಡೋಗರ್ ಗಲ್ಲಿಗೇರಲಿದ್ದಾನೆ.

ಟ್ರಾಯ್ ಡೋಗರ್ ಅಪರಾಧಿಯಲ್ಲ ಎಂಬುದು ಕ್ಲೈವ್‌ನ ವಾದ. ಆತ ಸ್ಕಿಜೋಫ್ರೀನಿಯಾ ಕಾಯಿಲೆಯಿಂದ ನರಳುತ್ತಿದ್ದಾನೆ. ವೈದ್ಯಕೀಯ ಪರೀಕ್ಷೆಯಿಂದ ಇದು ಸಾಬೀತಾಗಿದೆ. ತನ್ನ ಹನ್ನೆರಡನೆಯ ವಯಸ್ಸಿನಿಂದಲೂ ಟ್ರಾಯ್ ಡೋಗಗ್ ಮದ್ಯಪಾನಾಸಕ್ತ. ಅದಕ್ಕೆ ಕಾರಣ ಅವನ ತಂದೆ-ತಾಯಿಗಳೇ. ''ಮದ್ಯಪಾನ ಮಾಡಿ, ತಾನೇನು ಎಸಗುತ್ತಿದ್ದೇನೆ ಎಂಬುದರ ಪರಿವೆಯಿಲ್ಲದ ಮಾನಸಿಕ ರೋಗಿಯೊಬ್ಬನನ್ನು ಗಲ್ಲಿಗೇರಿಸುವುದು ಎಷ್ಟರ ಮಟ್ಟಿಗೆ ಸರಿ?'' ಎಂಬುದು ಕ್ಲೈವ್‌ನ ಪ್ರಶ್ನೆ.

ವೃದ್ಧೆಯೊಬ್ಬಳನ್ನು ಕೊಲೆಗೈದ ಅಪರಾಧದ ಮೇಲೆ ಮರಣದಂಡನೆಗೆ ಗುರಿಯಾಗಿರುವ ಜೆರೋಮ್ ಹಾಲೋವ್‌ನ ಪರ ವಕಾಲತ್ತು ಕೈಗೆತ್ತಿಕೊಂಡಿದ್ದಾನೆ ಕ್ಲೈವ್. ವೃದ್ಧೆಯ ಬಳಿ ಇದ್ದ ಹಣ ಪಡೆಯಲು ಜೆರೋಮ್ ಹಾಲೋವ್ ಯತ್ನಿಸಿದ. ವೃದ್ಧೆ ಹಣ ಕೊಡಲಿಲ್ಲ. ಕುಪಿತಗೊಂಡ ಜೆರೋಮ್ ಹಾಲೋವ್, ತನ್ನ ಕೈಯಲ್ಲಿದ್ದ ದೊಣ್ಣೆಯಿಂದ ವೃದ್ಧೆಯನ್ನು ಬಡಿದು ಸಾಯಿಸಿದ.

''ನಿಜವಾಗಿ ನಡೆದದ್ದೇನು ಎಂಬುದಕ್ಕೆ ಯಾವುದೇ ಸಮರ್ಥ ಸಾಕ್ಷ್ಯವಿಲ್ಲ. ಜೆರೋಮ್ ಹಾಲೋವ್‌ನನ್ನು ಪೊಲೀಸರು ಬಂಧಿಸಿದಾಗ




ಆತನ ಬಳಿ ನಾಲ್ಕುನೂರು ಡಾಲರ್ ಇದ್ದದ್ದು ನಿಜ. ಅಂದ ಮಾತ್ರಕ್ಕೆ ಆತನೇ ಆ ವೃದ್ಧೆಯನ್ನು ಕೊಲೆ ಮಾಡಿದ್ದಾನೆನ್ನುವ ನಿರ್ಣಯಕ್ಕೆ ಬರುವುದು ಎಷ್ಟರ ಮಟ್ಟಿಗೆ ಸಮಂಜಸ?'' ಎಂಬುದು ಕ್ಲೈವ್‌ನ ವಾದ.

ಮರಣದಂಡನೆ ಶಿಕ್ಷೆಗೆ ಗುರಿಯಾಗಿ ಸಾವಿನ ಗಳಿಗೆ ಎದುರು ನೋಡುತ್ತಿರುವವರ ಪರವಾಗಿ ಕ್ಲೈವ್ ನಿಂತಿದ್ದಾನೆ. ಮರಣದಂಡನೆಗೆ ಗುರಿಯಾಗಿರುವವರ ಪಾಲಿನ ಆಶಾಕಿರಣ ಆತ. ಮಾತ್ರವಲ್ಲ, ಕ್ಲೈವ್‌ನ ಈ ಕಾರ್ಯ, ಮರಣದಂಡನೆಗೆ ಗುರಿಯಾಗಿರುವವರ ಸಂಬಂಧಿಕರು 'ಮರಣದಂಡನೆ ಕಾನೂನು ವಿರುದ್ಧ ಚಳುವಳಿ' ಆರಂಭಿಸಲು ಪ್ರೇರಣೆ ನೀಡಿದೆ.

''ಕೊಲೆಗಾರನೆಂಬ ಆಪಾದನೆಯ ಮೇಲೆ ಒಬ್ಬನ ಜೀವ ತೆಗೆಯುವುದು ಸರಿಯಲ್ಲ. ಸಾವಿಗೆ ಸಾವು ಔಷಥವಾಗುವುದಿಲ್ಲ. ಕೊಲೆಗಾರನಿಗೆ ಕಠಿಣ ಶಿಕ್ಷೆ ನೀಡಬೇಕು ಎಂಬುದೇನೋ ಸರಿ. ಆದರೆ, ಅದು ಮರಣದಂಡನೆಯೇ ಆಗಬೇಕೆಂದಿಲ್ಲವಲ್ಲಾ! ಜೀವಾವಧಿ ಶಿಕ್ಷೆ ನೀಡಬಹುದಷ್ಟೆ'' ಎನ್ನುತ್ತಾನೆ ಕ್ಲೈವ್. ●



# ರಾಜ್ ಕಪೂರ್ : ಯಾರೂ ಅರಿಯದ ಸಂಗೀತ ನಿರ್ದೇಶಕ!

● ಭಾಸ್ಕರ್ ಚಂದಾವರ್ಕರ್

ಭಾಸ್ಕರ್ ಚಂದಾವರ್ಕರ್ - ತಮ್ಮ ಸೃಜನಾತ್ಮಕ ಪ್ರತಿಭೆಯನ್ನು ಸಂಗೀತದ ಮೂಲಕ ಅಭಿವ್ಯಕ್ತಗೊಳಿಸಿದವರು. ಗಿರೀಶ್ ಕಾರ್ನಾಡರ 'ವಂಶವೃಕ್ಷ', ಕನಕ-ಪುರಂದರ', ಒಂದಾನೊಂದು ಕಾಲದಲ್ಲಿ' ಮತ್ತು ಇತ್ತೀಚಿನ 'ಚೆಲ್ವಿ' ಚಿತ್ರಕ್ಕೂ ಚಂದಾವರ್ಕರರದೇ ಸಂಗೀತ. ಮರಾಠಿ - ಹಿಂದಿ ಚಿತ್ರರಂಗದಲ್ಲಿ ವಿಶಿಷ್ಟತೆಗೆ ಹೆಸರಾದವರು ಭಾಸ್ಕರ್ ಚಂದಾವರ್ಕರ್.

ಒಂದು ಕಾಲವಿತ್ತು... ಇರಾನಿ ಚಾಯ್ ಶಾಪ್‌ಗಳ ಕಾಲ. 'ಲೈಟ್ ಆಫ್ ಏಷ್ಯಾ', 'ವಝೀರ್-ಏ-ಹಿಂದ್', 'ಗುಲಿಸ್ತಾನ್' ಮುಂತಾದ ಭವ್ಯ ಹೆಸರುಗಳ ಈ ಶಾಪ್‌ಗಳಲ್ಲಿ ಮಂದವಾದ ರುಚಿಕಟ್ಟಾದ ಚಾಯ್ ಅಲ್ಲದೆ ಅಂಚೆಚೀಟಿಯಿಂದ ಮೊದಲ್ಗೊಂಡು ಅಂದಚಂದಕ್ಕೆ ಬಳಸುವ ಪ್ರಸಾಧನ ಸಾಮಗ್ರಿಗಳವರೆಗೆ ಎಲ್ಲವೂ ಮಾರಲ್ಪಡುತ್ತಿತ್ತು. ಇಡ್ಲಿ-ದೋಸೆ, ಸಾಂಬಾರ್-ಚಟ್ನಿಗಳು ಇನ್ನೂ ಮುಂಬಯಿ

> ನಮ್ಮ ಹಿಂದಿ ಚಿತ್ರ ಸಂಗೀತ ಕ್ಷೇತ್ರದಲ್ಲಿ ಜನಪ್ರಿಯತೆಯ ಅಲೆಯನ್ನು ಎಬ್ಬಿಸಿದ ರಾಜ್‌ಕಪೂರ್ ನಿಜಕ್ಕೂ ಯಾರೂ ಅರಿಯದ ಒಬ್ಬ ಸಂಗೀತ ನಿರ್ದೇಶಕ! ಈ ಕನಸುಗಳ 'ವ್ಯಾಪಾರಿ' ಗೀತರಚನೆ, ಸ್ವರಸಂಯೋಜನೆ ಮತ್ತು ಅದರ ಚಿತ್ರೀಕರಣಗಳಲ್ಲಿ ತನ್ನತನವನ್ನು ಬಿಂಬಿಸಿ ಸಿನೆಮಾ ಸಂಗೀತದ ಮೇಲೆ ಅಚ್ಚಳಿಯದ ಪ್ರಭಾವವನ್ನುಂಟು ಮಾಡಿದ.

ಯನ್ನು ಸಂಪೂರ್ಣ ಸ್ವಾಧೀನಪಡಿಸಿಕೊಳ್ಳುವ ಮೊದಲು ಇಲ್ಲೆಲ್ಲ ಈ 'ಗುಲಿಸ್ತಾನ್'ಗಳದ್ದೇ ಸಾಮ್ರಾಜ್ಯ. ಹಾಂ, ಆಗ ಟ್ರಾನ್ಸಿಸ್ಟರ್ ಇನ್ನೂ ಕಲ್ಪನೆಯ ಮೂಸೆಯಲ್ಲೂ ಕಾಣಿಸಿಕೊಂಡಿರ ಲಿಲ್ಲ. ದೊಡ್ಡ ವಾಲ್ವಿನ ಮೂರು ಬ್ಯಾಂಡ್‌ಗಳ ರೇಡಿಯೋಸೆಟ್ಟು ಆಗೆಲ್ಲ ಸಿರಿವಂತರ ಮನೆಯ ಶೋಕಿ ವಸ್ತು. ಈ ಇರಾನಿ ಚಾಯ್ ಶಾಪ್‌ಗಳಲ್ಲಿ ಈ ರೇಡಿಯೋ ಒಂದು ದೊಡ್ಡ ಆಕರ್ಷಣೆ. ಒಂದು ಕಪ್ ದಟ್ಟವಾದ ಚಹ-ಎರಡು ಕೇಕ್‌ಗಳ ನ್ನಿಟ್ಟುಕೊಂಡು ಅದ್ದದ್ದಿ ತಿನ್ನುತ್ತ, ಒಂದೊಂದೇ ಸಿಪ್ ಹೀರುತ್ತ ಬಾಯಿ ಚಪ್ಪರಿಸುತ್ತ ರೇಡಿಯೋ ಸಿಲೋನ್ ಇಲ್ಲವೆ ರೇಡಿಯೋ ಗೋವಾ ಬಿತ್ತರಿ ಸುತ್ತಿದ್ದ ಹಾಡುಗಳನ್ನಾಲಿಸುತ್ತ ಕೂಡಬಹುದಾ ಗಿತ್ತು. ಅಂದರೆ, ಎರಡಾಣೆಗೆ ಒಂದು ಕಪ್ ಚಹ-ಪ್ಲೇಟ್ ಕೇಕು ಮತ್ತು ಏಳು ಹಾಡುಗಳನ್ನು ಕೇಳುವ ಅವಕಾಶವನ್ನು ನೀವು ಪಡೆದುಕೊಳ್ಳಬ ಹುದಿತ್ತು.

ಹೊಸಗೀತೆಯೊಂದು ಮೊದಲ ಬಾರಿಗೆ ಪ್ರಸಾರವಾಗುತ್ತಿರುವುದು ಗೊತ್ತಾದ ಕೂಡಲೇ ಇರಾನಿ ಚಾಯ್ ಶಾಪ್‌ನ ಗಲ್ಲಾಪೆಟ್ಟಿಗೆಯ ಬಳಿ ಎತ್ತರದ ಕುರ್ಚಿಯ ಮೇಲೆ ಕುಳಿತ ಮಾಲಿಕ, ಟಣ್ಣನೆ ಜಿಗಿದು ರೇಡಿಯೋದ ಬಳಿಗೆ ಓಡಿ ಅದರ ಧ್ವನಿ ಹಿಗ್ಗಿಸುತ್ತಿದ್ದ. ಆತ ಹೀಗೆ ಕುಣಿಯ ತೊಡಗಿದರೆ ಖಂಡಿತಕ್ಕೂ ಅದೊಂದು ಹೊಸ ಚಿತ್ರಗೀತೆಯೆ ಎಂಬುದು ಕೊನೆಯ ಕುರ್ಚಿ ಯಲ್ಲಿ ಕುಳಿತವನಿಗೂ ಗೊತ್ತಾಗಿಬಿಡುತ್ತಿತ್ತು. ಇದ್ದಕಿದ್ದ ಹಾಗೆಯೇ ಆ ಚಾಯ್ ಶಾಪ್‌ನಲ್ಲಿ ಬಾಯಿಗಳೆಲ್ಲ ಬಂದಾಗಿ, ಕಿವಿಗಳು ಇನ್ನಷ್ಟು ನಿಗುರಿಕೊಳ್ಳುತ್ತಿದ್ದವು. ಹೊಸರಾಗ-ಹೊಸಧ್ವನಿ ಹೊಸ ಗೀತದ ಲಯಕ್ಕೆ ಆ ತಲೆಗ ಳೆಲ್ಲ ತೂಗಬೇಕು, ಮನಸ್ಸುಗಳು ಮೆಚ್ಚುಗೆ ಸೂಚಿಸಬೇಕು...

ನಾನು ಚಿಕ್ಕವನಾಗಿದ್ದಾಗ ಹೀಗೊಮ್ಮೆ ಕೂತ ವರು ಮಾತುನಿಲ್ಲಿಸಿ ತಲೆದೂಗಿ 'ವಾಹವ್ವಾ' ಎಂದದ್ದನ್ನು ಕೇಳಿದ ಸಂದರ್ಭವಿನ್ನೂ ನೆನಪಿದೆ. ಅದು 'ಆಗ್' ಚಿತ್ರದ ಹಾಡು. ಮುಕೇಶ್ ಹಾಡಿದ 'ಜಿಂದಾ ಹೂಂ ಇಸ್ ತರ್ಹಾ ಕೆ..' ರಾಜ್‌ಕಪೂರ್ ನಿರ್ದೇಶಿಸಿ ನಟಿಸಿದ್ದ ಚಿತ್ರವದು.

ನಲವತ್ತು ವರ್ಷಗಳ ನಂತರ ನಾನು, ರಾಜ್ ಕಪೂರ್ ನಿರ್ಮಿಸಿದ ಚಿತ್ರಗಳ ಹಾಡುಗಳು ಅಷ್ಟು ಜನಪ್ರಿಯವಾದುದರ ಹಿಂದಿನ ಗುಟ್ಟೇನು, ಏನಂಥ ಆಕರ್ಷಣೆ ಅವುಗಳಲ್ಲಿ ಎಂಬ ಜಿಜ್ಞಾಸೆಗೆ ತೊಡಗಿದೆ.

ಕಳೆದ ನಾಲ್ಕು ದಶಕಗಳ ನಮ್ಮ ಹಿಂದಿ ಚಿತ್ರ ಸಂಗೀತಕ್ಷೇತ್ರದಲ್ಲಿ ಜನಪ್ರಿಯತೆಯ ಅಲೆ ಯನ್ನು ಎಬ್ಬಿಸಿದ ರಾಜ್‌ಕಪೂರ್ ನಿಜಕ್ಕೂ 'ಯಾರೂ ಅರಿಯದ ಒಬ್ಬ ಸಂಗೀತ ನಿರ್ದೇಶಕ!' ಹಾಗೆಂದು ಎಲ್ಲೂ ಎಂದೂ ಯಾರೆದುರು ಹೇಳಿಕೊಳ್ಳದಿದ್ದರೂ ಈ 'ಕನಸುಗಳ ವ್ಯಾಪಾರಿ' ಗೀತರಚನೆ ಸ್ವರಸಂಯೋಜನೆ ಮತ್ತು ಅದರ ಚಿತ್ರೀಕರಣಗಳಲ್ಲಿ ತನ್ನತನವನ್ನು ಬಿಂಬಿಸಿ ಸಿನೆಮಾ ಸಂಗೀತದ ಮೇಲೆ ಅಚ್ಚಳಿಯದ ಪ್ರಭಾ

ವವನ್ನುಂಟು ಮಾಡಿದ. ಆತ ಗಾಯಕನಲ್ಲ - ಗೀತರಚನಾಕಾರನಲ್ಲ - ಸ್ವರಸಂಯೋಜಕನೂ ಅಲ್ಲ: ಆದರೆ ಈ ಮೂರು ಹೌದು! ಒಂದು ಗೀತೆ ಹೇಗಿರಬೇಕು? ಅದರ ಪಲ್ಲವಿ ಏನು? ಚರಣಗಳಲ್ಲಿರಬೇಕಾದ್ದೇನು? ಸ್ವರಸಂಯೋಜನೆಯಲ್ಲಿ ಎಂಥ ಹೊಸತನ ಬೇಕು? ಗಾಯಕ-ಗಾಯಕಿ ಎಲ್ಲಿ, ಯಾವುದನ್ನು ಹೇಗೆ ಹಾಡಬೇಕು? ಗೀತೆಯ ಚಿತ್ರೀಕರಣದಲ್ಲಿ ಸಾಧಿಸಬೇಕಾದ್ದೇನೇನನ್ನು? ಈ ಎಲ್ಲವನ್ನೂ ಯೋಚಿಸಿ, ಸಂಬಂಧಪಟ್ಟವರೊಂದಿಗೆ ಚರ್ಚಿಸಿ ಸಾಧ್ಯವಾಗಿಸುವುದು ರಾಜ್ ಜಾಯಮಾನ.

'ಆಗ್' ನಿಂದಲೇ ಪ್ರಾರಂಭಿಸೋಣ. ರಾಮ್ ಗಾಂಗೂಲಿ ಈ ಚಿತ್ರದ ಸಂಗೀತ ನಿರ್ದೇಶಕ. ತುಂಬ ಸಹಜವಾದ ಸ್ವರಸಂಯೋಜನೆ ಆ ಚಿತ್ರದ್ದು. ಅಪ್ಪ ಪೃಥ್ವೀರಾಜ್‌ರ ಕಂಪನಿ (ಪೃಥ್ವಿ ಥಿಯೇಟರ್ಸ್)ಯಲ್ಲಿ ಹಿರಿಯ ಸಂಗೀತಸಂಯೋಜಕ - ಗಾಯಕನಾಗಿದ್ದ ರಾಮ್ ಗಾಂಗೂಲಿಯ ಬಗ್ಗೆ ರಾಜ್‌ಗೆ ಅಪಾರ ಗೌರವ. ವಾರಾಣಸಿಯ ನಿವಾಸಿಯಾಗಿದ್ದ ರಾಮ್ ಗಾಂಗೂಲಿಯ ತಂದೆ ಸುಪ್ರಸಿದ್ಧ ಬಂಗಾಲಿ ಧ್ರುಪದ್ ಗಾಯಕ. ಸ್ವತಃ ರಾಮ್ ಒಬ್ಬ ಶ್ರೇಷ್ಠ ಸಿತಾರವಾದಕ. 'ಜಿಂದಾ ಹೂಂ ಇಸ್ ತರ್ಹಾ..' ಜನಪ್ರಿಯವಾಯಿತಾದರೂ ರಾಮ್ ಗಾಂಗೂಲಿಗೆ ಮುಂದೆ ಬೇರೆ ಅವಕಾಶಗಳು ಸಿಕ್ಕಲಿಲ್ಲ. ಚಿತ್ರದ ಉಳಿದ ಹಾಡುಗಳೂ ಜನಮಾನಸದಲ್ಲಿ ನೆಲೆಸಲಿಲ್ಲ. ಆದರೆ ನೆನಪಲ್ಲಿ ಸ್ಥಿರವಾಗಿ ಉಳಿದವು ಎರಡು ಹೆಸರುಗಳು: ರಾಜ್‌ಕಪೂರ್ ಮತ್ತು ಮುಕೇಶ್. ಈ ಹಾಡು ('ಜಿಂದಾ ಹೂಂ..') ತುಂಬ ನಾಟಕೀಯಿಂದ ತುಂಬಿತ್ತಲ್ಲದೆ ತಾಳವಾದ್ಯದ ಬಳಕೆ ಅತಿಯಾಗಿತ್ತು. ರಾಜ್ ಮುಂದಡಿಯಿಟ್ಟರು - ಸಂಗೀತದ ದೃಷ್ಟಿಯಿಂದ ಈ ಸಲ ಯಶದ ಸುರಿಮಳೆಯೇ ಆಯಿತು.

'ಬರಸಾತ್' - ಹೊಸಬಗೆಯ ಸಂಗೀತ ವೃಷ್ಟಿ ಸುರಿಸಿತು. ಶಂಕರ್ ಜೈಕಿಶನ್ ಈ ಚಿತ್ರದ ಸಂಗೀತನಿರ್ದೇಶಕರು. ಎಷ್ಟೋ ಜನಕ್ಕೆ ಈ ಹೊಸ ಹೆಸರು ಒಬ್ಬ ವ್ಯಕ್ತಿಯದೇ ಇರಬೇಕೆನಿಸಿತು. ''ಬಹುಶಃ ಶಂಕರ್ ಎಂಬುದು ಹೆಸರು, ಜೈಕಿಶನ್ ಅಡ್ಡಹೆಸರಿರಬೇಕು; ಮಾರವಾಡಿಯಿರಬೇಕು ಈ ವ್ಯಕ್ತಿ'' ಎಂದುಕೊಂಡವರೇ ಬಹಳ. ಶಂಕರ್ ಮತ್ತು ಜೈಕಿಶನ್ ಇಬ್ಬರೂ ಪೃಥ್ವಿ ಥಿಯೇಟರ್ಸಿನ ಕೊಡುಗೆಗಳೇ. ನಾಟಕದ ಹಾಡುಗಳಿಗೆ ಅವರಿಬ್ಬರೂ ಹಾರ್ಮೋನಿಯಂ, ಢೋಲಕ್ ಮತ್ತು ಇತರ ವಾದ್ಯಗಳನ್ನು ನುಡಿಸುತ್ತಿದ್ದರು. ಇಬ್ಬರಿಗೂ ಸಂಗೀತದಲ್ಲಿ ಶಾಸ್ತ್ರೀಯವಾದ ತರಬೇತಿಯಿರಲಿಲ್ಲ: ಆದರೆ ಅದ್ಭುತ ಜಾಣ್ಮೆಯಿತ್ತು. ಅದರಲ್ಲೂ ವಿಶೇಷವಾಗಿ ಜಾನಪದ ಸಂಗೀತದಲ್ಲಿ. ಇಬ್ಬರೂ ಪ್ರತ್ಯುತ್ಪನ್ನಮತಿಗಳು. ಅಲ್ಪಾವಧಿಯಲ್ಲಿಯೇ ಚಿತ್ರಸಂಗೀತದ ಒಳಗುಟ್ಟುಗಳನ್ನು ಅರಿತುಕೊಂಡ ಈ ಜೋಡಿ ಮುಂದಿನ ಮೂರು ದಶಕಗಳ ಕಾಲ ಚಿತ್ರಜಗತ್ತನ್ನು ಆಳಿತು. ಅವರಿಗೆ ಸದಾಕಾಲ ರಾಜ್ ಬಲ-ಬೆಂಬಲ.

ಈ ದೃಶ್ಯಧೀಮಂತ ಮತ್ತು ಆ ಸಂಗೀತ ಶ್ರೀಮಂತರ ಸಖ್ಯ ಮುಂದುವರಿಯುತ್ತಲೇ ಹೋಗಲು ಕಾರಣ ವಿಚಾರಸಾಮ್ಯ ಮತ್ತು ಪರಸ್ಪರ ಪ್ರಭಾವಗಳು. ರಾಜ್‌ಗೆ ಸಂಗೀತ ನಿರ್ದೇಶಕನಾಗುವ ಕನಸು ಬಹಳ ಹಳೆಯದು. ಅದು ನನಸಾಗಲೇ ಇಲ್ಲ. ರಾಜ್‌ಗೂ ಸಂಗೀತದಲ್ಲಿ ಶಾಸ್ತ್ರೀಯ ತರಬೇತಿಯಿರಲಿಲ್ಲ. ಆದರೆ ಅನೇಕ ವಾದ್ಯಗಳನ್ನಾತ ನುಡಿಸಬಲ್ಲವನಾಗಿದ್ದ. ವಿಶೇಷವಾಗಿ ತಬಲಾ. (ಒಂದು ವೇಳೆ ರಾಜ್ ಚಿತ್ರಜಗತ್ತಿಗೆ ಬಂದಿರದಿದ್ದರೆ ಒಬ್ಬ ಶ್ರೇಷ್ಠ ತಬಲಾಪಟುವಾಗಿರುತ್ತಿದ್ದನೇನೊ.) ಒಬ್ಬಂಟಿಯಾಗಿದ್ದಾಗಲೆಲ್ಲ ತಬಲಾ ಆತನ ಸಂಗಾತಿ. ಶಂಕರ್-ಜೈಕಿಶನ್‌ರೊಂದಿಗಿನ ಆತನ ಸಾಹಚರ್ಯದ ಹೆಗ್ಗಳಿಕೆಯೆಂದರೆ ಪರಸ್ಪರರಲ್ಲಿ ಗೌರವ ಮತ್ತು ಪ್ರಯೋಗಶೀಲತೆ. ಜಾನಪದ ಸಂಗೀತದ ಮಟ್ಟುಗಳನ್ನು ಆಧುನಿಕ. ಲಯಕ್ಕೆ ಒಗ್ಗಿಸಿಕೊಂಡು ಹೊಸ ಮಾರ್ಗವೊಂದರ ಹುಟ್ಟಿಗೆ



ಕಾರಣವಾಗಿ ನಿಂತರಲ್ಲದೆ ಭಾರತಾದ್ಯಂತ ಜನರ ನಾಲಿಗೆಯ ಮೇಲೆ ಆ ಹಾಡುಗಳು ನಲಿದವು. 'ಬರಸಾತ್'ನ 'ತಕ್ ದಿನ್ನಾ ಧಿನ್' ಆಗಲಿ, 'ತೀಸ್ರಿ ಕಸಂ'ನ 'ಸಜನ್‌ರೆ ಝೂಟ್ ಮತ್ ಬೋಲೋ' ಇರಲಿ ಜಾನಪದ ಮೂಲದಿಂದ ಮೇಲೆದ್ದು ಆಧುನಿಕ ವೇಷ ತೊಟ್ಟು ನಿಂತವು. ರಾಜ್ ಕಲ್ಪನೆಯನ್ನು ಹೀಗೆ ಸಾಕಾರಗೊಳಿಸಿದವರು ಶಂಕರ್-ಜೈಕಿಶನ್. ನಂತರದ ಹತ್ತಾರು ಚಿತ್ರಗಳಿಗೆ ಕಾಲಕ್ಕೆ ತಕ್ಕ 'ಧ್ವನಿ'ಯನ್ನು ಇತ್ತಿತು ಈ ತ್ರಿವಳಿ. 'ತೀಸ್ರಿ ಕಸಂ' ರಾಜ್‌ಕಪೂರ್ ನಿರ್ಮಾಣದ ಚಿತ್ರವಲ್ಲದಿದ್ದರೂ ಆತನ 'ಸಂಗೀತ ಸ್ಪರ್ಶ' ಅದರಲ್ಲಿ ಎದ್ದು ಕಾಣುತ್ತಿತ್ತು.

ಬೇರೆ ಕೆಲ ಸಂಗೀತ ನಿರ್ದೇಶಕರೂ ಆರ್‌ಕೆ ಚಿತ್ರಗಳಿಗೆ ಸ್ವರಸಂಯೋಜಿಸಿದರಾದರೂ ರಸಿಕರ ಎದೆಯಲ್ಲಿ ಮಾತ್ರ ರಾಜ್-ಶಂಕರ್-ಜೈಕಿಶನ್‌ರ ಲಯಗಳೇ ಅನುರಣಿಸಿದವು. ಉದಾಹರಣೆಗೆ 'ಜಾಗ್ತೆ ರಹೋ.' ಹಾಡುಗಳು ಯಾವ ಸನ್ನಿವೇಶದಲ್ಲಿ ಬೇಕು, ಎಂಥ ಹಾಡು ಅದಾಗಿರಬೇಕು, ಅದರ ಧಾಟಿ-ಶಬ್ದಪ್ರಯೋಗ, ಅದರಲ್ಲಿ ಬಳಸಬೇಕಾದ ವಾದ್ಯಗಳು ಯಾವವು ಎಂಬುದನ್ನೆಲ್ಲ ಸ್ವತಃ ರಾಜ್ ನಿರ್ಧರಿಸಿದ. ಈ ಚಿತ್ರದಲ್ಲಿ ಬಳಸಲಾದ ಪಂಜಾಬಿ ಜಾನಪದ ಗೀತೆಯನ್ನೇ ನೋಡಿ. 'ಕಿ ಮೈನೆ ಝೂಟ್ ಬೋಲಿಯಾಂ' ಎಂದು ಸಿಖ್ ಗುಂಪೊಂದು ಹಾಡುತ್ತ ಕುಣಿದದ್ದು ಪ್ರೇಕ್ಷಕರನ್ನು ಹುಚ್ಚೆಗೆಬ್ಬಿಸಿತು, ಕುಣಿಯುವಂತೆ ಮಾಡಿತು. ಚಿತ್ರದ ಒಂದು ಸನ್ನಿವೇಶದಲ್ಲಿ ಕುಡುಕ (ಮೋತಿಲಾಲ್)ನೊಬ್ಬ ಹಾಡುವ 'ಜಿಂದಗಿ ಖ್ವಾಬ್ ಹೈ' ಎಂಬ ಹಾಡು ಥಟ್ಟನೆ ನಮಗೆ ಸಲೀಲ್ ಚೌಧರಿಯ ಸ್ವರಸಂಯೋಜನೆಯದೆನಿಸಿಬಿಡುತ್ತದೆ. ಆದರೆ ಕೊನೆಯ ಹಾಡು ಭೈರವ ರಾಗದ 'ಜಾಗೊ ಮೋಹನ ಪ್ಯಾರೆ' ಮಾತ್ರ ರಾಜ್ ಯೋಚಿಸಿ ಕೂಡಿಸಿದ್ದೆಂಬುದು

ಖಂಡಿತಕ್ಕೂ ಗೊತ್ತಾಗುತ್ತದೆ. ಹಾಡಿನ ಪ್ರಾರಂಭದ ಮೇಳಧ್ವನಿ 'ಜಾಗೊ ರೆ ಜಾಗೊ ರೆ ಸಬ್ ದುನಿಯಾ ಜಾಗೆ' ಗೆ ಬಳಸಿದ ಪರಂಪರಾಗತ ರಾಗ ನಮ್ಮನ್ನೊಂದು ಬೇರೆಯೇ ಲೋಕಕ್ಕೆ ಕರೆದೊಯ್ಯುತ್ತದೆ. ಈ ಮೇಳಧ್ವನಿಯ ಹಿನ್ನೆಲೆಯಾಗಿ ಲತಾಳ ಆಲಾಪ್ 'ಬರಸಾತ್' ಚಿತ್ರದ ಹೈಲೈಟ್ ಆಗಿಬಿಡುತ್ತದೆ. 'ಬರಸಾತ್ ಮೆ ಹಮ್‌ಸೆ ಮಿಲೆ' ಹಾಡಿನಲ್ಲಿಯೂ ಮೇಳಧ್ವನಿಯೊಂದಿಗೆ ಆಕೆಯ ಇಂಥದೇ ಆಲಾಪ್ ಕೇಳಿ ಬರುತ್ತದೆ. ಮೇಳವನ್ನು ಬಳಸುವುದು ರಾಜ್‌ಗೊಂದು ವೀಕ್‌ನೆಸ್ ಆಗಿರಬೇಕು. 'ಬೂಟ್ ಪಾಲಿಶ್' ಚಿತ್ರದ ಮಕ್ಕಳ ಹಾಡನ್ನೇ ತೆಗೆದುಕೊಳ್ಳಿ, 'ಶ್ರೀ420'ಯ 'ಈಚಕ್‌ದಾನಾ' ಅಥವಾ 'ಮೇರಾ ನಾಂ ಜೋಕರ್'ನ 'ತಿತರ್ ಕೆದೋ..' ಅಥವಾ 'ಆವಾರಾ' ಚಿತ್ರದ ಹಾಡುಗಳನ್ನೇ ನೋಡಿ. ಜಾನಪದದ ಸತ್ವವನ್ನಾತ ಮೇಳಗೀತವನ್ನಾಗಿಸಿ ಕೇಳುಗರೊಂದಿಗೆ ಒಂದು ಗಾಢ ಸಂಬಂಧವೇರ್ಪಡಿಸಿಕೊಂಡ.

ಮುಕೇಶ್ ಮತ್ತು ರಾಜ್‌ಕಪೂರ್ - ಒಟ್ಟಿಗೇ ಬೆಳೆದರು, ಒಂದೇ ಎಂಬಂತೆ ಉಳಿದರು. 'ಆಗ್' ಚಿತ್ರದ ಮೂಲಕ ಇಬ್ಬರೂ ಸಮೀಪವಾದರು. ಹಾಗೆ ನೋಡಿದರೆ ಮುಕೇಶ್ ಚಿತ್ರರಂಗ ಪ್ರವೇಶಿಸಿದ್ದು 1945ರಲ್ಲಿ; 'ಅನೋಖಿ ಅದಾ' ಮೂಲಕ. 'ದಿಲ್ ಜಲತಾ ಹೈ ತೋ ಜಲನೆ ದೆ' ಮುಕೇಶ್ ಹಾಡಿದ ಮೊದಲ ಗೀತೆಯಾದರೂ ಜನ ಅದನ್ನು ಸೈಗಲ್ ಹಾಡಿದ್ದೆಂದೇ ತಪ್ಪಾಗಿ ಭಾವಿಸಿದರು. ಅನಿಲ್ ಬಿಸ್ವಾಸ್ ಆ ಹಾಡನ್ನು ಸೈಗಲ್ ಶೈಲಿಯಲ್ಲೇ ಬಯಸಿದರು. ಮುಕೇಶ್‌ಗೆ ಅನುಕರಣವೆಂದರೆ ಆಗದು. ಅದು ಸಿ.ಎಚ್. ಆತ್ಮಾಗೆ ಬಲು ಪ್ರಿಯ. ತನ್ನ ನಾದಪೂರ್ಣ ಶ್ರೀಮಂತ ಧ್ವನಿಯಿಂದ ಹಾಡಿದ ಮುಕೇಶ್. ಅನುನಾಸಿಕತೆಯ ಆ ಧ್ವನಿ ವಿಷಣ್ಣ ಭಾವವನ್ನು ತುಂಬ ಪ್ರಭಾವಶಾಲಿಯಾಗಿ ಹೊಮ್ಮಿಸುವಂಥದು. ಆತನ ಉಚ್ಚಾರ ಸ್ಪಷ್ಟತೆ. ವೈವಿಧ್ಯಮಯ ಹಾಡುಗಾರಿಕೆ ಮುಕೇಶ್ ಸ್ವತಂತ್ರವಾಗಿ ಬೆಳೆದುನಿಲ್ಲಲು ಸಹಾಯಕವಾದವು. ರಾಜ್‌ನ ಧ್ವನಿಗೆ ಹೊಂದುವಂಥದು ಮುಕೇಶ್‌ನ ಕಂಠಮಾಧುರ್ಯ.

ರಾಜ್‌ಗಾಗಿ ಮುಕೇಶ್ ಹಾಡಿದ ಕೊನೆಯ ಹಾಡು 'ಜಾನೆ ಕಹಾಂ ಗಯೆ ಓ ದಿನ್..' ಶಂಕರ್-ಜೈಕಿಶನ್ ಈ ಹಾಡನ್ನು ಮಿಶ್ರಶಿವರಂಜನಿಯಲ್ಲಿ ಸ್ವರಬದ್ಧಗೊಳಿಸಿದ್ದರು. ರಾಜ್ ತುಂಬ ಇಷ್ಟಪಟ್ಟು ಬರೆಸಿ - ಸ್ವರಸಂಯೋಜನೆಯಲ್ಲಿ ಆಸಕ್ತಿ ವಹಿಸಿ - ಚಿತ್ರೀಕರಿಸಿ ನಟಿಸಿದ ಈ ಹಾಡು ಮುಕೇಶ್‌ನ 'ಬೆಸ್ಟ್' ಹೇಗೋ ಹಾಗೇ ರಾಜ್‌ನ 'ಬೆಸ್ಟ್' ಕೂಡ.

ಸ್ವರಸಂಯೋಜಕ ಯಾರೇ ಇರಲಿ 'ಬರಸಾತ್', 'ಸಂಗಮ್' (ದೋಸ್ತ್ ದೋಸ್ತ್ ನಾ ರಹಾ), 'ಬಾಬಿ' (ಮೈ ಶಾಯರ್ ತೋ ನಹಿಂ), 'ಮೇರಾ ನಾಂ ಜೋಕರ್' (ಜೇನಾ ಯಹಾಂ, ಮರನಾ ಯಹಾಂ)ಗಳು ರಾಜ್‌ನ ಹಾಡುಗಳಾಗಿ ನೆನಪಿನಂಗಳದಲ್ಲಿ ನೆಲೆಸಿದುವು.

ರಾಜ್‌ಕಪೂರ್ ತನ್ನ ಅನೇಕ ಚಿತ್ರಗಳಲ್ಲಿ ವಿವಿಧ ವಾದ್ಯಗಳನ್ನು ನುಡಿಸುತ್ತ ನಟಿಸಿದ್ದಾನೆ. ಅಕಾರ್ಡಿಯನ್, ಬ್ಯಾಗ್‌ಪೈಪರ್, ತಬಲಾ, ತುತೂರಿ ಎಲ್ಲವನ್ನೂ ಆತ ಕರಾರುವಾಕ್ಕಾಗಿ ನಿರ್ವಹಿಸಿದ. ಈ ಎಲ್ಲವುಗಳ ನಿರ್ವಹಣೆಯಲ್ಲಿ ಆತ ಪರಿಣಿತನಾಗಿದ್ದನಾದ್ದರಿಂದ ಉಳಿದ ಕೆಲ ಹೀರೋಗಳು ವಾದ್ಯನುಡಿಸುವಾಗಿನ ತಪ್ಪುಗಳು ಈತನ ಚಿತ್ರಗಳಲ್ಲಿ ಕಾಣಿಸುವುದು ಸಾಧ್ಯವಿರಲಿಲ್ಲ. 'ಬರಸಾತ್'ನಲ್ಲಿ ಆತನ ಸಂಗಾತಿಯಾಗಿದ್ದ ಪಿಟೀಲು ಮುಂದೆ ಆರ್‌ಕೆಯ ಲಾಂಛನವಾಗಿ ನಿಂತಿತು. 'ಜಿಸ್‌ದೇಶ್‌ಮೆ ಗಂಗಾ ಬೆಹತೀ ಹೈ' ಚಿತ್ರದಲ್ಲಿ ಡಪ್ಪು (ಪಳ್ಳಿ) ಆತನ ಸಂಗಾತಿ. ಈ ಚಿತ್ರದ ಶೀರ್ಷಿಕೆ ಗೀತೆ ತುಂಬ ಹಿಟ್ ಆಯಿತು. ರಾಜ್ ವಹಿಸುತ್ತಿದ್ದ ಎಚ್ಚರಿಕೆಗಳ ಫಲ ಇದು. ಹೌದು, ಪುನರಾವರ್ತನೆಯೆನಿಸಿದರೂ ಸರಿ. ಮತ್ತೆ ಮತ್ತೆ ಆತ ಗೀತರಚನೆ, ಸ್ವರಸಂಯೋಜನೆ, ಅದರ ಚಿತ್ರೀಕರಣಗಳ ಸಂದರ್ಭಗಳಲ್ಲಿ ಆ ಹಾಡು ನೋಡುಗರ ಮನಸ್ಸಿನ ಮೇಲೆ ಬೀರಬೇಕಾದ ಪರಿಣಾಮದ ಕುರಿತು ವಹಿಸು



"ಈ ಧಾಟಿ ಹೀಗಿದ್ದರೆ ಹೇಗೆ ಲತಾಜಿ?"

ತ್ತಿದ್ದ ಎಚ್ಚರಿಕೆಗಳ ಬಗ್ಗೆ ಹೇಳಲೇಬೇಕಾಗುತ್ತದೆ.

ದೇಶದ ಅನೇಕ ಭಾಗಗಳಿಂದ ಆತ ಗೀತೆಗಳ ಮೂಲಕಲ್ಪನೆಯನ್ನು ಆಯ್ದುಕೊಂಡ. ಚಂಬಲ್ ಕೊಳ್ಳದ ಜಾನಪದ ಮಾಧುರ್ಯವನ್ನು 'ಜಿಸ್ ದೇಶ್ ಮೆ' ಚಿತ್ರದಲ್ಲಿ ಅಳವಡಿಸಿಕೊಂಡ. ಗೋವಾದ ಲೋಕಗೀತದ ಧಾಟಿಯನ್ನು 'ಬಾಬಿ'ಗೆ ಬಳಸಿಕೊಂಡ ('ನಾ ಮಾಂಗೂ ಸೋನಾ ಚಾಂದಿ') ಹಿಮಾಚಲ ಪ್ರದೇಶದ ಜನಾಂಗ ಗೀತೆಯನ್ನಾತ 'ರಾಮ್ ತೇರಿ ಗಂಗಾ ಮೈಲಿ'ಯಲ್ಲಿ ಜೋಡಿಸಿಕೊಂಡ. 'ಬಾಬಿ'ಯಲ್ಲಿ ಇನ್ನೂ ಒಂದು ಲೋಕ ಗೀತೆಯ ರೂಪಾಂತರ ಇದೆ. ಪಂಜಾಬಿನದು (ಬೇಶಕ ಮಂದಿರ ಮಸ್ಜಿದ್..). ನರೇಂದ್ರ ಚಂಚಲ್ ಎಂಬ ಗಾಯಕ ಈ ಹಾಡಿನಿಂದ ತುಂಬ ಪ್ರಸಿದ್ಧಿ ಪಡೆದನಾದರೂ ಅದೇಕೋ ಮುಂದೆ ಆತನ ಧ್ವನಿಯನ್ನು ನಾವು ಕೇಳಲೇ ಇಲ್ಲ.

ಕೆಲವು ಹಾಡುಗಳಿಗೆ ಮುಕೇಶ್ ಬದಲು ಮತ್ತೊಂದು ಧ್ವನಿಯೇ ಆಗಬೇಕೆಂಬ ವಿಚಾರ ಏಕಕಾಲಕ್ಕೆ ರಾಜ್ ಹಾಗೂ ಶಂಕರ್-ಜೈಕಿಶನ್‌ರಲ್ಲಿ ಬರುತ್ತಿತ್ತು. 'ಶ್ರೀ420' ಚಿತ್ರದ ಅರ್ಧದಷ್ಟು ಹಾಡುಗಳನ್ನು ಮನ್ನಾ ಡೇ ಹಾಡಿದ. ಉದಾಹರಣೆಗೆ 'ರಾಮಯ್ಯಾ ವಸ್ತಾವಯ್ಯಾ.' ತೆಲುಗು ಪದಗಳನ್ನು ಬಳಸಿದ ಈ ಹಾಡು ಇಂದಿಗೂ ಕೇಳುಗರನ್ನು ಕುಣಿಸುತ್ತದೆ. 'ಮೇರಾ ನಾಂ ಜೋಕರ್'ನ 'ಏ ಭಾಯ್ ಜರಾ ದೇಖ್ಕೆ ಚಲೋ' ಕೂಡ ಅಷ್ಟೆ. 'ಚೋರಿ ಚೋರಿ'ಯಲ್ಲಿ 'ರೋಮನ್ ಹಾಲಿಡೆ'ಯ ಟ್ಯೂನೊಂದರ ಅದ್ಭುತ ರೂಪಾಂತರವನ್ನು ಕೇಳಬಹುದು. 'ಆವಾರಾ'ದಲ್ಲೂ ಮನ್ನಾ ಡೇ ಧ್ವನಿಯನ್ನು ಬಳಸಿಕೊಂಡ ರಾಜ್.

ಲತಾ ಮುಂಗೇಶ್ಕರ್ ಮತ್ತು ಮುಕೇಶ್ ತಮ್ಮ ಜೀವಿತದ ಅತ್ಯುತ್ತಮ ಎನ್ನಬಹುದಾದ ಹಾಡುಗಳನ್ನು ಹಾಡಿದ್ದು ಆರ್‌ಕೆ ಚಿತ್ರಗಳಿಗಾಗಿಯೆ. 'ಆವಾರಾ' ಚಿತ್ರದ 'ದಂ ಭರ್‌ಲೊ ಉಧರ್ ಮೂಹ್ ಫೇರೇ' ಅತ್ಯಂತ ಮೃದುವಾದ, ಪ್ರಣಯ ಗೀತೆಯೆನಿಸಿದರೆ ಅದೇ ಚಿತ್ರದ 'ಆವಾರಾ ಹೂಂ' ಮತ್ತು 'ಮೇರಾ ಜೂತಾ ಹೈ ಜಪಾನಿ'ಗಳು ಅಂತಾರಾಷ್ಟ್ರೀಯ ಮನ್ನಣೆ ಗಳಿಸಿದವು. 'ಸತ್ಯಂ ಶಿವಂ ಸುಂದರಂ'ನ, ಲತಾ ಹಾಡಿದ, ಶೀರ್ಷಿಕೆ ಗೀತೆ ತನ್ನ ಸರಳ ಸತ್ವಭರಿತ ಭಾವದಿಂದಾಗಿ ಅವಿಸ್ಮರಣೀಯವೆನಿಸಿದೆ. 'ಬರಸಾತ್'ನ 'ತಕ್ ಧಿನ್ನಾ ಧಿನ್' ಮತ್ತು 'ಛೋಡ್ ಗಯೆ ಬಾಲಮ್'ಗಳು ಲತಾಳ ಪ್ರತಿಭೆಯ ಅತ್ಯುತ್ತಮ ಉದಾಹರಣೆಗಳಾಗಿವೆ.

ಇನ್ನು ಚಿತ್ರದುದ್ದಕ್ಕೂ ಕೇಳಿಬರುವ ಹಿನ್ನೆಲೆ ಸಂಗೀತ ಪರಿಣಾಮದ ಕುರಿತ ರಾಜ್ ಕಲ್ಪನೆಯ ಕುರಿತು ಒಂದಷ್ಟು ಹೇಳಲೇಬೇಕು. ಹಾಲಿವುಡ್‌ನಿಂದ ಪ್ರಭಾವಿತ ರಾಜ್‌ಕಪೂರ್ ದೃಶ್ಯ ಪರಿಣಾಮದ ತೀವ್ರತೆಯನ್ನು ಹೆಚ್ಚಿಸಲು ಹಿನ್ನೆಲೆ ಸಂಗೀತವನ್ನು ಸಮರ್ಥವಾಗಿ ದುಡಿಸಿಕೊಂಡ. ಎಲ್ಲೂ 'ಸುಮ್ಮಸುಮ್ಮನೆ' ಹಿನ್ನೆಲೆಯಾಗಿ ಸಂಗೀತವನ್ನಾತ ಬಳಸಲಿಲ್ಲ. ಅದಕ್ಕೊಂದು ಅರ್ಥವಿದೆ - ಮಹತ್ವವಿದೆ ಎಂಬುದನ್ನು ಚೆನ್ನಾಗಿ ಅರಿತಿದ್ದ ರಾಜ್ ಅಬ್ಬರವನ್ನೆಂದೂ ಮೆಚ್ಚಲಿಲ್ಲ. ಸೂಕ್ಷ್ಮ-ಸಂವೇದನಾತ್ಮಕ ಸಂಗೀತವನ್ನಾತ ಹಿನ್ನೆಲೆಯಾಗಿ ಹೆಣೆದು ದೃಶ್ಯಗಳ ಭಾವತೀವ್ರತೆಗೆ ಒತ್ತು ಕೊಟ್ಟ.

ಹೌದು. ರಾಜ್‌ಗೆ ಚಿತ್ರನಾಟಕ (ಸ್ಕ್ರೀನ್‌ಪ್ಲೇ) ಹಂತದಲ್ಲೇ ಇಡೀ ಚಿತ್ರದ ಒಟ್ಟು ಪರಿಣಾಮವನ್ನು ಮುಂಗಾಣುವ ಅಪೂರ್ವ ಶಕ್ತಿಯಿತ್ತು. ಚಿತ್ರನಾಟಕ ರಚನೆಗಾಗಿ ಆತ ಎಂದೂ ಅವಸರಿಸಲಿಲ್ಲ. ಸ್ವತಃ ತನ್ನ ಚಿತ್ರಗಳ ಸಂಕಲನ ಕಾರ್ಯವನ್ನು ಪೂರೈಸುತ್ತಿದ್ದ ರಾಜ್ ಸಂಕಲನ ಕಾರ್ಯದ ಅರ್ಧದಷ್ಟನ್ನು ಕಥಾರಚನೆಯ ಸಂದರ್ಭದಲ್ಲೇ ಸಾಧಿಸಿಬಿಡುತ್ತಿದ್ದ. ಪ್ರತಿಯೊಂದೂ ಸಮರ್ಪಕವಾಗಿರಬೇಕು - ಕರಾರುವಾಕ್ಕಾಗಿರಬೇಕು ಆತನಿಗೆ: ಕಥೆ ನಟ ನಟಿಯರು, ಸಂಭಾಷಣೆ, ಹಾಡುಗಳು ಮತ್ತು ಅವುಗಳ ಸರಿಯಾದ ಸ್ಥಾನ, ಸಂಗೀತ ನಿರ್ದೇಶಕ ಮತ್ತು ಸಂಗೀತ ನಿರ್ವಾಹಕ (music conductor), ಗಾಯಕ-ಗಾಯಕಿ, ಚಿತ್ರೀಕರಣ, ಲೊಕೇಶನ್ ಇತ್ಯಾದಿ ಇತ್ಯಾದಿ. ಎಲ್ಲೂ ಯಾವ ಕೆಲಸವನ್ನೂ ಇನ್ನೊಬ್ಬರಿಗೆ ವಹಿಸಿಕೊಟ್ಟು ತೆಪ್ಪಗೆ ಕೂಡಲಿಲ್ಲ ರಾಜ್. ಅಂತೆಯೇ ಈ ಗುಣ ಆತನ ಯಶದ ಗುಟ್ಟೆನಿಸಿತು. ನಂತರದ ಕೆಲವು ಅತ್ಯುತ್ತಮ ಚಿತ್ರಗಳ ಮೇಲೆ ರಾಜ್‌ಒಂದಿಲ್ಲೊಂದು ರೀತಿಯಲ್ಲಿ ಪ್ರಭಾವ ಬೀರಿದ್ದು ನೂರಕ್ಕೆ ನೂರು ನಿಜ. ಗೀತೆಯೊಂದು ಜನ್ಮ ತಾಳುವ ಮೊದಲಿನಿಂದಲೂ ಪೋಷಿಸಿ, ಜನನ ಸಂದರ್ಭದಲ್ಲಿ ಸೂಲಗಿತ್ತಿಯ ಕೆಲಸ ಮಾಡಿ, ನಂತರ ಆ ಮಾಧುರ್ಯವನ್ನು ಸರಿಯಾಗಿ ಮೈದುಂಬಿಸಿಕೊಳ್ಳುವಂತೆ ನೋಡಿಕೊಂಡವ ರಾಜ್. ಆದರೆ ಎಂದೂ ಇದೆಲ್ಲ ಒಟ್ಟು ದುಡಿಮೆಯ ಫಲವೆಂದೆನ್ನುತ್ತಿದ್ದ.

ಆತನೊಂದಿಗೆ ಹೆಗಲೆಣೆಯಾಗಿ ಶ್ರಮಿಸಿದ ಪ್ರತಿಭಾವಂತರು ಯಾರ್‍ಯಾರೆನ್ನುತ್ತೀರಿ? ಗೀತಕಾರರಾದ ಶೈಲೇಂದ್ರ, ಹಸರತ್ ಜೈಪುರಿ; ಗಾಯಕ ಮುಕೇಶ್; ಸಂಗೀತ ನಿರ್ದೇಶಕರಾದ ಶಂಕರ್-ಜೈಕಿಶನ್... ಅವರೆಲ್ಲ ಆರ್‌ಕೆಯ ಆಧಾರಸ್ತಂಭಗಳಾದರೆ ಸ್ವತಃ ರಾಜ್ ಅದರ ಭದ್ರ ಬುನಾದಿ. ಆದರೆ ಒಂದೊಂದೇ ಆಧಾರ ಸ್ತಂಭಗಳು ಕುಸಿಯತೊಡಗಿದವು. ಶೈಲೇಂದ್ರ ಮತ್ತು ಜೈಕಿಶನ್ ತೀರಿಕೊಂಡಾಗ ರಾಜ್‌ಕಪೂರ್ ತನ್ನ ದೇಹದ ಮಹತ್ವದ ಅಂಗಗಳು ಕಡಿದು ಹೋದವು ಎಂದು ದುಃಖಿಸಿದ. ಮುಕೇಶ್ ನಿಧನದಿಂದ ತನ್ನ ಧ್ವನಿಯೇ ಹೋಯಿತೆಂದು ಮೂಕವಾಗಿ ರೋದಿಸಿದ. ಕುಸಿದ ಆಧಾರಸ್ತಂಭಗಳ ಬದಲು ಮತ್ತೊಂದನ್ನು ನಿಲ್ಲಿಸಲೆತ್ನಿಸಿದ ರಾಜ್. ಆದರೆ ಆತನ ಸಾವಿನಿಂದಾಗಿ 'ಆರ್‌ಕೆ'ಯ ಬುನಾದಿಯೇ ಕುಸಿಯಿತಲ್ಲ... ●

ನೀತಿಕಥೆ

# ಮಾನವ ಜನ್ಮ ದೊಡ್ಡದು

ಸ್ವಾಮಿ ವಿವೇಕಾನಂದರು ಆಗತಾನೇ ತಮ್ಮ ವಿದೇಶ ಪ್ರವಾಸವನ್ನು ಪೂರೈಸಿಕೊಂಡು ಚಿಕ್ಯಾಗೋ ನಗರದಿಂದ ಮರಳಿ ಭಾರತಕ್ಕೆ ಬಂದಿದ್ದರು. ಆಗ ಅವರ ಬಳಿ ಧನಸಹಾಯ ಯಾಚಿಸಿ ಯುವಕನೊಬ್ಬ ಬಂದು, ತನ್ನ ಸಂಸ್ಥೆಗಾಗಿ ದೇಣಿಗೆಯನ್ನು ಕೊಡುವಂತೆ ವಿನಂತಿಸಿಕೊಂಡ.

''ದೇಣಿಗೆ ಸಂಗ್ರಹದ ಉದ್ದೇಶವೇನು?'' ಸ್ವಾಮೀಜಿ ಆ ಯುವಕನನ್ನು ಪ್ರಶ್ನಿಸಿದರು.

''ನಾನು ಜೈನರ ಜೀವದಯಾ ಸಂಸ್ಥೆಯ ಕಾರ್ಯಕರ್ತ. ಕಟುಕರ ಕತ್ತಿಯಿಂದ ಗೋವುಗಳ ಪ್ರಾಣರಕ್ಷಣೆ ನಮ್ಮ ಸಂಸ್ಥೆಯ ಗುರಿ. ಗೋಶಾಲೆಗಳ ನಿರ್ವಹಣೆಗಾಗಿ ಧನಸಂಗ್ರಹ ಮಾಡುವ ಪವಿತ್ರ ಕಾರ್ಯದಲ್ಲಿ ನನ್ನನ್ನೇ ನಾನು ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದೇನೆ'' ಯುವಕ ವಿನೀತನಾಗಿ ನುಡಿದ.

''ಏಕೆ?''

''ಗೋವುಗಳು ಪ್ರತಿಯೊಬ್ಬ ಹಿಂದುವಿಗೂ ಪರಮಪೂಜ್ಯ ಎನ್ನುವ ವಿಷಯ ನಿಮಗೆ ತಿಳಿದೇ ಇದೆ ಸ್ವಾಮೀಜಿ. ಇವುಗಳನ್ನು ರಕ್ಷಿಸಿದರೆ ದೇವಪೂಜೆ ಮಾಡಿದಂತೆ, ಧರ್ಮವನ್ನು ರಕ್ಷಿಸಿದಂತೆ, ತಾವು ದಯಮಾಡಿ ದೇಣಿಗೆ ನೀಡಿ ನಮ್ಮನ್ನು ಆಶೀರ್ವದಿಸಬೇಕು.''

ವಿವೇಕಾನಂದರು ಮುಗುಳ್ನಕ್ಕು ನುಡಿದರು -

''ಅಯ್ಯಾ! ದೇಶದ ಕೆಲವು ಭಾಗಗಳಲ್ಲಿ ಭೀಕರವಾದ ಬರಗಾಲ ಬಿದ್ದಿದೆ. ಹಸಿವಿನಿಂದ, ರೋಗರುಜಿನಗಳಿಂದ ಜನ ಕ್ರಿಮಿಗಳಂತೆ ಸಾಯುತ್ತಿದ್ದಾರೆ. ಅಂತಹ ಹತಭಾಗ್ಯರಿಗೆ ನಿಮ್ಮ ಸಂಸ್ಥೆಯು ಯಾವ ವಿಧದಲ್ಲಿ ನೆರವಾಗಿದೆ?''

ತಬ್ಬಿಬ್ಬಾದ ಯುವಕ ತಡೆತಡೆದು ಉತ್ತರಿಸಿದ -

''ಕ್ಷಮಿಸಿ ಸ್ವಾಮೀಜಿ! ನಮ್ಮ ಗುರಿ ಗೋವುಗಳ ರಕ್ಷಣೆ ಮಾತ್ರ. ಬರಗಾಲದ ಬವಣೆಯಲ್ಲಿರುವ ಜನಗಳಿಗೆ ಸಹಾಯ ಮಾಡುವ ಕೆಲಸ ನಮ್ಮದಲ್ಲ. ಅದು ಅವರವರ ಕರ್ಮಫಲ, ಅನುಭವಿಸುತ್ತಿದ್ದಾರೆ.''

ವಿವೇಕಾನಂದರು ಕೆರಳಿ ನುಡಿದರು -

''ಜನರ ಕಷ್ಟಗಳಿಗೆ, ನೋವಿಗೆ ಸ್ಪಂದಿಸದ ನಿಮ್ಮ ಸಂಸ್ಥೆ ಒಂದು ಸಂಸ್ಥೆಯೇ? ನಾನದಕ್ಕೆ ಒಂದು ಪೈಸೆಯ ದೇಣಿಗೆಯನ್ನೂ ನೀಡುವದಿಲ್ಲ. ನನ್ನ ದೃಷ್ಟಿಯಲ್ಲಿ ಮಾನವ ಜನ್ಮ ದೊಡ್ಡದು.''

ಯುವಕ 'ವಿದೇಶದಿಂದ ಸ್ವಾಮೀಜೀ ಅಪಾರ ಹಣ ತಂದಿದ್ದಾರೆ. ಅವರಿಂದ ಲಾಭ ಪಡೆಯಬೇಕೆಂದು' ಬಂದಿದ್ದ. ಈ ಉತ್ತರದಿಂದ ನಿರಾಶೆ ಹೊಂದಿ, ಅವರಿಗೆ ನಮಸ್ಕರಿಸಿ ಹೊರಬಿದ್ದ.

● ಲಕ್ಷ್ಮಣ ಆಲವಂಡಿ

# ದಾಖಲೆಗಳ ದಾಖಲೆ ಈತನ ಹವ್ಯಾಸ!

● ಎಸ್.ಪಿ. ಹೆಗಡೆ



ಪ್ರತಿಯೊಬ್ಬನಿಗೂ ತಾನು 'ಎದ್ದು ಕಾಣಿಸಿಕೊಳ್ಳುವಂಥ' ಏನಾದರೂ ಒಂದನ್ನು ಸಾಧಿಸಿಕೊಳ್ಳುವ ಪ್ರವೃತ್ತಿ ಇರುವುದು ಸಾಮಾನ್ಯ. ಆದರೆ ಇನ್ನು ಕೆಲವರಿಗೆ ದಾಖಲೆ ಸ್ಥಾಪಿಸುವ ಹವ್ಯಾಸ. ಕೋಯಿಮತ್ತೂರಿನ ಪಾರ್ಥಸಾರಥಿಗೆ ದಾಖಲೆ ಸ್ಥಾಪಿಸುವ ಹುಮ್ಮಸ್ಸು.

ಇತರರಿಗಿಂತ ಭಿನ್ನವಾಗಿ, ಸಾಮಾನ್ಯರಲ್ಲಿ ಅಸಾಮಾನ್ಯರಾಗಿ ಇರುವದು ಕೆಲವರಿಗೆ ಹವ್ಯಾಸ ಹಾಗೂ ಹೆಮ್ಮೆಯ ವಿಷಯ. ದಾಖಲೆಗಳನ್ನು ಮುರಿಯುವದು, ಸ್ಥಾಪಿಸುವದು ಅವರಿಗೆ ಸಂತೋಷದ, ಅಭಿಮಾನದ ಸಂಗತಿ. ಕೇವಲ ಗಿನ್ನಿಸ್ ದಾಖಲೆಯಲ್ಲಿ ಸೇರಬೇಕೆಂಬ ಉದ್ದೇಶದಿಂದ ಅಪಾಯವನ್ನು ಎದುರಿಸಿ ಸಾಹಸಕ್ಕಿಳಿಯುವವರು ಬಹಳ ಜನರಿದ್ದಾರೆ. ಇನ್ನು ಕೆಲವರಿಗೆ ಒಂದು ಸಾರೆ ಗಿನ್ನಿಸ್ ದಾಖಲೆಯಲ್ಲಿ ಸೇರಿದರೆ ಸಾಲದು; ಮತ್ತೆ ಮತ್ತೆ ತಮ್ಮ ಹೆಸರು ಅಲ್ಲಿ ದಾಖಲಾಗಬೇಕೆಂಬ ಹೆಬ್ಬಯಕೆ. ಅಂಥವರಲ್ಲಿ ಕೋಯಿಮತ್ತೂರಿನ ಪಾರ್ಥಸಾರಥಿ ಒಬ್ಬರು.

'ಸರ್ಪಗಳ ರಾಜ' ಎಂದೇ ಹೆಸರಾದ ಇವರು ಕೆಲವರ ಪಾಲಿಗೆ ವಿಚಿತ್ರ ವ್ಯಕ್ತಿ. ಇವರು ಮಾಡುವ ಕೆಲಸಗಳನ್ನು ಅಸಹ್ಯವೆಂದು ಜರಿಯುವವರೂ ಇದ್ದಾರೆ. ತಮ್ಮ ಕುಟುಂಬದ ಅಸಹಕಾರ ಇವರನ್ನು ಇಂಥ ಸಾಹಸಗಳಿಂದ ವಿಮುಖಗೊಳಿಸಿಲ್ಲ. ಗಿನ್ನಿಸ್ ಪಾರ್ಥಸಾರಥಿಯೆಂದೇ ಕರೆಸಿಕೊಳ್ಳುವಲ್ಲಿ ಇವರಿಗೆ ಬಹಳ ತೃಪ್ತಿ ಹಾಗೂ ಸಂತೋಷ. ಈವರೆಗೆ ಗಿನ್ನಿಸ್ ದಾಖಲೆ ಪುಸ್ತಕದಲ್ಲಿ 15 ಸಾರೆ ಇವರ ಹೆಸರು ಕಾಣಿಸಿಕೊಂಡಿದೆ. ಅವುಗಳು ಈ ರೀತಿ ಇವೆ.

(1) ಅವಿರತವಾಗಿ 15 ದಿವಸ ಹಿಮ್ಮುಖವಾಗಿ ನಡೆದದ್ದು.
(2) ಹಿಮ್ಮುಖವಾಗಿ ನಡೆದು 28 ತಾಸುಗಳಲ್ಲಿ 177 ಕಿಲೋಮೀಟರ್ ಕ್ರಮಿಸಿದ್ದು.
(3) 10 ನಿಮಿಷಗಳಲ್ಲಿ 61 ಬಾಳೆಹಣ್ಣುಗಳನ್ನು ತಿಂದಿದ್ದು.
(4) ಅತಿಕಹಿಯಾದ 300 ಗ್ರಾಂ. ಹಾಗಲಕಾಯಿ ಯನ್ನು 12 ನಿಮಿಷಗಳಲ್ಲಿ ನುಂಗಿದ್ದು.
(5) ಮೂರು ನಿಮಿಷಗಳಲ್ಲಿ 114 ಸಿಗರೇಟ್‌ಗಳನ್ನು ಸೇದಿದ್ದು.
(6) ಸತತವಾಗಿ 12 ನಿಮಿಷಗಳವರೆಗೆ 50 ಸಿಗರೇಟ್‌ಗಳನ್ನು ಸೇದಿದ್ದು.

(7) ಒಮ್ಮೆಯೂ ವಿಶ್ರಾಂತಿ ತೆಗೆದುಕೊಳ್ಳದೇ 30 ತಾಸು ಹಾಗೂ 10 ನಿಮಿಷಗಳವರೆಗೆ ಒಂಟಿಕಾಲಿನಲ್ಲಿ ನಿಂತಿದ್ದು.

(8) ಕಣ್ಣು ಮಿಟುಕಿಸದೇ 33 ತಾಸು 10 ನಿಮಿಷಗಳವರೆಗೆ ದಿಟ್ಟಿಸಿ ನೋಡಿದ್ದು.

(9) 400 ಹಾವುಗಳೊಂದಿಗೆ 433 ದಿವಸಗಳ ವರೆಗೆ ಒಂದೇ ಕೋಣೆಯಲ್ಲಿ ಇದ್ದಿದ್ದು.

(10) ಒಂಬತ್ತು ಸೆಕೆಂದಿನಲ್ಲಿ 500 ಗ್ರಾಂ ಹರಳೆಣ್ಣೆ ಕುಡಿದದ್ದು.

(11) ಬೆಂಕಿ ಹೊತ್ತಿಸದ 228 ಬೀಡಿಗಳನ್ನು ತನ್ನ ಬಾಯಲ್ಲಿ ಮೂರು ನಿಮಿಷಗಳವರೆಗೆ ಇಟ್ಟುಕೊಂಡಿದ್ದು.

(12) ಎರಡೂ ಕೈಯಲ್ಲಿ ತಲಾ ನಾಲ್ಕೂವರೆ ಕೆ.ಜಿ. ತೂಕದ ಇಟ್ಟಿಗೆಗಳನ್ನು ಹಿಡಿದುಕೊಂಡು 64 ಮೈಲು ನಡೆದದ್ದು.

(13) ನೀರನ್ನು ಕುಡಿಯದೆಯೇ 50 ಗ್ರಾಂ ಮೆಣಸಿನಪುಡಿಯನ್ನು ಮೂರು ನಿಮಿಷಗಳವರೆಗೆ ನುಂಗಿದ್ದು.



(14) ತತ್ತಿಯೊಂದನ್ನು ಇಟ್ಟ ಚಮಚೆಯನ್ನು ಬಾಯಲ್ಲಿಟ್ಟುಕೊಂಡು ಒಮ್ಮೆಯೂ ಅದನ್ನು ಕೆಡವದೆ ಎರಡು ತಾಸುಗಳಲ್ಲಿ 20 ಕಿ.ಮೀ.ನಡೆದದ್ದು.

ಇಷ್ಟರಿಂದ ತೃಪ್ತಿಯಾಗದ ಇವರಿಗೆ ಕನಿಷ್ಠ ಒಂದು ನೂರು ಸಲವಾದರೂ ಗಿನ್ನಿಸ್ ದಾಖಲೆಯಲ್ಲಿ ಕಾಣಿಸಿಕೊಳ್ಳಬೇಕೆಂಬ ಮಹತ್ವಾಕಾಂಕ್ಷೆ. ಬರುವ ಫೆಬ್ರುವರಿಯಲ್ಲಿ ದಿಲ್ಲಿಯಲ್ಲಿ ನಡೆಯುವ ಪ್ರಪಂಚದ ಎಲ್ಲ ಗಿನ್ನಿಸ್ ದಾಖಲೆಗಾರರ ಸಮ್ಮೇಳನದಲ್ಲಿ ಭಾಗವಹಿಸಲು ಬಯಸಿದ್ದಾರೆ. ಆ ವಿಶೇಷ ಸಂದರ್ಭದಲ್ಲಿ ಹಲವು ತಾಸುಗಳವರೆಗೆ ಕೇವಲ ಒಂದು ಚದರಡಿ ಸ್ಥಳದಲ್ಲಿ ನರ್ತಿಸಿ ದಾಖಲೆ ಮುರಿಯಬೇಕೆಂಬ ಬಯಕೆ ಇವರದು. ಆ ಒಂದು ಚದರಡಿ ಸ್ಥಳದಲ್ಲಿ 1000 ಚೇಳುಗಳನ್ನಿಟ್ಟುಕೊಳ್ಳಲು ಬಯಸಿದ್ದಾರೆ.

ಇದಲ್ಲದೇ ಗಿನ್ನಿಸ್ ದಾಖಲೆ ಸ್ಥಾಪಿಸಲು ಅವರು ಉದ್ದೇಶಿಸಿದ ಇತರ ನಾಲ್ಕು ಮಹತ್ಕಾರ್ಯಗಳೆಂದರೆ:

(1) ಒಂಟಿಕಾಲಿನಲ್ಲಿ ನಿಂತುಕೊಂಡು,

(2) ಒಂದು ಕೈಯಿಂದ ಹಾರ್ಮೋನಿಯಮ್ ಬಾರಿಸುತ್ತ,

(3) ಮತ್ತೊಂದು ಕೈಯಿಂದ ಸತತ ಕರಗಂಟೆ ಬಾರಿಸುತ್ತ

(4) 45 ತಾಸುಗಳವರೆಗೆ ಸೀಟಿ ಹಾಕುವದು.

ಈ ನಾಲ್ಕನ್ನೂ ಏಕಕಾಲದಲ್ಲಿ ಮಾಡಬೇಕೆಂಬ ಯೋಜನೆ ಅವರದು.

ಇಷ್ಟೆಲ್ಲ ಸಾಧಿಸಿದ, ಸಾಧಿಸಬಯಸಿದ ಇವರ ಜೀವನವನ್ನು ಅವಲೋಕಿಸಿದಾಗ ಕೆಲವೊಂದು ಸ್ವಾರಸ್ಯಕರ ಸಂಗತಿಗಳು ಸಿಗುತ್ತವೆ. ಈಗ 40 ವರ್ಷದ ಇವರು ಹುಟ್ಟಿದ್ದು ಕೋಯಿಮತ್ತೂರು ಸಮೀಪದ ಪೂಲವಾಪಟ್ಟಿ ಎಂಬಲ್ಲಿ. ಬಾಲ್ಯದಲ್ಲಿ ಹಾವುಗಳೆಂದರೆ ಇವರಿಗೆ ತುಂಬ ಭಯ. ತಮ್ಮ ಶಾಲಾ ಶಿಕ್ಷಣವನ್ನು ಮುಗಿಸಿದ ತಕ್ಷಣ ಇವರಿಗೆ ಹಾವು ಹಾಗೂ ಅಂತಹ ಇತರ ಜಂತು

ಗಳ ಬಗ್ಗೆ ವಿಶೇಷ ಆಕರ್ಷಣೆಯಾಯಿತು. ಅಂದಿನಿಂದ ಬಹಳಷ್ಟು ಸಮಯವನ್ನು ಅವುಗಳ ಸಹವಾಸದಲ್ಲಿ ಕಳೆದಿದ್ದಾರೆ.

ವಿಷಪೂರಿತ ಹಾವು, ಚೇಳುಗಳ ಸಂಗಡ ಬಹಳ ಸಮಯದವರೆಗೆ ಒಂದೇ ಕೋಣೆಯಲ್ಲಿರುವ ಪ್ರದರ್ಶನಗಳನ್ನು ದೇಶದ ಎಲ್ಲ ಮುಖ್ಯ ನಗರಗಳಲ್ಲಿ ಏರ್ಪಡಿಸಿದ್ದಾರೆ. ಕೆಲವೊಮ್ಮೆ ಹಾವುಗಳಿಂದ ಚುಂಬಿಸಿಕೊಳ್ಳುತ್ತಾರೆ, ಇನ್ನು ಕೆಲವುಸಾರಿ ತಾವು ಬಾಯಿಯಲ್ಲಿ ಇಟ್ಟುಕೊಂಡ ನೀರನ್ನು ಅವು ಕುಡಿಯುವಂತೆ ಮಾಡುತ್ತಾರೆ.

ಈ ಕೆಲಸಗಳು ಯಾವಾಗಲೂ ಅಪಾಯರಹಿತವಲ್ಲ. ಕೆಲವೊಮ್ಮೆ ಅವು ಅವರನ್ನು ಕಡಿಯುತ್ತವೆ. ಆದರೆ ಅದಕ್ಕೆ ಅವರ ಹತ್ತಿರ ಶೀಘ್ರ ಪರಿಹಾರವಿದೆ. ಅವು ಕಡಿದ ಜಾಗವನ್ನು ತಕ್ಷಣವೇ ಕತ್ತರಿಸಿ ಹಾಕಿ ರಕ್ತವು ಹೊರಹೋಗುವಂತೆ ಮಾಡುತ್ತಾರೆ. ಹಾಗೂ ಹತ್ತಿರದ ಆಸ್ಪತ್ರೆಗೆ ಹೋಗಿ ಚಿಕಿತ್ಸೆ ಪಡೆಯುತ್ತಾರೆ. ಹಲವು ಬಾರಿ ಈ ರೀತಿ ಹಾವುಗಳಿಂದ ಕಡಿಸಿಕೊಂಡಿದ್ದಾರೆ.

ಹಾವು ಹಿಡಿಯುವುದರಲ್ಲಿಯೂ ಇವರು ಪರಿಣಿತರು. ಬೇರಾವ ಸಲಕರಣೆಯ ಸಹಾಯವಿಲ್ಲದೆ ಕೇವಲ ತಮ್ಮ ಎರಡು ಬೆರಳುಗಳಿಂದ ಇವರು ಎಂಥ ವಿಷಪೂರಿತ ಹಾವನ್ನಾದರೂ ಲೀಲಾಜಾಲವಾಗಿ ಹಿಡಿಯಬಲ್ಲರು. ತಮ್ಮ ಮನೆಯಲ್ಲಿ ಸಾವಿರಾರು ಚೇಳುಗಳನ್ನಲ್ಲದೇ 400 ವಿವಿಧ ರೀತಿಯ ಹಾವುಗಳನ್ನು ಸಾಕಿದ್ದಾರೆ. ತಾವು ಪ್ರದರ್ಶನ ಏರ್ಪಡಿಸುವ ಊರುಗಳಿಗೆ ಇವನ್ನು ಒಯ್ಯುತ್ತಾರೆ. ಅವುಗಳಿಲ್ಲದೆ ತಾವು ಜೀವಿಸುವುದು ಕಷ್ಟಸಾಧ್ಯ ಎಂಬಷ್ಟರಮಟ್ಟಿಗೆ ಅವುಗಳನ್ನು ಹಚ್ಚಿಕೊಂಡಿದ್ದಾರೆ. ಇವರ ಪತ್ನಿಗೆ ಇದು ಹಿಡಿಸುವದಿಲ್ಲವಾದರೂ ಇವರ ಮಗ ಹಾಗೂ ಮಗಳು ಅವುಗಳನ್ನು ತಮ್ಮ ಸ್ನೇಹಿತರಂತೆ ನೋಡಿಕೊಳ್ಳುತ್ತಾರೆ. ಇಂಥ ಹವ್ಯಾಸದಲ್ಲಿ ಮಕ್ಕಳನ್ನು ಮುಂದುವರಿಯಲು ಬಿಡದೇ ಅವರಿಗೆ ಒಳ್ಳೆಯ ಶಿಕ್ಷಣ ಹಾಗೂ ಉದ್ಯೋಗ ದೊರಕಿಸಬೇಕೆಂಬುದು ಪಾರ್ಥಸಾರಥಿಯವರ ಆಸೆ. ●

(ಆಧಾರ: '**Aside**')



# ನಾಲಿಗೆ

ಮೂವತ್ತೆರಡು ದಂತಗಳ ಬಲವಾದ ಕಾವಲಿನ ನಡುವಿದ್ದರೂ ಈ ಜಾರಿಕೊಳ್ಳುವ ಸ್ವಭಾವದ ಅಂಗ ಪದೇ ಪದೇ ಜಾರಿ ಉಂಟುಮಾಡುವ ಅವಾಂತರಗಳು ಎಷ್ಟೆಂದು ಹೇಳೋಣ!

● ಎಂ. ಜೆ. ಆಲ್ಫೋನ್ಸ್ ಪಿಂಟೋ

ದೊಡ್ಡ ಮನುಷ್ಯರೇ ಹೀಗೆ. ಮಾಡುವ ತಪ್ಪನ್ನೆಲ್ಲ ಮಾಡಿ ಕೊನೆಗೆ 'ಎಂಥ ತಪ್ಪು ಮಾಡಿ ಬಿಟ್ಟೆನಲ್ಲ' ಎಂದು ಕೊರಗುವುದು ಸಹಜ. ದೇವರೂ ಹೀಗೆಯೆ (ಈಗ) ಕೊರಗುತ್ತಿರಬಹುದು. ನನಗೂ ಇದೇ ಕೊರಗು. ನಿಮಗೂ ಇದ್ದರೂ ಇರಬಹುದು.... ದೇವರು ನಮ್ಮನ್ನು ಸೃಷ್ಟಿಸಿದಾಗ ಈ 'ನಾಲಿಗೆ'ಗೆ ಇಷ್ಟೇಕೆ ಪ್ರಾಮುಖ್ಯವಿತ್ತನೆಂಬುದು ನಮಗೆ ಅರ್ಥವಾಗುವುದಿರಲಿ ಸೃಷ್ಟಿಸಿದ ಆತನಿಗೇ ಇದು ಅರ್ಥವಾಗಿದೆಯೋ ಇಲ್ಲವೋ ಗೊತ್ತಿಲ್ಲ. ನಾಲಿಗೆಯ ಬದಲು ಮೂಗಿಗಾದರೂ ಮಹತ್ವವನ್ನು ಕೊಡಬಹುದಿತ್ತು. ನಾಲಿಗೆಗೆ ಹೋಲಿಸಿದರೆ ಮೂಗೇನು ಕಡಿಮೆ? ನಾಲಿಗೆ ರುಚಿ ನೋಡುವ ಹಾಗೂ ಮಾತನ್ನಾಡುವ (ಎರಡು) ಕೆಲಸಗಳನ್ನು ನಿರ್ವಹಿಸಿದರೆ ಮೂಗು ವಾಸನೆ ಹಾಗೂ ಉಸಿರಾಟದ ಕೆಲಸಗಳನ್ನು ನಿರ್ವಹಿಸುವುದಿಲ್ಲವೆ? ಮಾತಾಡದೆ ರುಚಿ ತಿಳಿಯದೆ ಬದುಕಿದರೂ ಬದುಕಬಹುದು. ಆದರೆ? ಉಸಿರಾಟವಿಲ್ಲದೆ ಬದುಕಲು ಹೇಗೆ ಸಾಧ್ಯ? ಹೋಗಲಿ ಮೂಗಿಗೆ ಬೇಡ, ಕಿವಿಗಾದರೂ ಪ್ರಾಮುಖ್ಯ ಕೊಡಬಹುದಿತ್ತು. ಅದಕ್ಕೂ ಬೇಡ, ಜಗತ್ತಿನ ಆಗು ಹೋಗುಗಳ ಸ್ಪಷ್ಟ ಚಿತ್ರಣ ನೀಡುವ ಕಣ್ಣುಗಳಿಗಾದರೂ ಆ ದೇವರು ಪ್ರಾಮುಖ್ಯ ಕೊಟ್ಟು ಅದರಲ್ಲೇ ನಮ್ಮೆಲ್ಲರ ವ್ಯಕ್ತಿತ್ವವನ್ನು ಅಡಗಿಸಿಡಬಹುದಿತ್ತು. ಏನೋ ಆ ದೇವರು ಮಾಡಿದ ತಪ್ಪಿಗೆ ನಾವೆಲ್ಲರೂ ಇಂದು ಬೈದಾಡಿಕೊಂಡು ಅಸಮಾಧಾನದಿಂದ ಇರಬೇಕಾಗಿದ. ದೇವರು ನಾಲಗೆಗೆ ಕೊಟ್ಟಿರುವ ಪ್ರಾಮುಖ್ಯದ ಬಗ್ಗೆ ನನಗಂತೂ ಅಸಮಾಧಾನವಿದೆ. ನಿಮಗೆ...? ಇರಲಿ ದೇವರ ಇಚ್ಛೆ ಅಂದ ಮೇಲೆ ಸ್ವೀಕರಿಸಿಕೊಳ್ಳಬೇಕು.

ನಾಲಿಗೆಗಳ ವಿಧಗಳೋ ಲೆಕ್ಕವಿಲ್ಲದ್ದಷ್ಟು. ಅದರಲ್ಲಿ ಮುಖ್ಯವಾಗಿ ಚಿಕ್ಕ ಕಂದಮ್ಮಗಳ ತೊದಲು ಚಿನ್ನ ನಾಲಿಗೆ, ಪಕ್ಷಪಾತ ಮಾಡುವ

ದೊಡ್ಡವರ ಬಲಿತ ನಾಲಿಗೆ, ಗಂಡಸರ ಐವತ್ತು ನಾಲಿಗೆಗಳನ್ನು ಸೋಲಿಸಲು ಶಕ್ತವಾದ ಹೆಂಗಸರ ರಾಜಕೀಯದ ನಾಲಿಗೆ, ವಿಚಾರವಂತರ ನಾಲಿಗೆ, ವಚನಭ್ರಷ್ಟರ ನಾಲಿಗೆ ಹೀಗೆ ಜಿಹ್ವಾ ವೈವಿಧ್ಯದ ಬಗ್ಗೆ ಹೇಳುತ್ತಾ ಹೋದರೆ ಪಟ್ಟಿ ಬೆಳೆಯುತ್ತಲೇ ಹೋದೀತು. ಆದರೆ ಒಂದು ಮಾತಂತೂ ಸತ್ಯ - ದೇವರಿಗೆ ಖಂಡಿತಾ ಬುದ್ಧಿ ಯಿಲ್ಲವೆಂಬುದು. ನಮ್ಮ ದೇಹದ ಎಲ್ಲ ಇಂದ್ರಿಯಗಳಿಗೂ ಎಲುಬನ್ನು ಕೊಟ್ಟ. ಆದರೆ ಅದೇಕೋ ನಾಲಿಗೆಗೆ ಎಲುಬನ್ನು ಕೊಡದೆ ತುಂಬಾ ದೊಡ್ಡ ತಪ್ಪನ್ನು ಮಾಡಿಬಿಟ್ಟ. ತಪ್ಪಂತೂ ಮಾಡಿದ್ದಾಯ್ತು, ಸತ್ಯವನ್ನೇ ನುಡಿಯುವಂತೆ, ಸುಳ್ಳಿನ ಕಡೆಗೆ ತಿರುಗದಂತೆ ನಾಲಿಗೆಗೆ ಒಂದು ನಟ್ ಬೋಲ್ಟನ್ನಾದರೂ ಹಾಕಿದನೇ...? ಅದೂ ಇಲ್ಲ; ದೇವರೇನಾದರೂ ನನ್ನೆದುರು ಕಂಡರೆ ಅವನು ಕೊಟ್ಟ ನಾಲಿಗೆಯಿಂದಲೇ ಆತನನ್ನು ಚೆನ್ನಾಗಿ ಬೈದು ಬಿಡಬೇಕೆಂದು ಕೊಂಡಿದ್ದೇನೆ.

ದೇವರ ಮೇಲೆ ಹೆಚ್ಚು ಭಕ್ತಿಯಿರುವುದರಿಂದಲೋ ಏನೋ ನಾವು ಭಾರತೀಯರು ನಾಲಗೆಯನ್ನು ಉಪಯೋಗಿಸುವುದರಲ್ಲಿ ತುಂಬಾ ನಿಪುಣರು. ಆದುದರಿಂದಲೇ ನಮ್ಮ ರಾಜಕೀಯ ವ್ಯಕ್ತಿಗಳು ಅಂತಾರಾಷ್ಟ್ರೀಯ ಮಟ್ಟದಲ್ಲಿ ಉತ್ತಮ ಭಾಷಣಕಾರರಾಗಿದ್ದಾರೆ. ತಮ್ಮ ನಾಲಿಗೆಯ ಚಮತ್ಕಾರದಿಂದ ಏನನ್ನೂ ಸಾಧಿಸಲು ಹಿಂಜರಿಯದೆ ಮುನ್ನುಗ್ಗಿ ತಮ್ಮ - ವಚನಭ್ರಷ್ಟ - ನಾಲಗೆಯಿಂದ ಜನರನ್ನು ಮರುಳುಗೊಳಿಸಿ ಓಟುಗಳನ್ನೇನೋ ಗಿಟ್ಟಿಸಿಬಿಡುತ್ತಾರೆ. ಆದರೆ ಅಲ್ಡಸ್ ಹಕ್ಸ್‌ಲಿಯ ಮಾತಿನಂತೆ ''ಸುಳ್ಳಿನ ಕಾನೂನನ್ನು ಮಾಡಿ ಸತ್ಯದ ಯುಗವನ್ನು ತರಲು ಸಾಧ್ಯವಿಲ್ಲ.'' ನಮ್ಮ ರಾಜಕೀಯ ಪ್ರಚಂಡರು ಇನ್ನಾದರೂ ಈ ಮಾತನ್ನು ಅರ್ಥಮಾಡಿಕೊಳ್ಳಬೇಕಾಗಿದೆ. ನಮ್ಮ ಜನರೂ ಅಷ್ಟೆ, ಶೇಕ್ಸ್‌ಪಿಯರನ ''ಜಾಣ ಬೀದಿಯಲ್ಲಿ ನಿಂತು ಕೂಗಿದರೂ ಕಿವಿಯರಳುವುದಿಲ್ಲ, ಆದರೆ ಕ್ಷುಲ್ಲಕತನದ ಮಾತುಗಳು ಎಷ್ಟು ದೂರದಿಂದ ಕೇಳಿದರೂ ಕಿವಿ ಜಾಗೃತವಾಗುತ್ತದೆ'' ಎಂಬ ಮಾತಿನಂತೆ ಕೆಟ್ಟ ಮಾತುಗಳ ಕಡೆಯೇ ತಮ್ಮ ಗಮನವನ್ನು ಕೇಂದ್ರೀಕರಿಸಿರುತ್ತಾರೆ. ರಾಜಕೀಯ ವ್ಯಕ್ತಿಗಳನ್ನು ಕುರಿತು ಚರ್ಚಿಲ್ ''ಕೇವಲ ಮಾತುಗಳನ್ನು ದೇಶಕ್ಕೆ ನೀಡುವುದರಿಂದ ಏನೂ ಸಾಧಿಸಲಾಗದು. ನೇತ್ರರು ಬೆವರನ್ನು ಸುರಿಸಲು ಸಿದ್ಧರಾಗಬೇಕು'' ಎನ್ನುತ್ತಾರೆ. ನಾಲಿಗೆಯನ್ನು ಪಳಗಿಸಿಕೊಂಡ ಭಾರತೀಯ ರಾಜಕೀಯ ವ್ಯಕ್ತಿಗಳು ಬೆವರನ್ನು ಸುರಿಸಿ ನಾಲಿಗೆಯನ್ನು ಒಳ ದೂಡಬೇಕು.

ಈ ನಾಲಿಗೆ ಮಾಡುವ ಕೆಲಸಗಳು ಒಂದೇ ಎರಡೇ? ನೆಮ್ಮದಿಯಾಗಿರುವ ಸಂಸಾರಕ್ಕೆ ಹುಳಿ ಹಿಂಡುವುದರಿಂದ ಹಿಡಿದು ಪ್ರಪಂಚದ ಇತರ ಎಲ್ಲಾ ಮನಸ್ತಾಪಗಳಿಗೂ ಪ್ರಮುಖ ಕಾರಣವಾಗಿದೆ. ಒಂದು ವೇಳೆ ನಾಲಿಗೆಯೇ ಇರದಿದ್ದರೆ ತೊಂದರೆಗಳೇ ಇರಲಿಲ್ಲ. ಪ್ರಾಣಿಗಳಂತೆ ನಾವೂ ಸುಖವಾಗಿರಬಹುದಿತ್ತು. ವೈಮನಸ್ಸಿನ ಸಮಸ್ಯೆಗಳೇ ಇರುತ್ತಿರಲಿಲ್ಲ. ನಮ್ಮ ಸರ್ಕಾರಕ್ಕೂ ಅಷ್ಟೆ, ಸತ್ಯವನ್ನು ಹೊರ ತರಲು ಕೋರ್ಟ್ ಕಛೇರಿಗಳೆಂಬ ನ್ಯಾಯಾಲಯ ತೆರೆದು ಸತ್ಯಹರಿಶ್ಚಂದ್ರನನ್ನು ಹುಡುಕಿಕೊಂಡು ಹೋಗುವ ಕೆಲಸವಿರುತ್ತಿರಲಿಲ್ಲ. ನಾಲಿಗೆ ಕೇಡು ಮಾಡುವ ಹಾಗೆಯೇ ಒಳ್ಳೆಯದನ್ನು ಮಾಡಿಯೇ ಮಾಡುತ್ತದೆ. ಕೆಟ್ಟತನದ ಮುಂದೆ ಇವು ಕಣ್ಣಿಗೆ ಕಾಣಿಸದವಾಗಿರುತ್ತವೆ. ''ನೂರು ಸುಳ್ಳು ಹೇಳಿ ಒಂದು ಮದುವೆ ಮಾಡು'' ಎಂಬ ಜನಪ್ರಿಯ ಗಾದೆಯಂತೆ ಸಂದರ್ಭಕ್ಕನುಗುಣವಾಗಿ ನಾವು ಸುಳ್ಳನ್ನು ಹೇಳಬೇಕಾಗುತ್ತದೆ. ಭಗವಾನ್ ಶ್ರೀಕೃಷ್ಣ ನಾಲಿಗೆಯನ್ನು ಕುರಿತು ಹೀಗೆನ್ನುತ್ತಾನೆ.

''ಸತ್ಯವನ್ನು ಹೇಳಬೇಕಾದ್ದೇನೋ ಸರಿ. ಅನೃತವನ್ನೂ ಹೇಳಬೇಕಾಗುತ್ತದೆ. ಸತ್ಯದಂತೆ ಸುಳ್ಳಿನಿಂದ ಒಳ್ಳೆಯದಾಗುವ ಸಂದರ್ಭಗಳುಂಟು. ಸುಳ್ಳಿನಂತೆ ಸತ್ಯದಿಂದ ಕೇಡಾಗುವ

ಸಂದರ್ಭವೂ ಉಂಟು...

ನಾಲಿಗೆ ಮಾತುಗಳನ್ನು ಹೇಗೆ ಬೇಕಾದರೂ ತಿರುಗಿಸುವುದರಲ್ಲಿ ಪಳಗಿಕೊಂಡಿದೆ. ನಮ್ಮ ನಾಲಿಗೆ ನುಡಿಯುವ ಒಂದೊಂದು ಮಾತಿನಿಂದಲೂ ನಮ್ಮ ವ್ಯಕ್ತಿತ್ವ ಹೊರಬೀಳುತ್ತದೆ. ಚಿಂತಕರು ಹೇಳಿದಂತೆ ನಾಲಿಗೆಯಿಂದ ಮಾತು ಬಂತೆಂದರೆ ಮುಗಿಯಿತು - ಅದು ಒಡೆದ ಮುತ್ತಿನಂತೆ. ನಮ್ಮ ಸಮಾಜದಲ್ಲಿ ಕೆಲವರು ಚಾಣಾಕ್ಷತನದಿಂದ ಮಾತನಾಡಿದರೆ ಕೆಲವರು ತಮ್ಮ ನಾಲಿಗೆಯನ್ನು ಉಪಯೋಗಿಸಲರಿಯದೆ ಪೇಚಿಗೆ ಸಿಕ್ಕಿ ಒದ್ದಾಡುತ್ತಾರೆ. ಇಂತಹವರಿಗೆ ಸರ್ವಜ್ಞನ

**"ಮಾತು ಬಲ್ಲಾತನಿಗೆ ಮಾತೊಂದು ಮಾಣಿಕವು**
**ಮಾತು ತಾನರಿಯದವನಿಗೆ ಮಾಣಿಕವು**
**ತೂತು ಬಿದ್ದಂತೆ ಸರ್ವಜ್ಞ"**

ಈ ಮಾತುಗಳೂ ಅಲ್ಲದೆ,

**"ಮಾತು ಬಲ್ಲಾತಂಗೆ ಏತವದು ಸುರಿದಂತೆ**
**ಮಾತಾಡಲರಿಯದಾತಂಗೆ ಬರಿ ಏತ**
**ನೇತಾಡಿದಂತೆ ಸರ್ವಜ್ಞ"**

- ಎಂಬ ಮಾತುಗಳು ನಾಲಿಗೆಯ ಬುದ್ಧಿವಂತಿಕೆಯನ್ನು ಎತ್ತಿ ತೋರಿಸುತ್ತವೆ. ನಾಲಿಗೆಯ ಮಿತಿ ಮೀರಿದ ಮಾತಿನಿಂದ ಕೋಪ ಉಂಟಾಗುತ್ತದೆ. ಆದರೆ ಈ ನಾಲಿಗೆಯಿಂದುಂಟಾದ ಕೋಪದಿಂದ ಉಂಟಾಗುವ ಅನಾಹುತಗಳೇ ಹೆಚ್ಚು. ಇದನ್ನು ಕುರಿತು ಸರ್ವಜ್ಞ ಹೇಳುವ ಮಾತು ಎಷ್ಟೊಂದು ಸತ್ಯ!

**"ಒಡಲೆಂಬ ಹುತ್ತಕ್ಕೆ ನುಡಿವ ನಾಲಿಗೆ ಸರ್ಪ**
**ಕಡು ರೋಷವೆಂಬ ವಿಪರೀತ ಸಮತೆ**
**ಗಾರುಡಿಗನಂತಕ್ಕು ಸರ್ವಜ್ಞ"**

ನಮ್ಮ ನಾಲಿಗೆಯನ್ನು ನಾವು ಸಂದರ್ಭಕ್ಕೆ ತಕ್ಕಂತೆ ಉಪಯೋಗಿಸಬೇಕು. ಸಮಯಕ್ಕೆ ಸಿಗದ ಮಾತು ಊಟಕ್ಕೆ ಸಿಗದ ಉಪ್ಪಿನಕಾಯಿಯಂತಾಗುವುದರಲ್ಲಿ ಸಂಶಯವಿಲ್ಲ. ಇದನ್ನು ಕುರಿತು ಸರ್ವಜ್ಞ ಹೇಳುತ್ತಾನೆ:

**"ಹೊತ್ತಿಗೊದಗಿದ ಮಾತು ಸತ್ತವನು ಎದ್ದಂತೆ**
**ಹೊತ್ತಾಗಿ ನುಡಿದ ಮಾತು ಕೈ ಜಾರಿದ**
**ಮುತ್ತಿನಂತಿಹುದು ಸರ್ವಜ್ಞ"**

## ಪ್ರೇಮ - ಇವರು ತಿಳಿದಂತೆ

*"ಪ್ರೇಮ ಮನಸ್ಸಿನ ಒಂದು ದೋಷ."*

**ಕಾಸ್‌ಗ್ರೀವ್**

*"ನಿಜವಾದ ಪ್ರೇಮ ದೆವ್ವದಂತೆ. ಅದರ ಬಗ್ಗೆ ಎಲ್ಲರೂ ಮಾತನಾಡುತ್ತಾರೆ, ಆದನ್ನು ಯಾರೂ ಕಾಣರು."*

**ಲಾರೋಚೆ ಚೌಕಾಲ್ಡ್**

*"ನಾವು ಪ್ರೇಮಿಸಲ್ಪಟ್ಟಿದ್ದೇವೆ ಎಂದು ತಿಳಿದುಕೊಳ್ಳುವ ಘಳಿಗೆಯೇ ಜೀವನದ ಸುಖಮಯ ಘಳಿಗೆ."*

**ವಿಕ್ಟರ್ ಹ್ಯೂಗೋ**

*"ಪ್ರೇಮ ಯಾವಾಗ ನಿಮ್ಮನ್ನು ಸನ್ನೆ ಮಾಡಿ ಕರೆಯುವುದೋ ಆಗ ಅದನ್ನು ಹಿಂಬಾಲಿಸಬೇಕು."*

**ಖಲೀಲ್ ಜಿಬ್ರಾನ್**

*"ಪ್ರೇಮವೆಂದರೆ ಒಡೆಯಲಾಗದ ಒಗಟು. ಇದು ಕ್ಷಣಿಕವೋ, ಅಮರವೋ ದೇವರೇ ಬಲ್ಲ."*

**ವಿ. ಕೃ. ಗೋಕಾಕ**

*"ಪ್ರತಿಯೊಬ್ಬನು ತಾನೂ ಪ್ರೇಮಿಸುವ ವಸ್ತುವನ್ನು ಕೊಲ್ಲುತ್ತಾನೆ."*

**ಆಸ್ಕರ್ ವೈಲ್ಡ್**

*"ಪ್ರೇಮಕ್ಕೆ ಕಣ್ಣಿಲ್ಲ. ಪ್ರೇಮಿಗಳಿಗೆ ತಮ್ಮ ತಪ್ಪು ಕಾಣುವುದಿಲ್ಲ."*

**ಷೇಕ್ಸ್‌ಪಿಯರ್**

ಸಂಗ್ರಹ: **ವಿಜಯಕುಮಾರ್ ಜೈನ್**

ಈ ನಾಲಿಗೆಯ ಕೇಡನ್ನು ಕುರಿತು ಚಿಂತಿಸದವರ್‍ಯಾರು? ಸುಮಾರು ವರ್ಷಗಳ ಹಿಂದೆಯೇ ತಮಿಳು ಕವಿ ತಿರುವಳ್ಳುವರ್ ತನ್ನ "ತಿರುಕ್ಕುರುಳ್" ಎಂಬ ಕೃತಿಯಲ್ಲಿ- "ಬೆಂಕಿಯಿಂದ ಸುಟ್ಟ ಹುಣ್ಣು ಕಣ್ಣಿಗೆ ಕಾಣಿಸಿ ವಾಸಿಯಾಗುತ್ತದೆ.

ಆದರೆ ನಾಲಿಗೆಯಿಂದ ಸುಟ್ಟ ಹುಣ್ಣು ಕಣ್ಣಿಗೆ ಕಾಣದೆ ಶಾಶ್ವತವಾಗಿ ವಾಸಿಯಾಗದೆ ಉಳಿದಿರುತ್ತದೆ'' ಎನ್ನುತ್ತಾನೆ.

ಶತಮಾನಗಳಿಂದ ಇಂಥ ಮಾತನ್ನು ಕೇಳಿಯೂ ನಮ್ಮ ನಾಲಿಗೆ ಯಾವ ವಿಷಯಕ್ಕೂ ಬಗ್ಗದೆ ತನ್ನ ಕಾರ್ಯವನ್ನು ಮುಂದುವರೆಸಿಕೊಂಡು ಬಂದಿದೆ. ಆಗಿನಿಂದಲೂ ಮನುಷ್ಯನ ಪ್ರಯತ್ನ ವಿಫಲಗೊಂಡು ಜಯವಂತೂ ನಾಲಿಗೆಯ ಪಾಲಾಗಿಯೇ ಉಳಿದಿದೆ.

''ಯಾವುದನ್ನೂ ನಿಯಂತ್ರಿಸದಿದ್ದರೂ ಪರವಾಗಿಲ್ಲ. ನಾಲಿಗೆಯನ್ನು ನಿಯಂತ್ರಿಸದಿದ್ದರೆ ಬಿಡಿಸಲಾಗದ ಆಘಾತಕ್ಕೆ ಸಿಕ್ಕಿ ಹಾಕಿಕೊಳ್ಳುವೆ'' ತಿರುವಳ್ಳುವರ್‌ರ ಈ ಮಾತನ್ನು ಕೇಳಿ ಅನೇಕರು ನಾಲಿಗೆಯನ್ನು ನಿಯಂತ್ರಿಸಲು ಪ್ರಯತ್ನಪಟ್ಟು ವಿಫಲರಾಗಿದ್ದಾರೆ. ನಾನೂ ಅಷ್ಟೆ, ಸಾಕಷ್ಟು ಸಲ ಸೋತಿದ್ದೇನೆ. ಅದೆಷ್ಟೋ ಬಾರಿ ಮಾತನ್ನೇ ಆಡಬಾರದೆಂದು ನಿರ್ಧರಿಸಿ ಪ್ರಯತ್ನಪಟ್ಟು ವಿಫಲನಾಗಿದ್ದೇನೆ. ನಾಲಿಗೆಯನ್ನು ನಿಯಂತ್ರಿಸಿದರೆ ಜೀವನವನ್ನು ಸುಲಭವಾಗಿ ಜಯಿಸಿ ಇತರರ ನಿಷ್ಠುರದಿಂದ ದೂರವಾಗಬಹುದೆಂದು ತಿಳಿದಿದ್ದರೂ ನಾವೆಲ್ಲ ವಿಫಲರಾಗಿರುವುದು ನಮ್ಮ ದುರಾದೃಷ್ಟ.

ತಿರುವಳ್ಳುವರ್‌ರ ಮತ್ತೊಂದು ಮಾತು - ''ನಾಲಿಗೆಗೆ ಒಳ್ಳೆಯ ಮಾತುಗಳು ಬಂದರೂ ಕೆಟ್ಟ ಮಾತನ್ನಾಡುವುದು ಮರದಲ್ಲಿದ್ದ ಹಣ್ಣು-ಕಾಯಿಗಳಲ್ಲಿ ಕಾಯಿಯನ್ನೇ ಆಯ್ದುಕೊಂಡಂತೆ'' - ಎಂಬ ಮಾತು ಎಷ್ಟೊಂದು ಸತ್ಯ!

ನಾವು ನಾಲಿಗೆಯನ್ನು ಹೇಗೆ ಬೇಕಾದರೂ ಉಪಯೋಗಿಸಿಕೊಳ್ಳಬಹುದು. ಆದರೆ ಹೆಚ್ಚಾಗಿ ನಿರುಪಯುಕ್ತ ಮಾತುಗಳಿಗೆ, ತರಲೆ, ಹರಟೆಗಳಿಗೆ ಉಪಯೋಗಿಸುತ್ತೇವೆಯೇ ವಿನಾ ಒಳ್ಳೆಯದಕ್ಕೆ ಬಳಸುವುದು ಕಡಿಮೆ. ದಿನಬೆಳಗಾದರೆ ಸುಸಂಸ್ಕೃತ ನುಡಿಗಳನ್ನು ಕೇಳುತ್ತೇವೆ. ಆದರೆ ಕೇಳಿ ಆಚರಣೆಗೆ ತರುವುದಿಲ್ಲ. ಇದರ ಬಗ್ಗೆ ಯಾರನ್ನಾದರೂ ಪ್ರಶ್ನಿಸಿದರೆ,

''ಯಾಕೆ ಸ್ವಾಮಿ ನಿಮಗೆ ಇಷ್ಟೊಂದು ಚಿಂತೆ? ನೀವು ಮಾತಾಡ್ಬೇಡಿ ಅಷ್ಟೆ. ಕಾಲ ಕೆಟ್ಟೋಯ್ತು'' ಎನ್ನುತ್ತಾರೆ. ಆದರೆ ವಿವೇಕಾನಂದರ ಈ ಮಾತು ''ಕಾಲ ಕೆಟ್ಟಿತೆಂದು ಹೇಳುತ್ತಾರೆ, ಆದರೆ ಕಾಲ ಕೆಡದು. ಅದೇ ಸೂರ್ಯ ಚಂದ್ರರು, ಅದೇ ಭೂಮಿ, ಅದೇ ಲೋಕ, ಆದರೆ ಕೆಡುವುದು ಜನರ ನಡೆನುಡಿ ಆಚಾರ ವಿಚಾರಗಳು ಮಾತ್ರ.''

ನಮ್ಮ ಹಿರಿಯರು ಕಿರಿಯರನ್ನು ಕುರಿತು ''ಅಯ್ಯೋ ನಮ್ಮ ಕಾಲದಾಗ ಎಷ್ಟೊಂದು ಭಯ ಭಕ್ತಿ ಇತ್ತು ಈಗಿನ ಕಾಲದ ಮಕ್ಕಳ ನಾಲಿಗೆಗೆ ಹೇಳೋಕಾಗೋಲ್ಲ'' ಎನ್ನುತ್ತಾರೆ. ನಮ್ಮೆಲ್ಲರ ನಾಲಿಗೆಗೆ ಒಳ್ಳೆ ವಿಚಾರಗಳು ಸಿಗದೆ ಕೆಳ ದರ್ಜೆಯ ವಿಚಾರಗಳೇ ಪ್ರಿಯವಾಗಿವೆ. ಒಳ್ಳೆಯ ಕೆಲಸಕ್ಕೆ ಮುಂದೆ ಬರದೆ ನಾಲಿಗೆ ಕೆಟ್ಟ ಕೆಟ್ಟ ಕಾರ್ಯಗಳನ್ನು ಮಾಡಲು ಮುಂದೆ ಬರುತ್ತದೆ. ಬಹಳ ವರ್ಷಗಳ ಹಿಂದೆಯೇ ಪುರಂದರ ದಾಸರು ಈ ನಾಲಿಗೆಯ ಕಾರ್ಯವನ್ನು ಕುರಿತು

**"ಆಚಾರವಿಲ್ಲದ ನಾಲಿಗೆ.... ನಿನ್ನ**
**ನೀಚ ಬುದ್ಧಿಯ ಬಿಡು ನಾಲಿಗೆ...."**

ಎಂದು ಬರೆದರು. (ಪಾಪ, ಬೆಂಗಳೂರು ಆಕಾಶವಾಣಿಯವರು ಪುರಂದರದಾಸರ ಈ ಹಾಡನ್ನು ಆಗಾಗ್ಗೆ ಪ್ರಸಾರ ಮಾಡುತ್ತಿದ್ದರು. ಕೊನೆಗೆ ''ಬೆಂಗಳೂರು ಸ್ಟೇಷನ್‌ನವರಿಗೆ ಬೇರೆ ಪ್ಲೇಟೇ ಸಿಗೋದಿಲ್ವಾ? ಒಳ್ಳೆ ಲವ್ ಸಾಂಗು ಹಾಕೋದು ಬಿಟ್ಟು ಈ ನಾಲಿಗೆ ಹಾಡು ಹಾಕಿದ್ದಾರಲ್ಲಾ'' ಎಂಬ ನಿಂದನೆಗೂ ಒಳಗಾದರು.)

ಮುಸಲ್ಮಾನರ ಪವಿತ್ರ ಗ್ರಂಥವಾದ ಖುರಾನಿನಲ್ಲಿ ಮಹಮದ್ ಪೈಗಂಬರ್ ''ನಾಲಿಗೆ ಎಷ್ಟು ಒಳ್ಳೆಯದೋ ಅಷ್ಟೇ ಕೆಟ್ಟದ್ದು'' ಎನ್ನುತ್ತಾರೆ. ಎಲುಬಿಲ್ಲದ ನಾಲಿಗೆಯೆಂದು ಸುಳ್ಳು ಹೇಳಲು ಹೊರಟರೆ ಪೇಚಿಗೆ ಸಿಕ್ಕಿ ಹಾಕಿಕೊಳ್ಳುವುದಂತೂ ಖಂಡಿತ. ''ಸುಳ್ಳಿಗೆ ಮೋಟುಗಾಲು ಆದ್ದರಿಂದಲೇ ಅದನ್ನು ಬೇಗನೆ ಹಿಡಿಯಬಹುದು''

## 'ಮೃಗಾಲಯ'

*ಮೃಗಗಳೆಲ್ಲ*
*ಒಂದೊಂದಾಗಿ*
*ಲಯವಾಗಿ*
*ಕೊನೆಗೆ ಉಳಿದದ್ದು !*

● *ಎಚ್. ಆರ್. ದೊರೆಸ್ವಾಮಿ*

ಎಂಬ ಡಚ್ ಗಾದೆಯಂತೆ ನಮ್ಮ ನಾಲಿಗೆಯಿಂದ ಸುಳ್ಳು ಹೇಳಲು ಹೊರಟರೆ ಸೋಲಂತೂ ಕಟ್ಟಿಟ್ಟ ಬುತ್ತಿ.

ಇಷ್ಟು ಹೊತ್ತು ಎಲ್ಲರೂ ಮಾತನಾಡಲೇಬಾರದೆಂದು ಹೇಳುತ್ತಿದ್ದಾರೆಂದು ನಿಮಗೆ ಅನಿಸಿರಬಹುದು. ನಿಜ, ನಾಲಿಗೆಯ ಉಪಯೋಗ ಕಡಿಮೆಯಾದಷ್ಟು ಒಳ್ಳೆಯದೆ. ಆದರೆ ಸ್ಟೀವನ್‌ಸನ್‌ನ ಪ್ರಕಾರ "ಮನಬಿಚ್ಚಿ ಮಾತನಾಡುವುದು ಮಾನವನ ಪ್ರಥಮ ಕರ್ತವ್ಯ." ಮನಬಿಚ್ಚಿ ಮಾತನಾಡಬೇಕೇ ವಿನಾ ಮನಸ್ಸಿಗೆ ಚುಚ್ಚುವಂತೆ ಮಾತನಾಡಬಾರದು. ಬಾಯಿಯೆಂಬ ಬೋನಿನಲ್ಲಿ ಬಂಧಿಸಲ್ಪಟ್ಟಿರುವ ಭಯಂಕರ ಮೃಗವೇ ನಾಲಿಗೆ. ಬೋನನ್ನು ಅಗತ್ಯವಿಲ್ಲದೆ ತೆಗೆಯಬಾರದು. ಮೂರಿಂಚಿನ ನಾಲಿಗೆ ಆರಡಿ ಮನುಷ್ಯನನ್ನೂ ಕೊಲ್ಲಬಲ್ಲುದು. ಆದುದರಿಂದ ನಮ್ಮ ನಾಲಿಗೆಯನ್ನು ಎಷ್ಟು ಬೇಕೋ ಅಷ್ಟೇ ಉಪಯೋಗಿಸಬೇಕು." ಅರಬ್ಬೀ ಗಾದೆಯಂತೆ "ಕೇಳಿದರೆ ನಮಗೆ ಲಾಭ, ಮಾತನಾಡಿದರೆ ಇತರರಿಗೆ ಲಾಭ." ಆದುದರಿಂದ ಮಾತನಾಡದಿರುವುದು ಒಂದು ರೀತಿಯಲ್ಲಿ ಉತ್ತಮವೇ. ಜ್ಞಾನಿಗಳು ತಮ್ಮ ಗುಣಧರ್ಮಗಳನ್ನು ತಮ್ಮ ಹೃದಯದಲ್ಲಿ ಮುಚ್ಚಿಕೊಂಡಿರುತ್ತಾರೆ. ಆದರೆ ಮೂರ್ಖರು? ಅವರು ತಮ್ಮ ಗುಣಗಳನ್ನು ತಮ್ಮ ನಾಲಿಗೆಯ ಮೇಲೆ ಪ್ರದರ್ಶಿಸಿಕೊಳ್ಳುತ್ತಾರೆ. ಅವರಂತಾಗದಿರಲು ನಾವು ಮಾತನಾಡದೆ ನಾಲಿಗೆಗೆ ಕೀಲಿ ಹಾಕಿ ಹೃದಯದಲ್ಲಿ ಅಡಗಿಸಿಕೊಂಡಿರುವುದು ಉತ್ತಮ.

ನಾಲಿಗೆಯನ್ನು ಕುರಿತು ಬೈಬಲ್ ಹೀಗೆನ್ನುತ್ತದೆ: "ಜೀವನದಲ್ಲಿ ಸಂತೋಷಪಟ್ಟು ಸುದಿನ ನೋಡುವುದಕ್ಕೆ ಇಷ್ಟ ಉಳ್ಳವನು ಕೆಟ್ಟದ್ದನ್ನು ನುಡಿಯದಂತೆ ತನ್ನ ನಾಲಿಗೆಯನ್ನು ವಂಚನೆಯ ಮಾತಾಡದಂತೆ ತುಟಿಗಳಿಂದ ಬಿಗಿ ಹಿಡಿಯಲಿ."

ಷಣ್ಮುಖಸ್ವಾಮಿಗಳು ನಾಲಿಗೆ ನುಡಿಯುವ ಮಾತನ್ನು ಕುರಿತು,

**"ನುಡಿಯಬೇಕು ಸತ್ಯಸಮಾಚಾರವುಳ್ಳವರ**
**ಅನುಭಾವವ,**
**ನುಡಿಯಬೇಕು ಭಕ್ತಿಯು ಮುಕ್ತಿಯುಳ್ಳವ**
**ರೊಡನೆ ಅನುಭಾವವ**
**ನುಡಿಯಬೇಕು ಸಾಧುಸಜ್ಜನರ ಸದ್ಭಕ್ತ**
**ಶರಣರೊಡನೆ ಅನುಭಾವವ**
**ನುಡಿಯಬೇಕು ನಮ್ಮ ಅಖಂಡೇಶ್ವರ**
**ಲಿಂಗವ ಕೊಡಬೇಕೆಂಬ**
**ಬಯಕೆಯುಳ್ಳವರೊಡನೆ ಶಿವಾನುಭಾವವ"**

ಎನ್ನುತ್ತಾರೆ.

ಕ್ಷಮಿಸಿ, ನಿಮಗೆ ಈಗಾಗಲೇ ಬೋರಾಗಿರಬಹುದು: ಇದೇನು ಇವರು ಬರಿ ವಚನಗಳನ್ನು ಅವರಿವರು ಹೇಳಿದ ಮಾತನ್ನು ಹೇಳುತ್ತಿದ್ದಾರಲ್ಲಾ ಎಂದು. ನಮ್ಮದು ಆಚಾರ ವಿಚಾರಗಳೆಂಬ ಗೋಡೆಯ ಮಧ್ಯೆ ಇರುವ ಸಮಾಜ. ಮೊದಲು ಹಿರಿಯರು ವಿಚಾರವಂತರು ಹೇಳಿದ ಮಾತುಗಳನ್ನು ಹೇಳಲೇಬೇಕು. ನಮ್ಮ ಸಮಾಜದಲ್ಲಿ ವೈಜ್ಞಾನಿಕವಾಗಿ ಚಿಂತಿಸುವುದಕ್ಕಿಂತಲೂ ಹಿರಿಯರ ಮಾತಿಗೇ ಬೆಲೆ. ಆದುದರಿಂದಲೇ ಮೊದಲು ಆ ಎಲ್ಲ ಮಾತನ್ನು ಹೇಳಿದ್ದೇನೆ. ಈಗ ವೈಜ್ಞಾನಿಕವಾಗಿ ನಾಲಿಗೆಯ ವಿಚಾರದತ್ತ ನಮ್ಮ ಗಮನವನ್ನು ಹರಿಸೋಣ.

ನಾಲಿಗೆಯು ಮಾತನಾಡುವುದರ ಜೊತೆಗೆ ರುಚಿಯನ್ನು ಗ್ರಹಿಸುತ್ತದೆ. ರುಚಿಯನ್ನು ಗ್ರಹಿಸುವ ಜ್ಞಾನೇಂದ್ರಿಯ ರಸಾಂಕುರಗಳು ನಾಲಿಗೆಯ ಶ್ಲೇಷ್ಮದ ಪೊರೆಯಲ್ಲಿ ಅಡಗಿವೆ. ಇವು ಜೀವಕೋಶಗಳಿಂದ ಆವರಿಸಲ್ಪಟ್ಟಿವೆ. ಆ ಆಧಾ

**ತರಂಗಾಂತರಂಗ**

*ಮನದ ತಿಳಿನೀರಿಗೆ*
*ಮಾತುಗಳನ್ನೆಸೆದಾಗ*
*ನೋವಿನ ತರಂಗಗಳೆದ್ದವು.*

*● ಕೆ.ಜಿ. ರೇಣುಕಾಂಭ*

ರಿತ ಜೀವಕೋಶಗಳು ಜ್ಞಾನವಾಹಿ ನರಕೋಶದೊಂದಿಗೆ ಸಂಪರ್ಕ ಹೊಂದಿದೆ. ಶ್ಲೇಷ್ಮದಲ್ಲಿ ಕರಗಿದ ಆಹಾರಕಣಗಳು ರಸಾಂಕುರದ ಮೂಲಕ ಪ್ರವೇಶಿಸಿ ರುಚಿಯನ್ನು ಗ್ರಹಿಸುವ ಜೀವಕೋಶಗಳನ್ನು ಪ್ರಚೋದಿಸುತ್ತದೆ. ಇವು ವಿದ್ಯುತ್ ಸಂದೇಶಗಳಾಗಿ ಪರಿವರ್ತನಗೊಂಡು ಜ್ಞಾನವಾಹಿ ನರಗಳ ಮೂಲಕ ಮಿದುಳನ್ನು ತಲುಪಿ ನಮಗೆ ರುಚಿಯ ಅನುಭವವಾಗುತ್ತದೆ.

ನಾಲಿಗೆಯ ಮುಂದಿನ ಭಾಗವು ಸಿಹಿಯನ್ನು ಗ್ರಹಿಸಿದರೆ ಮುಂಭಾಗದ ಅಂಚಿನಲ್ಲಿ ಉಪ್ಪನ್ನು ಗ್ರಹಿಸುತ್ತದೆ. ನಾಲಿಗೆಯ ಪಕ್ಕದಲ್ಲಿ ಹುಳಿ ರುಚಿಯ ಪ್ರದೇಶವಿದ್ದರೆ ಹಿಂಭಾಗದಲ್ಲಿ ಕಹಿ ರುಚಿಯ ಪ್ರದೇಶವಿದೆ. ನಾಲಿಗೆ ಹಾಗೂ ಬಾಯಿಯ ಕೆರಳಿಕೆಯಿಂದ ಖಾರದ ಅನುಭವ ಉಂಟಾಗುತ್ತದೆ. ಇಷ್ಟಲ್ಲದೆ ನಾಲಿಗೆ ಜೊಲ್ಲು ರಸ, ಜಠರರಸ, ಲಾಲಾರಸವನ್ನು ಉತ್ಪತ್ತಿ ಮಾಡಿ ಆಹಾರ ಪಚನವಾಗಲು ಸಹಕಾರಿಯಾಗುತ್ತದೆ. ನಾಲಿಗೆಯು ನಮ್ಮ ಮಿದುಳಿನ 'ಮಹಾ ಮಸ್ತಿಷ್ಕ' ದೊಂದಿಗೆ ಸಂಪರ್ಕ ಹೊಂದಿದೆ.

ನಾಲಿಗೆಗೆ ಮಾತಿನೊಂದಿಗೆ ರುಚಿಯ ಕೆಲಸವನ್ನೂ ಇತ್ತಿರುವುದು ದೇವರ ತೀರಾ ಹುಚ್ಚು ಕೆಲಸವಾಗಿದೆ. ನಾಲಿಗೆಗೆ ಸರಿಯಾದ ರುಚಿಯಾದ ಪದಾರ್ಥ ಸಿಗದೆ ಇದ್ದರೆ ಅದು ತನಗೆ ಬೇಕಾದಂತೆ ಹೊರಳಿ ಇತರರ ಮನಸ್ಸನ್ನು ನೋಯಿಸುವುದರಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಈ ವಿಚಾರದಲ್ಲಿ ನನಗಾದ ಒಂದು ಅನುಭವ. ಅಂದು ನಮ್ಮ ಭಾವನವರ ಮದುವೆ. ಮದುವೆಗೆ ಎಲ್ಲರೂ ಒಂದು ದಿನ ಮುಂಚಿತವಾಗಿಯೇ ಬಂದಿದ್ದೆವು. ಮದುವೆಯ ಮನೆಯವರು ನಾವು ಬಂದೆವೆಂದು ಅವಸರವಸರವಾಗಿ ಅಡಿಗೆ ಮಾಡಿ ಬಡಿಸಿದರು. ಆದರೆ? ರುಚಿಯಿಲ್ಲದ ಅಡಿಗೆ ತಿಂದ ನಾಲಿಗೆ ಸುಮ್ಮನಿರಲಿಲ್ಲ. ತನಗಿಷ್ಟ ಬಂದಂತೆ ಹೊರಳಾಡಿ ಎಲ್ಲರ ಮನಸ್ಸಿನ ಚಿತ್ತವನ್ನು ಕೆಡಿಸಿತು. ಗಂಡಸರ ನಾಲಿಗೆಯೊಂದಿಗೆ ಹೆಂಗಸರ ನಾಲಿಗೆಗಳು ಸೇರಿ ದೊಡ್ಡ ರಾದ್ಧಾಂತವೇ ನಡೆದು ಮದುವೆ ನಿಲ್ಲುವ ಪರಿಸ್ಥಿತಿಗೆ ಬಂದು ತಲುಪಿತ್ತು. ಕೊನೆಗೆ ವಿಚಾರವಂತರಾದ ಹಿರಿಯರ ನಾಲಿಗೆಯಿಂದ ಬಂದ ಕೆಲವು ಮಾತುಗಳು ಮದುವೆ ಜರುಗಿಸುವುದರಲ್ಲಿ ಯಶಸ್ವಿಯಾದವು. ಹೀಗೆ ನಿಮಗೂ ಈ ನಾಲಿಗೆಯ ಬಗ್ಗೆ ಸಿಹಿಕಹಿ ಅನುಭವವಾಗಿರಬಹುದು. ನಾಲಿಗೆಯಿದೆ ನಿಜ. ಆದರೆ ಅದನ್ನು ಸಿಟ್ಟು ಬಂದಾಗ ಹೊರಗೆ ಬಿಡಲೇಬಾರದು. ''ಸಿಟ್ಟು ಬಂದಾಗ ಖಡ್ಗವನ್ನು ಬೇಕಾದರೆ ತೆಗೆಯಿರಿ. ಆದರೆ ನಾಲಿಗೆಯನ್ನು ಮಾತ್ರ ತೆಗೆಯಬೇಡಿ'' ಎಂಬ ತುಳಸೀದಾಸರ ಮಾತಿನಂತೆ ನಡೆದುಕೊಳ್ಳುವುದು ಒಳ್ಳೆಯದು. ಹೃದಯ ಹಾಗೂ ನಾಲಿಗೆ ಎರಡೂ ಚಿಕ್ಕದಿದ್ದರೂ ಮನುಷ್ಯನ ವ್ಯಕ್ತಿತ್ವವನ್ನು ಎತ್ತಿ ತೋರಿಸುತ್ತವೆ. ಬಾಯಿ ಶುದ್ಧವಿದ್ದರೆ ಲೋಕದಲ್ಲಿ ನಿಶ್ಚಿಂತೆಯಿಂದಿರಬಹುದೆಂದು ಸರ್ವಜ್ಞ ''ಕಚ್ಚೆ, ಕೈ-ಬಾಯಿಗಳು ಇಚ್ಚೆಯಲಿ ಇದ್ದಿಹರೆ.....'' ಎಂಬ ತ್ರಿಪದಿಯಲ್ಲಿ ಹೇಳಿದ್ದಾನೆ.

ಮನುಷ್ಯರು ಮಾತನಾಡುವದೇ ಜಾಸ್ತಿ. ''ಕೆಲಸ ಜಾಸ್ತಿ ಮಾಡಿ ಮಾತು ಕಡಿಮೆ ಆಡಿ'' ಎಂಬ ಹಿರಿಯರ ಮಾತು ನಾಲಿಗೆಯ ಗಮನಕ್ಕೆ ಬರುವುದೇ ಇಲ್ಲ. ಮಾತು ಮಾತು ಮಾತು. ''ಸುಳ್ಳಿನ ವಿಚಾರದಲ್ಲಂತೂ ಹೆಂಗಸು ಹೇಳುವ ಸುಳ್ಳು ಒಂದು ಗೋಡೆ ಕಟ್ಟಿದಂತಿದ್ದರೆ ಗಂಡಸು ಹೇಳುವ ಸುಳ್ಳು ಒಂದು ತೊಟ್ಟಿಯನ್ನು ಕಟ್ಟಿದಂತಿರುತ್ತದೆ.'' ಎಂದಿದ್ದಾನೊಬ್ಬ ಜ್ಞಾನಿ. ಸುಳ್ಳನ್ನು ಕುರಿತು ಭಗವಾನ ಬುದ್ಧ, ''ಸುಳ್ಳು

ಹೇಳುವುದು, ಅಸಭ್ಯತೆಯಿಂದಿರುವುದು, ದುರ್ವಿಚಾರ ಮಾಡುವುದು, ದೂಷಿಸುವುದು, ಹಿಂಸಿಸುವುದು - ಇವೆಲ್ಲ ಕೊಲೆಗೈದಷ್ಟೇ ದೊಡ್ಡ ಪಾಪಗಳು'' ಎನ್ನುತ್ತಾನೆ.

ನಾಲಿಗೆ ಒಳ್ಳೆಯ ಕೆಲಸವನ್ನೇ ಮಾಡಲಿ ಕೆಟ್ಟ ಕೆಲಸವನ್ನೇ ಮಾಡಲಿ ದಂತಪಂಕ್ತಿಗಳ ನಡುವೆ ಸುರಕ್ಷಿತವಾಗಿರುತ್ತದೆ. ನಮ್ಮ ಸಮಾಜದಲ್ಲಿ ಹೀಗೆ ವಿಶ್ವಾಸಘಾತುಕರು ಎಂತಹ ದುಷ್ಟ ಕೆಲಸವನ್ನೇ ಮಾಡಿರಲಿ ಸಮಾಜದಲ್ಲಿ ಯಾರ ಕಣ್ಣಿಗೂ ಬೀಳದೆ ಸುರಕ್ಷಿತವಾಗಿರುತ್ತಾರೆ. ಸಜ್ಜನರು ಹೊರಬರದೆ ಸುರಕ್ಷಿತವಾಗಿಯೇ ದುಷ್ಟರಿಂದ ಸಮಾಜದಲ್ಲಿ ಜೀವಿಸುತ್ತಾರೆ.

''ದಂತಪಂಕ್ತಿಯ ನಡುವೆ ಎಂತಿಪ್ಪುದದು ಜಿಹ್ವೆ
ಅಂತು ದುರ್ಜನರ ಬಳಸಿನಲಿ ಸಜ್ಜನನು
ನಿಂತಿಹನು ನೋಡ ಸರ್ವಜ್ಞ''

ಎಂಬುದನ್ನರಿತುಕೊಳ್ಳಿ.

ನಾಲಿಗೆಯು ಮಾಡುವ ಎಲ್ಲ ದುಷ್ಟ ಕಾರ್ಯಗಳ ನಂತರ ದೇವರ ಪ್ರಾರ್ಥನೆಯನ್ನು ಮಾಡಿ ತನ್ನ ತಪ್ಪನ್ನು ಮುಚ್ಚಲು ಪ್ರಯತ್ನಪಡುತ್ತದೆ.

ಕಾರ್ಲಸ್ ನಾಲಿಗೆಯನ್ನು ಕುರಿತು: ''ಮೂರ್ಖನ ಹೃದಯ ಅವನ ನಾಲಿಗೆಯಲ್ಲಿರುತ್ತದೆ'' ಎಂದು ಹೇಳಿದ್ದಾನೆ. ನಮಗೆ ದೇವರು ಉದಾರ ಹೃದಯವನ್ನು ಕೊಟ್ಟಿದ್ದಾನೆ: ಹರಿತವಾದ ನಾಲಿಗೆಯನ್ನೂ ಕೊಟ್ಟಿದ್ದಾನೆ. ''ಉದಾರ ಹೃದಯದಿಂದ ಯಶಸ್ಸಿನ ಮಾರ್ಗ ಕಂಡುಕೊಳ್ಳಬಹುದು, ಆದರೆ ಹರಿತವಾದ ನಾಲಿಗೆಯಿಂದ ಯಶದ ಮಾರ್ಗವನ್ನು ಕಂಡುಕೊಳ್ಳಲಾಗದು'' ಎಂಬ ಗೋಲ್ಡ್‌ಸ್ಮಿಥ್‌ನ ಮಾತಿನಂತೆ ನಾಲಿಗೆಯನ್ನು ಹರಿಬಿಟ್ಟರೆ ಯಶಸ್ಸು ಸಿಗದೆ ಜೀವನದಲ್ಲಿ ಜಿಗುಪ್ಸೆಯನ್ನು ಅನುಭವಿಸಬೇಕಾಗುತ್ತದೆ. ನಾಲಿಗೆಯ ಮೇಲೆ ಮಚ್ಚೆಯಿರುವವರು ಮಾತನಾಡಿದರೆ ಅವರು ನುಡಿದಂತೆ ನಡೆಯುವುದೆಂಬ ನಂಬಿಕೆ ನಮ್ಮ ಸಮಾಜದಲ್ಲಿದೆ. ಈ ಮಚ್ಚೆಯುಳ್ಳ ನಾಲಿಗೆಯವರು ಉತ್ತಮವಾದ ಮಾತನ್ನೇ ಆಡುವುದು ಒಳ್ಳೆಯದು.

ನಾಲಿಗೆಯ ಒಳಭಾಗದಲ್ಲಿ ಗಂಟಲಿನ ಬಳಿ ''ಕಿರುನಾಲಿಗೆ''ಯಿದೆ. ಇದು ಯಾವ ವಿಚಾರಕ್ಕೂ ತಲೆ ಹಾಕದೆ ಶಾಂತ ರೀತಿಯಿಂದ ತನ್ನಷ್ಟಕ್ಕೆ ತಾನಿರುತ್ತದೆ. ನಮ್ಮ ಸಮಾಜದಲ್ಲೂ ಹೀಗೆ ವಿಚಾರವಂತರು ಜ್ಞಾನಿಗಳು ಯಾವ ತರಲೆಗಳಿಗೂ ತಲೆ ಕೊಡದೆ ತಮ್ಮಷ್ಟಕ್ಕೆ ತಾವಿರುತ್ತಾರೆ.

ಮೂಗಿರುವತನಕ ನೆಗಡಿ ತಪ್ಪದಂತೆ. ಹಾಗೇ ನಾಲಿಗೆಯಿರುವತನಕ ಮಾತು ಜಗಳ ಮನಸ್ತಾಪ ತಪ್ಪಿದ್ದಲ್ಲ. ಇದ್ದದ್ದರಲ್ಲಿ ನಾಲಿಗೆಯನ್ನು ತಮ್ಮ ವಶದಲ್ಲಿಟ್ಟುಕೊಂಡು ಅದಕ್ಕೆ ಗುಲಾಮನಾಗದೆ ಒಡೆಯನಾಗಲು ಪ್ರಯತ್ನಪಡುವುದು ಒಳ್ಳೆಯದು.

## ಗಾಂಧಾರ!

*ನ್ಯಾಯ-ನೀತಿ-ಧರ್ಮ-ಸತ್ಯವನ್ನು ಕಾಪಾಡುವುದಕ್ಕಾಗಿ ನ್ಯಾಯಧೀಶ ಜೇಮ್ಸ್ ಪಾರ್ಕಿನ್ ತಾತ್ಕಾಲಿಕವಾಗಿ ಕುರುಡನಾಗುತ್ತಿದ್ದ. ನ್ಯಾಯಾಲಯ ತಲುಪಿದಾಕ್ಷಣ ಆತ ತನ್ನ ಕಣ್ಣುಗಳನ್ನು ಬಿಳಿ ಬಟ್ಟೆಯಿಂದ ಕಟ್ಟುತ್ತಿದ್ದ. ಆರೋಪಿಗಳನ್ನಾಗಲೀ, ಫಿರ್ಯಾದುದಾರರನ್ನಾಗಲಿ ನೋಡುವುದು ಆತನಿಗೆ ಇಷ್ಟವುಳ್ಳ ವಿಚಾರವಾಗಿರಲಿಲ್ಲ. ನೋಡಿದರೆ ಯಾರ ಮೇಲಾದರೂ ಪಕ್ಷಪಾತ ತೋರಿಸುವ ಪ್ರಮೇಯ ಬಂದೀತೆಂಬ ಶಂಕೆ ಆತನಿಗಿತ್ತು. ಗುಮಾಸ್ತ ಓದಿ ಹೇಳಿದ ಕೇಸನ್ನು ಪೂರ್ಣವಾಗಿ ಅರ್ಥಮಾಡಿಕೊಂಡ ಮೇಲೆ ಜೇಮ್ಸ್ ತೀರ್ಪು ಹೇಳುತ್ತಿದ್ದ. ಹೀಗೇ 14 ವರ್ಷಗಳ ಕಾಲ ಆತ ನ್ಯಾಯಧೀಶನಾಗಿ ಸೇವೆ ಸಲ್ಲಿಸಿದ.*

● ಜುಬೇರ್ ಶಿವಮೊಗ್ಗ

# ಅಣಬೆಯಲ್ಲಿ ಔಷಧಿಯ ಗುಣ ಇದೆಯೇ?

● *ಎಂ. ಶಿವರಾಮ ಆಚಾರ್*

'ನಾಯಿ ಕೊಡೆಗಳು' ಎಂದು ಕರೆಯಲ್ಪಡುವ ಅಣಬೆಗಳು ಅತ್ಯಂತ ಪೌಷ್ಠಿಕ ಆಹಾರವೆಂದು ಪರಿಗಣಿಸಲ್ಪಟ್ಟಿವೆ. ಈಗೀಗ ನಮ್ಮ ದೇಶದಲ್ಲಿಯೂ ಅನೇಕರು ಅಣಬೆಯನ್ನು ಆಹಾರಕ್ಕಾಗಿ ಬೆಳೆಯುವ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದಾರೆ. ಇವೇ ಅಣಬೆಗಳನ್ನು ಟಿನ್ನುಗಳಲ್ಲಿ ತುಂಬಿಸಿ ವಿದೇಶಗಳಲ್ಲಿ ಮಾರಾಟ ಮಾಡುವುದಿದೆ. ಅಣಬೆಗಳಲ್ಲಿ ಹಲವು ಜಾತಿಗಳಿವೆ; ಕೆಲವು ಅಣಬೆಗಳು ವಿಷಕಾರಿಯಾಗಿವೆ. ಆದುದರಿಂದ ಭಕ್ಷ್ಯ ಯೋಗ್ಯವಾದ ಅಣಬೆಗಳನ್ನು ಮಾತ್ರ ಆರಿಸುವುದು ಅತ್ಯಗತ್ಯ.

> ರಕ್ತದ ಒತ್ತಡ, ಪೋಲಿಯೋ, ಮಧುಮೇಹ ಮುಂತಾದವುಗಳಿಗೆ ಜಪಾನಿನ ಕರಿ ಅಣಬೆಯೂ ಚೀನದಲ್ಲಿ ದೊರೆಯುವ ಕೋಳೆಮರಗಳ ಅಣಬೆ ವಿಷ ಪರಿಹಾರಕ್ಕೂ ಬಳಸಲ್ಪಡುತ್ತಿವೆಯೆಂಬ ವರದಿಗಳಿವೆ. ಭಾರತದಲ್ಲೀಗ ಹೆಚ್ಚೆಚ್ಚು ಅಣಬೆ ಬೆಳೆಯುವ ಕಾರ್ಯ ಭರದಿಂದ ಸಾಗಿದೆ.

ಅಣಬೆಗಳು ಪೌಷ್ಠಿಕ ಆಹಾರ ಮಾತ್ರವಲ್ಲ. ಅವುಗಳಲ್ಲಿ ಔಷಧೀಯ ಗುಣಗಳೂ ಅಡಗಿವೆಯೆಂದು ವಿಜ್ಞಾನಿಗಳು ಪ್ರಯೋಗಗಳಿಂದ ಕಂಡು ಹಿಡಿದಿರುತ್ತಾರೆ. ಪಂಜಾಬಿನ ಕೃಷಿ ವಿಶ್ವವಿದ್ಯಾಲಯದ ಆರ್. ಭಂಡಾರಿಯವರು ಮಾನವನಲ್ಲಿ ಹೃದ್ರೋಗವುಂಟು ಮಾಡಲು ಕಾರಣವಾಗಿರುವ 'ಕೊಲೆಸ್ಟ್ರಾಲ್' ಮಟ್ಟವನ್ನು ಕಡಿಮೆಗೊಳಿಸುವಲ್ಲಿ ಚಿಪ್ಪು ಅಣಬೆಗಳು (Oyster mushroom) ತುಂಬಾ ಪರಿಣಾಮಕಾರಿಯಾಗಿದೆಯೆನ್ನುತ್ತಾರೆ. ಇದರ ವೈಜ್ಞಾನಿಕ ಹೆಸರು 'ಪ್ಲುರೊಟಸ್ ಫ್ಲೊರಿಡಾ' (Pleurotus florida) ಎಂದಾಗಿದೆ. ಪ್ರಯೋಗ ಶಾಲೆಯಲ್ಲಿ ಅಧಿಕ ಕೊಲೆಸ್ಟರಾಲ್ ಉತ್ಪಾದಕ ಆಹಾರದೊಂದಿಗೆ ಅಣಬೆಗಳನ್ನು ಸೇರಿಸಿ ಇಲಿಗಳಿಗೆ ತಿನ್ನಿಸಲಾಯಿತು. ಇದರ ಪರಿಣಾಮವಾಗಿ ಇಲಿಗಳು ತಮ್ಮ ದೇಹದ ಕೊಬ್ಬು ಬೆಳೆಸಿಕೊಳ್ಳಲಿಲ್ಲ. ಅಣಬೆಯನ್ನು ತಿಂದ ಇಲಿಗಳು ತಮ್ಮ ದೇಹದಲ್ಲಿನ ಕೊಬ್ಬಿನ ಅಂಶವನ್ನು ಬೆಳೆಸಿಕೊಳ್ಳದಿದ್ದುದರಿಂದ ಅವುಗಳಲ್ಲಿರುವ ಕೊಲೆಸ್ಟರಾಲಿನ ಅಂಶ ಇಳಿಮುಖವಾಯಿತೆಯೆಂಬುದನ್ನು ಪತ್ತೆಹಚ್ಚಲಾಯಿತು.

ಇತ್ತೀಚೆಗೆ ಜನರನ್ನು ವಿಪರೀತ ಗಾಬರಿಗೊಳಪಡಿಸಿರುವ ಆಧುನಿಕ ರೋಗವೆಂದರೆ 'ಏಡ್ಸ್'. ಅಣಬೆಯಿಂದ ತಯಾರಿಸಿದ ಔಷಧ ದ್ರವ್ಯಗಳು ಈ ಭಯಂಕರ ರೋಗವನ್ನು ಕೂಡಾ ಗುಣಪಡಿಸುವ ಸಾಮರ್ಥ್ಯವನ್ನು ಹೊಂದಿರುವೆಯೆಂತೆ. ಈ ಕುರಿತು ಬೇರೆ ಬೇರೆ ಭಾಗಗಳ ವರದಿಗಳು ಸಮಾನಾಭಿಪ್ರಾಯವುಳ್ಳವುಗಳಾಗಿವೆ. ಜಪಾನಿನಲ್ಲಿ ಬೆಳೆಯುವ ಒಂದು ಜಾತಿಯ ಕರಿ ಅಣಬೆ (black mushroom) ರಕ್ತದ ಒತ್ತಡಕ್ಕೂ ಪೋಲಿಯೋ ರೋಗಕ್ಕೂ ಪರಿಣಾಮಕಾರಿಯಾದ ಔಷಧಿಯಾಗಬಲ್ಲುದೆಂಬುದಾಗಿ ಕಂಡು ಹಿಡಿಯಲಾಗಿದೆ. ಇದರ ವೈಜ್ಞಾನಿಕ ಹೆಸರು 'ಲೆಂಟಿನಸ್ ಎಡೋಡರ್ಸ್' (Lentinus edo-

ders) ಇದರಿಂದ ಪಡೆದ ಸಾರ (extract) ಮಧುಮೇಹ ರೋಗವನ್ನು ನಿರೋಧಿಸಲು ಸಹಾಯ ಮಾಡುತ್ತದೆನ್ನಲಾಗಿದೆ.

ಚೀನಾ ದೇಶದಲ್ಲಿ ಅಣಬೆಯೊಂದರಿಂದಲೇ ಇಪ್ಪತ್ತು ಬಗೆಯ ಔಷಧ ದ್ರವ್ಯಗಳನ್ನು ತಯಾರಿಸುವರೆಂದು ವರದಿಯಿದೆ. ಕೊಳೆಯುತ್ತಿರುವ ಮರಗಳಲ್ಲಿ ಹುಟ್ಟಿ ಬೆಳೆಯುವ ಅಣಬೆಗಳು ಲೋಹ ವಿಷ ಬಾಧೆಯನ್ನು ನಿವಾರಿಸಬಲ್ಲವೆಂಬುದಾಗಿ ವಿಜ್ಞಾನಿಗಳು ಕಂಡುಕೊಂಡಿದ್ದಾರೆ. ಅತ್ಯಂತ ವಿಷಕಾರಿಯಾದ ಭಾರ ಲೋಹದ (heavy metals) ವಿಷ ಪರಿಹಾರಕ್ಕೂ ಅಣಬೆಯಿಂದ ತಯಾರಿಸಿದ ಔಷಧಿಗಳು ಇತರ ಔಷಧಿಗಳಿಗಿಂತ ಹೆಚ್ಚು ಪರಿಣಾಮಕಾರಿಯಾಗಿವೆಯೆನ್ನಲಾಗಿದೆ. ಸಾಮಾನ್ಯವಾಗಿ ಪಾದರಸ, ಝಿಂಕ್, ಕ್ಯಾಡ್ಮಿಯಂ, ಯುರೇನಿಯಂ ಮೊದಲಾದ ಲೋಹಗಳು ಬಹಳ ವಿಷಕಾರಿ. ಇವುಗಳ ವಿಷಗಳನ್ನು ಅಣಬೆಯ ಔಷಧಿಗಳು ಹೀರಬಲ್ಲವು ಎಂಬುದಾಗಿ ತಿಳಿಯಲ್ಪಡುತ್ತದೆ.

ಚಿಪ್ಪು ಅಣಬೆಗಳನ್ನು ಬೆಳೆಸಲು ರಬ್ಬರ್ ಕಾರ್ಖಾನೆಗಳಿಂದ ಹೊರ ಹೊಮ್ಮುವ ತ್ಯಾಜ್ಯ ಘನ ವಸ್ತುಗಳನ್ನು ಯೋಗ್ಯವಾಗಿ ಉಪಯೋಗಿಸಬಹುದು. ಅಣಬೆಯನ್ನು ಬೆಳೆಸಲು ರಬ್ಬರ್ ಮರದ ಪುಡಿಯನ್ನು ಕೂಡಾ ಉಪಯೋಗಿಸಬಹುದಂತೆ. ರಬ್ಬರ್ ಕಾರ್ಖಾನೆಗಳಲ್ಲಿ ಈಗ ಪ್ರತಿ ವರ್ಷವೂ ನಲ್ವತ್ತು ಸಾವಿರ ಟನ್ನುಗಳಷ್ಟು ರಬ್ಬರ್ ಮರದ ಪುಡಿ ಶೇಖರಣೆಗೊಳ್ಳುತ್ತಿದ್ದು ಅವುಗಳ ನಿವಾರಣೆಯೇ ದೊಡ್ಡ ಸಮಸ್ಯೆಯಾಗಿದೆ. ಇದನ್ನೇ ಅಣಬೆ ಬೆಳೆಸಲು ಉಪಯೋಗಿಸಬಹುದಾಗಿದೆ.

ರಬ್ಬರ್ ಮರದ ಪುಡಿಯ ಉಪಯೋಗವೊಂದರಿಂದಲೇ ಕೇರಳರಾಜ್ಯದಲ್ಲಿ ಸುಮಾರು ಮೂವತ್ತು ಸಾವಿರಟನ್‌ಗಳಷ್ಟು ಅಣಬೆಯನ್ನು ಉತ್ಪಾದನೆ ಮಾಡಬಹುದೆಂಬ ಅಭಿಪ್ರಾಯವಿದೆ. ಈಗ ಅನೇಕ ಕಡೆ ಅಣಬೆ ಬೆಳೆಸಲು ಬೈಹುಲ್ಲನ್ನು ಧಾರಾಳವಾಗಿ ಉಪಯೋಗಿಸಲಾಗುತ್ತದೆ. ಅದಕ್ಕಿಂತಲೂ ರಬ್ಬರ್ ಮರದಪುಡಿ ಉಪಯೋಗ ಮಾಡಿದಲ್ಲಿ ಅಣಬೆ ಬೆಳೆಗೆ ಅದು ಹೆಚ್ಚು ಪ್ರಯೋಜಕವಾಗಬಲ್ಲುದೆಂದು ನಂಬಲಾಗಿದೆ. ರಬ್ಬರ್ ಮರದ ಪುಡಿಯನ್ನುಪಯೋಗಿಸಿದ ಅಣಬೆಗಳು ಗಾತ್ರದಲ್ಲಿ ದೊಡ್ಡದಾಗಿ ಬೆಳೆಯುತ್ತವೆನ್ನಲಾಗಿದೆ. ಹೀಗೆ ವಿಪುಲವಾಗಿ ಅಣಬೆ ಬೆಳೆಯಲು ಸಾಧ್ಯವಾದರೆ ಪೌಷ್ಟಿಕ ಆಹಾರ ಹಾಗೂ ಔಷಧಿ ಎರಡರ ಅಗತ್ಯವೂ ಪೂರೈಕೆಯಾಗುತ್ತದೆ. ●





# ಕಾಲು ಕುಣಿಸುವ ಚಟ

● ಎಸ್. ರವಿಕುಮಾರ ಮಾಗಳ

ನಮಗೆ ಕೆಲವು (ಇತರರಿಗೆ ಅಸಹ್ಯಕರವೆನಿಸುವ) ಚಟಗಳು ಸುಲಭವಾಗಿ ಅಂಟಿಕೊಳ್ಳುತ್ತವೆ. ಸದಾಕಾಲ ಮೂಗಿನಿಂದ ಫೂತ್ಕರಿಸುವವರು ಕೆಲವರಾದರೆ, ಯಾವಾಗಲೂ ಮೂಗಿನಲ್ಲಿ ಬೆರಳು ಹಾಕಿಕೊಂಡೇ ಇರುವವರು ಕೆಲವರು. ಮೇಲಿಂದ ಮೇಲೆ ಕಿವಿಯಲ್ಲಿ ಬೊಟ್ಟು ಹಾಕಿ ಆಮೇಲೆ ಮೂಗಿನ ಹತ್ತಿರ ಒಯ್ಯುವುವವರು ಕೆಲವರಾದರೆ, ಬಾಯಲ್ಲಿ ಬೆರಳು ಹಾಕಿ ಉಗುರು ಕಡಿಯುವವರು ಕೆಲವರು. ಕೆಲವರಿಗೆ ಮಾತಾಡುವಾಗ, ಪ್ರತಿ ಮಾತಿಗೂ ಹುಬ್ಬು ತನ್ನಷ್ಟಕ್ಕೆ ತಾನೇ ಮೇಲೇರುತ್ತದೆ, ಹಾಗೂ ಶಬ್ದ ಹೊರಬಿದ್ದ ಕೂಡಲೇ ಕೆಳಗಿಳಿಯುತ್ತದೆ. ಕೆಲವರಿಗೆ ತಾವು ಕಾಲಿನಲ್ಲಿ ಮೆಟ್ಟಿದ ಬೂಟುಗಳ ಲೇಸುಗಳು ಗಟ್ಟಿಯಾಗಿ ಕಟ್ಟಿಕೊಂಡೇ ಇದ್ದರೂ ದಾರಿಯಲ್ಲಿ ಕಂಬಕ್ಕೆ ಕಾಲುಕೊಟ್ಟು, ಅವುಗಳನ್ನು ಬಿಚ್ಚಿ ತಿರುಗಿ ಕಟ್ಟುವ ಚಟ. ಕೆಲವರು ಮಾತಿಗೊಮ್ಮೆ ಎಡಗಣ್ಣು (ಕೆಲವರು ಬಲಗಣ್ಣು) ಮಿಟುಕಿಸುತ್ತಾರೆ.

ಆದರೆ ಸಾಮಾನ್ಯವಾಗಿ ಕಂಡು ಬರುವ ಚಟವೆಂದರೆ ಕಾಲು ಕುಣಿಸುವುದು. ಕಾಲು ಕುಣಿಸುವುದರಲ್ಲಿಯೂ ವೈವಿಧ್ಯವಿದೆ. ಕೆಲವರು ಕುರ್ಚಿಯಲ್ಲಿ ಕುಳಿತುಕೊಂಡು ಒಂದು ಕಾಲು ನೆಲದ ಮೇಲೆ ಊರಿರುವಾಗ ಇನ್ನೊಂದನ್ನು ಅದರ ಮೇಲೆ ಹಾಕಿ ಆಡಿಸುತ್ತಿರುತ್ತಾರೆ. ಕೆಲವರು ಎರಡೂ ಪಾದಗಳನ್ನೂ ನೆಲಕ್ಕೂರಿ ಕಾಲುಗಳನ್ನು ಶೀಘ್ರವಾಗಿ ಮೇಲೆ-ಕೆಳಗೆ ಕುಣಿಸುತ್ತಾರೆ. ಇನ್ನು ಕೆಲವರು ಕಾಲುಗಳನ್ನು ಗಂಟಿನ ಹತ್ತಿರ (ಕ್ರಾಸ್) ಕತ್ತರಿಯಾಗಿಟ್ಟು, ಅವುಗಳನ್ನು ಒಂದೇ ಸಮನೆ ಎಡದಿಂದ ಬಲಕ್ಕೆ, ಬಲದಿಂದ ಎಡಕ್ಕೆ ಸರಿದಾಡಿಸುತ್ತಿರುತ್ತಾರೆ. ಈ ರೀತಿಯಾಗಿ ಕಾಲು ಕುಣಿಸುವ ಚಟವುಳ್ಳವರು ಸಿನಿಮಾದಲ್ಲಿ ನಿಮ್ಮ ಎಡ-ಬಲಕ್ಕೆ ಕುಳಿತಿದ್ದರೆ, ನೀವು ತಕ್ಷಣ ಜಾಗ ಬದಲಾಯಿಸುವುದು ಒಳ್ಳೆಯದು. ಒಂದು ವೇಳೆ ಅದು ಸಾಧ್ಯವಿಲ್ಲದಿದ್ದರೆ ಸುಮ್ಮನೆ ಮನೆಗೆ ಹೋಗುವುದು ಉತ್ತಮ. ಏಕೆಂದರೆ ಸರಿದಾಡುವ ಅವರ ಕಾಲು, ನಿಮ್ಮ ಕಾಲಿಗೆ ಒಂದೇ ಸಮನೆ ಬಡಿ ಬಡಿದು ನಿಮ್ಮ ಲಕ್ಷ್ಯ ತೆರೆಯ ಕಡೆಗೆ ಖಂಡಿತವಾಗಿಯೂ ಉಳಿಯಲಾರದು. ವೇಗದ ರೈಲುಗಾಡಿಯಲ್ಲಿ ನಿಮ್ಮ ಎರಡೂ ಬದಿಗೆ ಈ ತರಹದ ಕಾಲು ಕುಣಿಸುವ ಚಟವುಳ್ಳವರು ಸಿಕ್ಕರಂತೂ ಮುಗಿದೇ ಹೋಯಿತು! ಆಗಿನ ನಿಮ್ಮ ಮನಸ್ಥಿತಿಯನ್ನು ಊಹಿಸುವುದೂ ಅಸಾಧ್ಯ.

ಕಾಲು ಕುಣಿಸುವ ಚಟವುಳ್ಳವರಲ್ಲಿ ತೀರಾ ಅಸಹ್ಯಕರವಾದವರೆಂದರೆ ಬೇರೆಯವರೊಡನೆ ಮಾತಾಡುತ್ತಾ ನಿಂತುಕೊಂಡಾಗಲೇ ಕಾಲು ಕುಣಿಸುವವರು. ಮರ್ಯಾದಸ್ಥ ಹೆಣ್ಣು ಮಕ್ಕಳಿಗೆ - ಹೀಗೆ ನಿಂತುಕೊಂಡೇ ಕಾಲು ಕುಣಿಸುವ ಪರಿಚಯಸ್ಥರು ಸಿಕ್ಕರಂತೂ, ಅವರು ಸಂಕೋಚದ ಮುದ್ದೆಯಾಗಿಬಿಡುತ್ತಾರೆ.

ಪುಣ್ಯಕ್ಕೆ ಈ ಕಾಲು ಕುಣಿಸುವ ಚಟ ಹೆಂಗಸರಿಗಿರುವುದು ತುಂಬಾ ಅಪರೂಪ. ಅದೇನು ಕಾರಣವೋ ಈ ಚಟ ಗಂಡಸರಿಗೆ ಮಾತ್ರ ಹೆಚ್ಚಾಗಿ ಅಂಟಿಕೊಳ್ಳುತ್ತದೆ. ಸ್ವಂತದ ಅರಿವು ಹೆಂಗಸರಿಗೆ ಹೆಚ್ಚಾಗಿ ಇರುವುದು ಅಥವಾ ಗಂಡಸರ ಕಾಲುಗಳಿಗಿಂತ, ಹೆಂಗಸರ ಕಾಲುಗಳಲ್ಲಿ ಸ್ಥೈರ್ಯ ಹೆಚ್ಚಾಗಿರುವುದು ಇದಕ್ಕೆ ಕಾರಣವಿದ್ದರೂ ಇರಬಹುದು!

ಕಾಲು ಕುಣಿಸುವ ಚಟವುಳ್ಳವರು ಒಳ್ಳೆ ಗಣಿತ ಶಾಸ್ತ್ರಜ್ಞರು, ತರ್ಕ ಶಾಸ್ತ್ರಜ್ಞರು, ರಾಜಕಾರಣ ಧುರೀಣರೂ, ಉತ್ತಮ ಬರಹಗಾರರೂ ಆಗಿರುತ್ತಾರೆಂದು ಕೇಳಿದ್ದೇನೆ.

ಕೆಲವರು ಮಲಗಿಕೊಂಡು ಕಾಲುಕುಣಿಸುತ್ತಾರೆ. ಈ ಮಲಗಿಕೊಂಡು ಕಾಲು ಕುಣಿಸುವ ಚಟ ಕೃಷ್ಣ ಪರಮಾತ್ಮನಿಗೂ ಇತ್ತಂತೆ. ಆ ಕಾರ್ಯದಲ್ಲಿದ್ದಾಗಲೇ ಅವನ ಕೊನೆಯಾಯ್ತಂತೆ.

ಆದ್ದರಿಂದ ವಾಚಕ ಮಹಾಶಯರೇ ಒಂದು ವೇಳೆ ನಿಮಗೆ ಈ ಕಾಲುಕುಣಿಸುವ ಚಟವಿದ್ದರೆ ಖಂಡಿತವಾಗಿಯೂ ದೂರ ಮಾಡಿ. ಅದರಿಂದ ನಿಮಗೂ ಹಾಗೂ ಇತರರಿಗೂ ತುಂಬ ಉಪಯೋಗವಾಗುತ್ತದೆ. ●

# ಜೀವನ ಮತ್ತು ಬದುಕು

ಮೂಲ: ಡಾ. ಜೆ.ಸಿ. ಕುಮಾರಪ್ಪ
ಕನ್ನಡಕ್ಕೆ: ಸಿದ್ದವನಹಳ್ಳಿ ಕೃಷ್ಣಶರ್ಮ

ಬಾಳಿಗೇನಾದರೂ ಮಹತ್ವವಿದೆಯೆ? ಜೀವನಕ್ಕೆ ಅರ್ಥವುಂಟೆ? ಬಾಳು ಎಂದರೇನು - ಬರಿ ಇರುವಿಕೆಯೇ?

ಕೆಳಗಿನ ಪ್ರಾಣಿ ವರ್ಗಕ್ಕೂ ಮನುಷ್ಯನಿಗೂ ಇರುವ ಭೇದ ಎಂದರೆ ಇಚ್ಛಾಬಲ - ವಿಚಾರ ಶಕ್ತಿ. ತನ್ನ ಬಾಳಿಗೆ ಅವನು ಹೇಗೆ ಬೆಲೆ ಕಟ್ಟುತ್ತಾನೆ ಎನ್ನುವುದರ ಮೇಲೆ ಅದರ ಗುಣ. ಅವನ ಬದುಕಿನ ರೀತಿ ಅದನ್ನು ತೋರಿಸುತ್ತದೆ. ಅದನ್ನೇ ವ್ಯಕ್ತಿತ್ವ ಎನ್ನುತ್ತೇವೆ. ಬಾಳೇ ಅವನ ವಿಕಾಸಕ್ಕೆ ಆಧಾರ. ಅವನ ಸೃಷ್ಟಿಶಕ್ತಿಯ ಮೂಲಕ ಅದನ್ನು ವ್ಯಕ್ತವಾಗುವಂತೆ, ಪ್ರಕಟವಾಗುವ ಅವಕಾಶಕೊಡುವುದು ಬಾಳು. ಆದ್ದರಿಂದ ಮನುಷ್ಯರು ಹೇಗೆ ಬದುಕುತ್ತಾರೆ ಹೇಗೆ ಬದುಕಬೇಕು ಎನ್ನುವುದು ಮುಖ್ಯ.

ಮನುಷ್ಯ ಒಬ್ಬ ಕಲಾವಿದ. ಅವನ ಮೌಲ್ಯಗಳೇ ಅವನ ಬಣ್ಣ. ಅವನ ಇಚ್ಛಾಬಲವೇ ಅವನ ಕುಂಚ. ಬಾಳು ಅವನ ಕೈಯಲ್ಲಿರುವ ಪಟ. ಅದರ ಮೇಲೆ ಆ ಕುಂಚದಿಂದ ಅವನು ಹೇಗೆ ಗೆರೆ ಎಳೆದರೆ ಹಾಗೆ ಚಿತ್ರ ಮೂಡುತ್ತದೆ. ಮಾನವಲೋಕದ ಪ್ರಗತಿಗೆ ಅದು ಸಾಧಕವಾಗಬಹುದು. ಬಾಧಕವಾಗಲೂಬಹುದು. ಸ್ವಾರ್ಥಮಯ ಮೌಲ್ಯಗಳು ನೀರುಬಣ್ಣವಿದ್ದ ಹಾಗೆ. ದಿನಕಳೆದ ಹಾಗೆ ಆ ಬಣ್ಣ ಅಳಿಸುತ್ತದೆ. ಅದು ಬಹುಕಾಲ ಬಾಳದು. ಹಿಂಸೆಯಿಂದ ವಿರೂಪವಾಗುತ್ತದೆ. ನಿಸ್ವಾರ್ಥ ಮೌಲ್ಯಗಳು ಅಜಂತಾದಲ್ಲಿ ಶತಮಾನ ಹಲವಾದರೂ ಅಚ್ಚಳಿಯದಿರುವ ಮೃದ್ವರ್ಣಗಳಂತೆ. ಅಂಥ ಬಣ್ಣದಲ್ಲಿ ಚಿತ್ರಿಸಿದ ಅವನ ಚಿತ್ರಗಳು ಶಾಶ್ವತವಾಗಿ ಅಹಿಂಸಾಮಯವಾಗಿ ಪೀಳಿಗೆ ಪೀಳಿಗೆಗಳಿಗಾಗಿ ತಮ್ಮ ಸಂದೇಶ ಸಾರುತ್ತ ಬರುತ್ತವೆ.

ಹೀಗಿದೆ ಮನುಷ್ಯನ ಜವಾಬ್ದಾರಿ. ಹೀಗಿರುವಾಗ ತನ್ನ ಬಾಳನ್ನು ಅವನು ತಪ್ಪನೆ ಇತರರ ಕೈಯಲ್ಲಿ ಒಪ್ಪಿಸಲಾದೀತೆ? ಪ್ರತಿಯೊಬ್ಬನೂ ತನ್ನ ಬಾಳಿನ ರೀತಿಗೆ ತಾನೇ ಜವಾಬ್ದಾರ. ತನ್ನ ಸ್ವಂತ ಚಿತ್ರಕ್ಕೆ ಬದಲು ಯಾರೂ ಒಟ್ಟು ಗಟ್ಟಲೆ ಮಾಡಿಕೊಟ್ಟ ಕಲ್ಲಚ್ಚಿನ ನಕಲು ಚಿತ್ರವನ್ನು ಕೊಡಲಾದೀತೆ?

> ಡಾ. ಕುಮಾರಪ್ಪ ಅವರ ಈ ಮಾತುಗಳನ್ನು ನಾವು ಒಂದಿಷ್ಟು ಯೋಚಿಸಿ ಅನುಸರಿಸಬೇಕಾದ ಅಗತ್ಯ ಇಂದು ಎಂದಿಗಿಂತ ಹೆಚ್ಚಿದೆ.

ಈಗಿನ ಭಾರಿ ಕೈಗಾರಿಕೆಗಳ ಒಂದೇ ಪಡಿಯಚ್ಚಿನ ಉತ್ಪಾದನೆ ಮನುಷ್ಯರು ಹೇಗೆ ಬದುಕಬೇಕೆಂಬುದನ್ನು ನಿರ್ಣಯಿಸುತ್ತದೆ. ನಮಗೆ ಬೇಕಾದ ಬಗೆಯ ಪದಾರ್ಥಗಳನ್ನು ನಾವು ಕೇಳುವಂತಿಲ್ಲ. ಉತ್ಪಾದಕರು ರಾಶಿಗಟ್ಟಲೆ ತಯಾರುಮಾಡಿ ಸುರಿದುದನ್ನು ಕಣ್ಣುಮುಚ್ಚಿ ತೆಗೆದುಕೊಳ್ಳಬೇಕಾಗುತ್ತದೆ. ಹೀಗೆ ನಾವು ನಿಷ್ಕ್ರಿಯರಾಗಿದ್ದರೆ, ಉದಾಸೀನರಾಗಿದ್ದರೆ ಜವಾಬ್ದಾ

ರಿಯನ್ನು ನಿರ್ವಹಿಸಿದಂತಾಗದು. ನಾವು ಕ್ರಿಯಾಶೀಲರಾಗಬೇಕು.

ಈ ತಲೆಮಾರಿನಲ್ಲಿ ಆದ ಎರಡು ಜಗತ್ ಸಂಗ್ರಾಮಗಳೇ ಈ ಕಾಲದ ಸಂಸ್ಥೆ ಸಂಘಟನೆಗಳ ಸರ್ವನಾಶಕ ಸ್ವಭಾವಕ್ಕೆ ಸಾಕ್ಷಿ. ವಿಜ್ಞಾನ ಸಹಜವಾಗಿ ವಾಸ್ತವವೂ ಸೃಷ್ಟಿಶಕ್ತಿ ಸಂಪನ್ನವೂ ಆಗಿರಬೇಕು. ಅದನ್ನು ವಿನಾಶಕ ವಿದ್ಯೆಯಾಗಿ ಮಾಡಿದ್ದಾರೆ. ಅಹಿಂಸೆ, ನಿತ್ಯತೆಗಳ ಸ್ಥಿರ ತಳಹದಿಯ ಮೇಲೆ ನಿಲ್ಲದೆ ಶ್ರೇಷ್ಠ ವಿಜ್ಞಾನಿಗಳು ಹಿಂಸೆಯ ಹುಚ್ಚು ಹೊಳೆಯಲ್ಲಿ ಕೊಚ್ಚಿಹೋಗುತ್ತಿದ್ದಾರೆ. ಮಾನವ ಜೀವನ ಕ್ಷೇತ್ರದಲ್ಲಿ ಅದು ಸಾವು-ಸರ್ವನಾಶಗಳನ್ನು ಹರಿಯಿಸುತ್ತ ಹೋಗುತ್ತಿದೆ. ತಾವು ತಟಸ್ಥರಾಗಿದ್ದೇವೆಂದು ಆ ವಿಜ್ಞಾನಿಗಳ ನಂಬಿಕೆ. ಇದು ಆತ್ಮವಂಚನೆ. ತಾಟಸ್ಥ್ಯವೇ ಇಲ್ಲ. ವಿಜ್ಞಾನಿಗಳು ಸೃಜಕ-ಬ್ರಹ್ಮರು, ಇಲ್ಲವೆ ಸಂಹಾರಕ-ರುದ್ರರು. ತಮ್ಮ ಇಚ್ಛಾಬಲವನ್ನು ಸಂಹಾರ ಕಾರ್ಯಕ್ಕೆ ಉಪಯೋಗಿಸಿ ಪ್ರಳಯಕಾರಣರಾಗಿದ್ದಾರೆ ವಿಜ್ಞಾನಿಗಳು.

ಭೌತಿಕ ವಿನಾಶ ಎಷ್ಟೇ ಆದರೂ ಅದೇನು ಮಹತ್ವದ್ದಲ್ಲ. ಎಲ್ಲಕ್ಕಿಂತ ಹೆಚ್ಚಿನ ನಷ್ಟ ಅರಳಬೇಕಾದ ಬಾಳುಗಳ ಬವಣೆ. ಒಂದು ಹುಲಿ ಒಬ್ಬ ವಿಜ್ಞಾನಿಯನ್ನು ಕೊಂದರೆ ಅದಕ್ಕೆ ಆದ ಲಾಭವೇನು? ಬಹುಶಃ ಮೂರು ಮಣ ಮಾಂಸ, ಸ್ವಲ್ಪ ಬಿಸಿ ನೆತ್ತರು. ಆದರೆ ಮಾನವಲೋಕಕ್ಕೆ ಆದ ನಷ್ಟವೊ? ಬರೀ ಮಾಂಸ-ರಕ್ತವಲ್ಲ; ನೂರಾರು ವರ್ಷ, ಹಲವು ತಲೆಮಾರು ಕೃಷಿ ಮಾಡಿ ಪಡೆದ ಸಂಸ್ಕಾರಗಳ ಫಲವಾದ ಉತ್ತಮ ಗುಣಗಳೆಲ್ಲ ಹುಲಿಯ ಪಾಲಾದವು. ನಮಗೆ ಆದ ನಷ್ಟ ಅಪಾರ, ಹುಲಿಗೆ ಆದ ಲಾಭ ಅತ್ಯಲ್ಪ, ಅಗಣನೀಯ. ನಿತ್ಯತೆಯ ಮೆಟ್ಟಿಲೇರುತ್ತಿದ್ದ ಜೀವನದ ಉತ್ತಮಾಂಶ ಹುಲಿಯ ಪರೋಪಜೀವನದ ಕೃತಿಯಿಂದ ನಾಶವಾಯಿತು. ಹುಲಿಗೆ ಆದ ಲಾಭವೂ ಆ ಗಳಿಗೆಯದು, ಒಂದು ಹೊತ್ತಿನ ಹಸಿವಿನ ತೃಪ್ತಿ. ಅದಕ್ಕಾಗಿ ಶಾಶ್ವತ ಹಾನಿ! ಜ್ಞಾನ, ಪ್ರೇಮ, ಸೃಷ್ಟಿಗಳಿಂದ ತುಂಬಿದ ಆ ವಿಜ್ಞಾನಿಯ ಉತ್ತಮ ಜೀವನ ಆ ದುಷ್ಟ, ಪರಪೀಡಕ ಮೃಗಕ್ಕೆ ಲೆಕ್ಕವೇ ಇಲ್ಲ.

ಇದೇ ರೀತಿ ಈ ಯುದ್ಧಗಳಲ್ಲಿ ಆಗುವ ಅಪಾರ ವಿನಾಶ, ಅಸಂಖ್ಯ ಮರಣ ಮಾನವ ಪ್ರಯತ್ನದಿಂದ ಸರಿಪಡಿಸಲು ಸಾಧ್ಯವಿಲ್ಲದುದು. ಇಂಥ ಪ್ರಳಯಗಳಿಂದ ಮಾನವಪ್ರಗತಿ, ನಾಗರಿಕತೆಗಳು ಸಾವಿರಾರು ವರ್ಷ ಹಿಂದಕ್ಕೆ ಸರಿಯುತ್ತವೆ.

ಸೊಗಸಾದ ಕಸಿಮಾವಿನ ಹಣ್ಣಿನ ಗಿಡವನ್ನು ಫಲಬಿಡುತ್ತಿರುವಾಗ ಯಾವ ತೋಟಗಾರ ಸೌದೆಗಾಗಿ ಕಡಿಯುತ್ತಾನೆ? ಆದರೂ ಮನುಷ್ಯ ತನ್ನ ಮಕ್ಕಳನ್ನೇ ಯುದ್ಧದಲ್ಲಿ ಬಲಿಕೊಡುತ್ತಾನೆ. ಅದೂ ಹೆಮ್ಮೆಯಿಂದ! ಇದಲ್ಲವೆ ವಿಚಿತ್ರ? ಹಿಂಸೆಯನ್ನು ಹೊಗಳಿದರೆ ಅದು ಹೇಗೆ ವಿಜೃಂಭಿಸುತ್ತದೆ.

ಇಲ್ಲಿ ಒಂದು ಮಾತನ್ನು ಹೇಳಬಹುದು: ಧಾರ್ಮಿಕ ಭಾವನೆ, ಅಹಿಂಸಾತತ್ವಗಳ ಮಾತನ್ನು ಬಿಟ್ಟರೂ ಈ ತರ್ಕದಿಂದಲೇ ಮಾಂಸಾಹಾರ ದೂಷ್ಯವಾಗುತ್ತದೆ. ತನ್ನ ಆಹಾರಕ್ಕಾಗಿ ಇತರ ಪ್ರಾಣಿಗಳನ್ನು ಕೊಲ್ಲುವ ಪರೋಪಜೀವನ ಸಲ್ಲದು. ಮಾಂಸ ತಿನ್ನುವವನಿಗೆ ಸಿಗುವ ಸೇರು ಆಹಾರವನ್ನು ಸಸ್ಯಗಳು ಕೊಡಬಲ್ಲವು. ಆದರೆ ಪ್ರಕೃತಿ ಕಳೆದುಕೊಳ್ಳುವ ಪಕ್ಷಿಗಳ ಗಾನ, ಪ್ರಾಣಿಗಳ ಪ್ರೀತಿ ಮುಂತಾದ ಸ್ವಾಭಾವಿಕ ಗುಣಗಳ ಅಮೂಲ್ಯ ಆವಿಷ್ಕರಣವನ್ನು ಮತ್ತೆ ಎಲ್ಲಿಂದ ತರಬೇಕು? ಮನುಷ್ಯನ ಸೃಷ್ಟಿಶಕ್ತಿಯ ಹಾಗೆಯೇ ಅವೂ ಅಲಭ್ಯ. ಮಾಂಸಾಹಾರ ಅನಗತ್ಯವಾದ ಪರೋಪಜೀವನ ವಿಧಾನ; ಪೂರ್ಣ ಹಿಂಸಾಮಯ. ಆ ವಿಧಾನವನ್ನು ಅವಲಂಬಿಸಿದವನು ಮಾನವಜೀವನದಲ್ಲಿ ತೀರಾ ಕೆಳಗಿನ ಅಧಮ ತರಗತಿಗೆ ಇಳಿಯುತ್ತಾನೆ.

ಬಾಳಿನ ಈ ವಿಚಾರಗಳನ್ನು ಆ ಐದು ಬಗೆಯ ಆರ್ಥಿಕ ವಿಧಾನಗಳಿಗೆ ಅನ್ವಯಿಸಿದರೆ ಪರೋಪಜೀವನ ಬರೀ ಅನುಕರಣ; ಪರಾಪಹಾರ ಅನುಸರಣ; ಪ್ರಯತ್ನಶೀಲತೆ ಪದಾರ್ಥ ನಿರ್ಮಾಣ;




ಸಂಘಜೀವನ ಸಾಮಾಜಿಕಕೃತಿ, ಇತರರ ಬಾಳಿನಲ್ಲಿ ಭಾಗವಹಿಸುವ ಪರಹಿತಕಾರಿತನ ಉದಾತ್ತ, ಗಾಂಭೀರ್ಯ-ಹೀಗೆ ಆಗುತ್ತವೆ.

**ಅನುಕರಣಶೀಲ ವರ್ಗ:** ಈ ವರ್ಗಕ್ಕೆ ಸೇರಿದ ಜನ ತಾವು ಏನನ್ನೂ ನೀಡರು, ಮಾಡರು. ಇತರರು ಮಾಡಿದುದನ್ನು ನೋಡಿ, ಅದನ್ನೇ ಅನುಕರಿಸಿ ಅದರ ಲಾಭವನ್ನೆಲ್ಲ ಪಡೆಯುತ್ತಾರೆ. ಅವರ ಮುಖ್ಯ ಉದ್ದೇಶ ಸುಖ-ಸಂತೋಷ, ಸ್ವಾರ್ಥತೃಪ್ತಿ. ಅದನ್ನು ಪಡೆಯಲು ಅತಿ ಸುಲಭ ಮಾರ್ಗ ಬೇಕು. ಸಾಧಾರಣವಾಗಿ ಇಂಥವರು ಇತರರ ಬದುಕನ್ನು ಅವಲಂಬಿಸಿ ಬದುಕುತ್ತಾರೆ. ಇವರದು ಬರೀ ಬದುಕು, ಬರೀ ಅಸ್ತಿತ್ವ. ಕೇವಲ ಮಣ್ಣಾದರೂ ಚಂದ್ರನಂತೆ ಇತರರ ಕಳೆಯಿಂದ ಮೆರೆಯುವ ಜನ ಇವರು. ಇವರಿಗೆ ವ್ಯಕ್ತಿತ್ವವೆಂಬುದೇ ಇಲ್ಲ. ಇವರಿಂದ ಯಾರೂ ಏನೂ ಕಲಿಯಬೇಕಾಗಿಲ್ಲ. ಹೇಸರ ಕತ್ತೆಯಂತೆ ಇವರು ವ್ಯರ್ಥಜೀವಿಗಳು. ಇತ್ತ ಕತ್ತೆಯೂ ಅಲ್ಲ, ಅತ್ತ ಕುದುರೆಯೂ ಅಲ್ಲ. ಅದಕ್ಕೆ ಸಂತಾನವೂ ಇಲ್ಲ. ನಿಸ್ಸಂತತಿಯಾಗಿ ಅದು ಸಾಯುತ್ತದೆ. ಹೀಗೆ ಅನುಕರಣಶೀಲರಿಗೆ ಸೃಷ್ಟಿಶಕ್ತಿಯಿಲ್ಲ. ಇದ್ದರೂ ಅದು ಸುಪ್ತ. ಅದಕ್ಕೆ ವಿಕಾಸಾವಕಾಶವಿಲ್ಲ. ವಾತಾವರಣ ವ್ಯತ್ಯಾಸವಾದರೆ ಸಮಾಜದ ಸಾಮೂಹಿಕ ಪ್ರಗತಿಗೆ ಸ್ವಲ್ಪ ಸಾಧಕವಾದರೂ ಆಗಬಹುದು. ಆದರೆ ಏನೂ ಕ್ರಿಯೆ-ಕರ್ಮ ಇಲ್ಲದೆ ಇರುವಷ್ಟು ದಿನ ಅಂಥ ಗುಂಪು ಇರುವುದೆಂದರೆ ಸಮಾಜಕ್ಕೆ ಅಷ್ಟು ಮಟ್ಟಿಗೆ ನಷ್ಟ. ಅವರು ಉತ್ಪಾದನೆ ಮಾಡದೆ ತಿನ್ನುತ್ತಾರೆ. ಅವರ ಬಾಳು ಕಲಾಕೃತಿಯಲ್ಲ, ಅಚ್ಚುಕೂಟದಿಂದ ಬರುವ ಬಣ್ಣವೇ ಇಲ್ಲದ ಕಪ್ಪು-ಬಿಳುಪಿನ ಬರಿಗೊಂದಲ.

**ಅನುಸರಣಶೀಲ ವರ್ಗ:** ಅನುಸರಣಶೀಲರಿಗೆ ಸಾಲಮಾಡಿಯಾದರೂ ಸುಖಪಡು ಎನ್ನುವುದೇ ಸೂತ್ರ. ಇತರರ ಸೃಷ್ಟಿಯನ್ನು ಸ್ವಲ್ಪ ವ್ಯತ್ಯಾಸ ಮಾಡಿ ತಮ್ಮದಾಗಿಸಿಕೊಳ್ಳುತ್ತಾರೆ. ನಮ್ಮಲ್ಲೂ ಕೆಲವರು ಕಣ್ಣುಮುಚ್ಚಿ ಪಾಶ್ಚಾತ್ಯರನ್ನು ಅನುಕರಿಸುವವರುಂಟು. ಈ ಬಿಸಿಲಿನ ಸೀಮೆಗೆ ಅನುಗುಣವಾದ ವೇಷಭೂಷಣಗಳನ್ನು ಬಿಟ್ಟು ಅವರ ಉಡಿಗೆ ತೊಡಿಗೆಗಳನ್ನು ತೊಡುತ್ತಾರೆ. ಬಿಸಿಲಿನಲ್ಲಿ ಬೆಂದರೂ ಅದೇ ಅವರಿಗೆ ಸುಖ, ಅದೇ ನಾಗರಿಕತೆ. ಇಂಥ ಜನ ಅಗ್ಗವಾದ ಕಲ್ಲಚ್ಚಿನ ಚಿತ್ರಗಳಂತೆ. ಯಾವುದನ್ನೂ ಸಮಗ್ರವಾಗಿ ಮಾಡುವ ದೃಷ್ಟಿಯೇ ಇಲ್ಲ. ಸ್ವತಂತ್ರ ಬುದ್ಧಿ ಇದ್ದರೂ ಇವರು ಅಸ್ವತಂತ್ರರು. ಅನೇಕ ಸಂದರ್ಭಗಳಲ್ಲಿ ಹಿಂಸಾರಾಧಕರು.

**ರಚನಾಶೀಲ ವರ್ಗ:** ಇದು ಪ್ರಯತ್ನಶೀಲ ವರ್ಗದ ಜನರ ಕ್ಷೇತ್ರ. ಯಾರು ಹೇಗಾದರೂ ಹೋಗಲಿ, ನಾನು ಸುಖವಾಗಿದ್ದರೆ ಸಾಕು ಎಂಬ ಸೂತ್ರ ಇವರದು. ಇತರರ ಕಷ್ಟ-ಸುಖದ ಪರಿವೆಯಿಲ್ಲದೆ ತಮ್ಮ ಬದುಕನ್ನು ಹಾಯಾಗಿ ನಡೆಸ ಬಯಸುವ ಜನ ಇವರು. ಇವರಿಗೆ ಸ್ವತಂತ್ರ ವಿಚಾರವುಂಟು. ಪ್ರತಿಯೊಬ್ಬರೂ ತಮ್ಮ ನಿತ್ಯ ಜೀವನದ ರೀತಿಯಲ್ಲಿ ಸ್ವತಂತ್ರರಾಗಿದ್ದರೆ ಅದೊಂದು ರೀತಿ.

ಈಗ ಹಾಗಿಲ್ಲ. ಈಗ ಪದಾರ್ಥಗಳನ್ನು ತಯಾರಿಸುವವರು ಹೇಗೆ ಪಂಕ್ತಿ ಹಾಕಿಕೊಟ್ಟರೆ ಗಿರಾಕಿಗಳಾದ ನಾವು ಹಾಗೆ ತೀಡಬೇಕು. ಇದರಿಂದ ನಮಗೆ ಬೇಕಾದುದನ್ನು ಆರಿಸಿಕೊಳ್ಳುವ

ಸ್ವಾತಂತ್ರ್ಯವೂ ಇಲ್ಲ. ನಮ್ಮ ಸೃಷ್ಟಿಶಕ್ತಿಗೂ ಅವಕಾಶವಿಲ್ಲದೆ ಅದು ಬಾಡಿಹೋಗುತ್ತದೆ.

ಪಶ್ಚಿಮ ದೇಶದಲ್ಲಿ ಬಂದಿರುವ ಈ ಏಕರೂಪತೆ ಗಿರಾಕಿಗಳ ಬಾಳಿನಲ್ಲಿ ಸ್ವತಂತ್ರ ಭಾವನಾಶಕ್ತಿ ಹೊರಹೊಮ್ಮದಂತೆ ಮಾಡಿದೆ. ಅದನ್ನು ಕೊಂದಿದೆ. ಸರ್ವಸಾಮಾನ್ಯ ಪದ್ಧತಿಯನ್ನು ಬಿಟ್ಟರೆ ಜನರು ಏನನ್ನುತ್ತಾರೋ ಎಂಬುದೇ ಚಿಂತೆ. ಮನೆಯೊಳಗಿನ ಜೀವನವೂ ಕಚೇರಿ, ಶ್ರೀಮಂತರ ಕೂಟ, ವ್ಯಾಪಾರಸಂಸ್ಥೆ ಮುಂತಾದ ಹೊರಗಿನವರು ಹಾಕಿಕೊಟ್ಟ ಮಾದರಿಗಳಂತೆ ನಡೆಯಬೇಕಾಗಿದೆ.

ಇಂಥ ಅರ್ಥವಿಲ್ಲದ ಆಚಾರಗಳನ್ನು ಅನುಸರಿಸುವ ಜನ ಅರಿವಿಲ್ಲದವರು ಅಥವಾ ಸಮಾಜದಲ್ಲಿ ಮೇಲಕ್ಕೆ ಬರಬೇಕೆನ್ನುವವರು. ತಮ್ಮ ಪ್ರಚಾರಕೌಶಲದಿಂದ ಜಾಣ ವರ್ತಕರು ಗಿರಾಕಿಯಿಲ್ಲದ ಕಡೆ ಇವಕ್ಕೆ ಗಿರಾಕಿ ಹುಟ್ಟಿಸುತ್ತಾರೆ. ಈ ಆಚಾರ-ಪ್ರಚಾರಗಳಿಗೆ ಬಲಿಯಾಗುವ ಜನ ಕ್ರಮೇಣ ಆತ್ಮವಿಶ್ವಾಸವನ್ನು ಕಳೆದುಕೊಂಡು ದೀನರಾಗಿ, ತಮ್ಮ ರಚನಾಶಕ್ತಿಯನ್ನು ಬತ್ತಿಸಿ ಬಾಳನ್ನು ಬರೀ ಬೇಸರಾಗಿ ಮಾಡಿಕೊಳ್ಳುತ್ತಾರೆ.

ಬೊಂಬಾಯಿನ ಹಲವು ಚಾಳ್‌ಗಳನ್ನು ನೋಡಿದರೆ ಅಲ್ಲಿನ ಎಲ್ಲಾ ಮನೆಗಳಲ್ಲೂ ಏನಿರಬಹುದೆಂಬುದನ್ನು ಊಹಿಸಬಹುದು. ಒಂದೇ ರೀತಿಯ ಕುರ್ಚಿ-ಮೇಜುಗಳು, ಅದೇ ಹೂದಾನಿ, ಎಲ್ಲಾ ಒಂದೇ 'ಕಿಸಬಾಯಿ' ರೀತಿ. ಯಾವ ಮನೆಗೆ ಹೋದರೂ ಅದೇ. ವೈವಿಧ್ಯವಿಲ್ಲ, ನವ್ಯತೆಯಿಲ್ಲ, ಭಾವ-ಕಲ್ಪನೆ ಇಲ್ಲ; ಒಂದೇ ನಿರ್ಜೀವ ಮಾದರಿ. ಹಳೆಯ ಕಾಲದ ಗೋರಿಯಲ್ಲಾದರೂ ಕಲೆ-ಶಿಲ್ಪ ಕಂಡೀತು; ಬೊಂಬಾಯಲ್ಲಿ ಬದುಕಿರುವ ಜನರ ಮನೆಯಲ್ಲಿ ಕಾಣಲಾರದು. ಗೋರಿಗಳಲ್ಲಾದರೂ ಜೀವವಿದೆ, ಈ ಮನೆಗಳಲ್ಲಿ ಜೀವವೇ ಇಲ್ಲ. ಬದುಕನ್ನು ಹೀಗೆ ಸುಖಮಯ, ಸರಾಗ ಆಗಿ ಮಾಡುವ ನೆಪದಲ್ಲಿ ನಮಗೆ ಬೇಕಾದುದನ್ನೆಲ್ಲ ಮಾಡುವವನು ಉತ್ಪಾದಕ. ಜನರ ಉತ್ತಮ ಗುಣ-ಭಾವನೆಗಳನ್ನು ಲಯಗೊಳಿಸಿ ಪ್ರಗತಿ ಇಲ್ಲದಂತೆ ಮಾಡುತ್ತದೆ ಈ ಸರಾಗ.

ಬಾಳು ರಚನಾಮಯವಾಗಬೇಕೆಂದರೆ ಈ ಮೃತ್ಯುಸಮ ಏಕೈಕರೂಪ ಹೋಗಬೇಕು. ವ್ಯಕ್ತಿಯ ಅಭಿರುಚಿ ಪ್ರಕಟವಾಗಲು ಅವಕಾಶ, ಅನುಕೂಲ ಇರಬೇಕು. ತನ್ನ ಮನೆಯ ಸಾಮಗ್ರಿಗಳನ್ನು, ಮನೆಯನ್ನು ರಚಿಸುವ ಕಾರ್ಯ ತನ್ನ ವ್ಯಕ್ತಿತ್ವ ಪ್ರಕಟನೆಗೆ ಯೋಗ್ಯಕ್ಷೇತ್ರ. ನಮ್ಮ ಚಿಂತೆಯನ್ನು ತಗ್ಗಿಸುವ ನೆಪದಲ್ಲಿ ಭಾರಿ ಉತ್ಪಾದಕರು ಮಾನವ ವ್ಯಕ್ತಿತ್ವವನ್ನೂ ವೈಶಿಷ್ಟ್ಯವನ್ನೂ ನಾಶಮಾಡುತ್ತಿದ್ದಾರೆ. ಅಮೆರಿಕದಲ್ಲಿ 'ಸಿದ್ಧಗೃಹ'ಗಳನ್ನು ತಂದು ರಾತ್ರಿ-ರಾತ್ರಿಯೇ ಮನೆ ಕಟ್ಟಬಹುದು. ಏನೂ ಕಷ್ಟಪಡಬೇಕಾಗಿಲ್ಲ. ಉತ್ಪಾದಕನಿಗೆ ಟೆಲಿಫೋನ್ ಮಾಡಿ ಇಂಥ ಬೀದಿ. ಇಂಥ ಕಡೆ, ಇಂಥ ಮಾದರಿಯ ಮನೆ - ಅ,ಬ,ಕ,ಡ, - ಬೇಕು ಎಂದು ಹೇಳಿದರೆ ಸಾಕು, ಅದರ ಬಾಗಿಲು ಕಿಟಕಿ ಮೊದಲಾದವೆಲ್ಲ ಸಿದ್ಧವಾಗಿರುತ್ತವೆ. ಅವನ್ನು ತಂದು ಜೋಡಿಸಿಟ್ಟರಾಯಿತು. ಆಹಾರದಲ್ಲಿ ವೈಯಕ್ತಿಕ ರುಚಿಯೇ ಮುಖ್ಯ ತಾನೇ. ಅದರಲ್ಲಿಯೂ ತಮ್ಮ ಕುಶಲ ಪ್ರಚಾರದಿಂದ ಉತ್ಪಾದಕರು ವೈಯಕ್ತಿಕತೆಯನ್ನು ತೊಡೆದು ಹಾಕಿದ್ದಾರೆ. ಹಿಂದುಸ್ತಾನದ ಅಂಗಡಿಗಳಲ್ಲೂ 'ಸಿದ್ಧಾನ್ನ'ದ ಪೊಟ್ಟಣಗಳು ಬರುತ್ತಿವೆ. ಅಡಿಗೆ ಕಲೆಯನ್ನು ಸಾಯಿಸುತ್ತಿವೆ. ತನ್ನ ಪಾಕ ವಿದ್ಯೆಯ ಬಗ್ಗೆ ಹೆಮ್ಮೆಗೊಳ್ಳಬೇಕು ಹೆಂಗಸು. ಅದರ ಬದಲು ಉಪ್ಪಿನಕಾಯಿ, ಮುರಬ್ಬಾ, ಚಟ್ನಿ, ಮಕ್ಕಳ ಆಹಾರ ಮುಂತಾದವನ್ನು ಸಾವಿರಾರು ಮೈಲಿ ದೂರದಿಂದ ತರಿಸಿ ಒಂದೇ ಬೇಸರದ ಮಾದರಿಗೆ ಇಳಿಸಿದ್ದೇವೆ.

ವಿಚಾರ ಕಡಿಮೆಯಾದಷ್ಟು ಜೀವನಕ್ಕೆ ಮನುಷ್ಯ ಅಯೋಗ್ಯನಾಗುತ್ತಾನೆ. ಅವನ ರಚನೆಯೆ ಹಾಗಿದೆ. ಆದುದರಿಂದ ಗಿರಾಕಿಯ ಪರ ತಾನೇ ಎಲ್ಲಾ ವಿಚಾರವನ್ನೂ ಮಾಡುವ ಆಧುನಿಕ ಉತ್ಪಾದಕ ನಿಜವಾಗಿ ಗಿರಾಕಿಯನ್ನು ವಿಚಾರಹೀನನನ್ನಾಗಿ ಮಾಡುತ್ತಿದ್ದಾನೆ. ತಾಯಿ ಕೂಡ




ಮಗುವನ್ನು ಅಂಬೆಗಾಲಿಕ್ಕಲು, ಒಂದೆರಡು ಸಲ ಬೀಳಲು ಬಿಡುತ್ತಾಳೆ. ಮಗು ಒಂದು ಸಲವೂ ಬೀಳದಂತೆ, ಯಾವಾಗಲೂ ತಾನೇ ಅದನ್ನು ಎತ್ತಿಕೊಂಡು ಓಡಾಡಿದರೆ ಕಡೆಗೆ ಆ ಮಗುವಿಗೆ ನೆಟ್ಟಗೆ ನಿಲ್ಲುವ ರೂಢಿಯೇ ಇಲ್ಲವಾಗಿ ಅಂಗವಿಕಲವಾಗುತ್ತದೆ. ಈಗಿನ ಉತ್ಪಾದಕರಿಂದ ಸಮಾಜಕ್ಕೆ ಸಲ್ಲುವ ಸೇವೆ ಇದೇ.

ನಮ್ಮ ದೇಶದಲ್ಲಿ ನಿತ್ಯಜೀವನ ನಾನಾ ವಿಧವಾದುದು, ಬಹುಮುಖ್ಯವಾದುದು. ಮನುಷ್ಯನ ರಚನಾಸಾಮರ್ಥ್ಯಕ್ಕೆ ಹಲವಾರು ಬಗೆಗಳ, ನಾನಾ ಮೇಳನಗಳಲ್ಲಿ ಅವಕಾಶ ಕೊಡುವಂಥದು. ಬೇರೆ ಬೇರೆ ಪ್ರಾಂತ, ಸೀಮೆಗಳಲ್ಲಿ ಬೇರೆ ಬೇರೆ ರೀತಿ. ಒಂದೇ ಸೀಮೆಯಲ್ಲೂ ಬೇರೆ ಬೇರೆ ಗುಂಪುಗಳಲ್ಲಿ ಬೇರೆ ಬೇರೆ ರೀತಿಯ ಜೀವನ ವಿಕಾಸ. ಈ ಭಾರಿ ವರ್ತಕರ ಮಾಯಾಜಾಲಕ್ಕೆ ಮಾತ್ರ ಬೀಳದೇ ಇದ್ದರೆ, ನಮ್ಮಲ್ಲಿ ವ್ಯಕ್ತಿವಿಕಾಸಕ್ಕೆ, ಆತ್ಮಪ್ರಕಟನೆಗೆ ಇರುವ ದಾರಿ ಸಾವಿರಾರು. ಈಗಲೂ ಪಟ್ಟಣ, ನಗರಗಳನ್ನು ಬಿಟ್ಟರೆ ಹಳ್ಳಿಗಳಲ್ಲಿ ಇನ್ನೂ ಈ ಜಾಲ ಹರಡಿಲ್ಲ. ತೀರಾ ಕೊನೆಯ ಮೂಲೆಗಳಲ್ಲೂ ನಿಟ್ಟು ತಪ್ಪಿದ ಪ್ರಗತಿ ಕಾಲಿಡುತ್ತಿದ್ದರೂ ಇನ್ನೂ ಪರಿಸ್ಥಿತಿ ಹದಗೆಟ್ಟಿಲ್ಲ. ಈ ಸಾವಿನ ಸೋಂಕುರೋಗವನ್ನು ತಡೆಗಟ್ಟಲು ಕೂಡಲೇ ಏನಾದರೂ ಮಾಡಬೇಕು.

ರಚನಾಶೀಲ ವರ್ಗ ದೇಶಕ್ಕೆ ಸಾಮರ್ಥ್ಯದಾಯಕವಾಗಬಹುದು. ಭಾರಿ ಉತ್ಪಾದಕನೇ ಮುಖ್ಯ ಜೀವಾಳವಾದ ಈ ತಿರುಗುಮುರುಗು ವ್ಯವಹಾರದಲ್ಲಿ ಮಾನವನು ಬರೀ ಉತ್ಪನ್ನಭಕ್ಷಕ ಗಿರಾಕಿ ಆಗಿ ಪೂರಾ ನಿರ್ವೀರ್ಯನಾಗಿದ್ದಾನೆ. ಅತ್ಯಧಿಕ ಸಂಖ್ಯೆಯ ಈ ವರ್ಗದ ಜನ ಆಧುನಿಕ ಗಿರಣಿ ಕಾರಖಾನೆಗಳ ಭಾರಕ್ಕೆ ಪುಡಿಪುಡಿಯಾಗಿದ್ದಾರೆ. ಅವರ ರಚನಾಸಾಮರ್ಥ್ಯವೆಲ್ಲ ನಾಶವಾಗಿದೆ. ಈ ಬಗೆಯ ಬದುಕು ಕಲಾಕೃತಿಗಳನ್ನು ಸೃಷ್ಟಿಸುವುದಿಲ್ಲ. ಬರಿ ನಕಲುಗಳನ್ನು ನಿರ್ಮಿಸುತ್ತದೆ.

ಈಗ ಇಂಥ ವಸ್ತು ಬೇಕೆಂದು ಗಿರಾಕಿ ಕೇಳುವಂತಿಲ್ಲ. ಅವನು ಮಾಡುವ ವ್ಯವಹಾರವನ್ನು ಅರ್ಥಶಾಸ್ತ್ರ ಪಂಡಿತರು ಅರಿವಿಲ್ಲದೆ 'ಬೇಡಿಕೆ' ಎಂದು ಕರೆಯುತ್ತಾರೆ. ಅವನು ಏನನ್ನೂ ಬೇಡುವುದೇ ಇಲ್ಲ. ಅಂಗಡಿಯಲ್ಲಿ ಇದ್ದುದನ್ನು ಮಾತಾಡದೆ ಒಯ್ಯುತ್ತಾನೆ. ಬೇಡಿದುದನ್ನು ಕೊಡುವುದಿಲ್ಲ; ಕೊಡುವುದನ್ನೇ ಬೇಡುವಂತೆ ಮಾಡುತ್ತಾರೆ. ಎಲ್ಲಾ ತಲೆಕೆಳಗು! ಹಿಂದುಸ್ತಾನದ ವಿಷಯವೇ ಗೊತ್ತಿಲ್ಲದ ಇಂಗ್ಲೆಂಡ್ ಕೆಲಸಗಾರರು ಮಾಡಿದ ಚಪ್ಪಲಿಯನ್ನು ಅಥವಾ ಇನ್ನೆಲ್ಲೋ ಜಗತ್ತಿನ ಮೂಲೆಯಲ್ಲಿ ಮಾಡಿದುದನ್ನು ಕೊಳ್ಳಬೇಕು. ಕೇಳುವವರ ಕಾಲಿನ ಅಳತೆಗೆ ಚಪ್ಪಲಿ ಮಾಡುವುದಿಲ್ಲ. ಸಿದ್ಧವಾಗಿಟ್ಟಿದ್ದ ಚಪ್ಪಲಿಗಳಲ್ಲಿ ಕಾಲಿಟ್ಟು ಎಲ್ಲಕ್ಕಿಂತ ಹೆಚ್ಚು ಸರಿಹೊಂದುವುದನ್ನು ಕೊಳ್ಳಬೇಕು. ಈ ಕಾರಖಾನೆಗಳು ಸಿದ್ಧ ಮಾಡಿದ ಚಪ್ಪಲಿಗಳು ನಮ್ಮ ಯಾರ ಕಾಲಿಗೂ ಸರಿ ಹೋಗದಿದ್ದರೆ ಆಗ ಬರಿಗಾಲಲ್ಲಿ ಓಡಾಡುವ ರೂಢಿಯುಳ್ಳ ಅಬಿಸೀನಿಯಾದಂಥ 'ದೇಶಿ ಜನರ' ಸೀಮೆಯನ್ನು ಗೆದ್ದು ಅವರಿಗೆ 'ನಾಗರಿಕತೆ' ಕಲಿಸಿ, ಅವರಿಗೆ ಆ ಚಪ್ಪಲಿ ತೊಡಿಸಬೇಕು. ಗಿರಾಕಿಯೆ ಇಲ್ಲದೆ ವಸ್ತುನಿರ್ಮಾಣ ಮಾಡುವ ಈ ಪದ್ಧತಿಯೇ

ಈಗ ಕಲಹ-ಕಾಳಗಗಳಿಗೆ ಮುಖ್ಯ ಕಾರಣ. ಕುಲಾವಿಗಳಿವೆಯಲ್ಲ ಎಂದು ಕೂಸು ಹುಟ್ಟಬೇಕು. ಹೀಗೆ ಕೃತ್ರಿಮವಾಗಿ ಬೇಡಿಕೆಯನ್ನು ಸೃಷ್ಟಿಸುವಾಗ ಹಿಂಸೆ ಹೆಚ್ಚುತ್ತದೆ, ಲೋಕದ ಸಮತೂಕ ತಪ್ಪುತ್ತದೆ. ಮತ್ತೆ ತೂಕ ಸಮಮಾಡಿಕೊಳ್ಳುವ ಪ್ರಯತ್ನವೂ ಪುನಃ ಹಿಂಸೆಗೆ ಕಾರಣವಾಗುತ್ತದೆ.

ಸಮಾಜದಲ್ಲಿ ಸ್ಥಿರತೆ, ಅಹಿಂಸೆ ಇರಬೇಕಾದರೆ ಸಮಾಜರಚನೆಯಲ್ಲಿ ಕೊಳ್ಳುವ ಗಿರಾಕಿಯೇ ಮುಖ್ಯಾಂಶವಾಗಬೇಕು. ಅವನ ವೈಯಕ್ತಿಕ ಅಭಿರುಚಿಯೇ ಮುಖ್ಯವಾಗಬೇಕು. ಅಲ್ಲಲ್ಲಿ ಆಯಾ ಸ್ಥಳಗಳಲ್ಲಿಯೇ ದಿನಬಳಕೆಯ ವಸ್ತುಗಳನ್ನು ಗಿರಾಕಿಯ ಕಣ್ಣೆದುರಿಗೇ ಗುಡಿಸಲುಗಳಲ್ಲಿ ಅಣಿ ಮಾಡಿದಾಗಲೇ ಇದು ಸಾಧ್ಯ. ಅಂಥ ಪರಿಸ್ಥಿತಿಯಲ್ಲಿ ಮಾತ್ರವೇ ಗಿರಾಕಿ ತನ್ನ ವ್ಯಕ್ತಿತ್ವವನ್ನು ಬೆಳೆಯಿಸಿ ಪ್ರಕಟಗೊಳಿಸುವ ಮೌಲ್ಯಗಳನ್ನು ರೂಢಿಗೆ ತರಬಲ್ಲ. ಆಧುನಿಕ ಉತ್ಪಾದನ ವಿಧಾನ, ವಿಕ್ರಯ ವಿಧಾನಗಳು ಬಾಳನ್ನು ಬರಿ ಬದುಕಾಗಿ ಮಾಡಿವೆ. ಬಾಳು ಮಲತು ನಿಂತಿದೆ. ಗಾಳಿ ಆಡದೆ ಉಸಿರುಗಟ್ಟಿದಂತಾಗಿದೆ. ಈ ರಚನಾಶೀಲ ವರ್ಗಕ್ಕೆ ಸೇರಿದ ಜನ ಕ್ರಿಯಾಶೀಲರಾಗಿ ತಮ್ಮ ವ್ಯಕ್ತಿತ್ವವನ್ನು ಸಾಧಿಸಿದರೆ ಈ ಪರಿಸ್ಥಿತಿ ಬದಲಾಗುತ್ತದೆ. ಈ ವರ್ಗದ ಜನ ಈಗ ಒಪ್ಪಿಕೊಂಡು ಬಳಸುತ್ತಿರುವ ಹಣದ ಅಳತೆಯನ್ನು ಕೈಬಿಟ್ಟು, ವಿವಿಧ ಸಾಂಸ್ಕೃತಿಕ ಮೌಲ್ಯಗಳನ್ನು ಮತ್ತೆ ವ್ಯವಹಾರದಲ್ಲಿ ಪ್ರತಿಷ್ಠಿಸಿದರೆ, ಆ ಮೌಲ್ಯಗಳು ಜನಜೀವನವನ್ನು ರೂಪಿಸುವಂತೆ ಮಾಡಿದರೆ, ಆಗ ಎಲ್ಲವೂ ಸರಿಯಾದೀತು.

ಸಂಘ ಸುಧಾರಕ ವರ್ಗ: ಇದು ಸಂಘಜೀವನದ ಆರ್ಥಿಕ ವಿಧಾನದವರ ಕ್ಷೇತ್ರ. ಆದುದರಿಂದ ಪ್ರತಿಯೊಂದು ಸಂದರ್ಭದಲ್ಲೂ, ಯಾವುದನ್ನು ನಿರ್ಧರಿಸುವಾಗಲೂ ತನಗೇನು ಲಾಭ, ತನ್ನ ಗುಂಪಿಗೇನು ಪ್ರಯೋಜನ ಎಂಬುದಲ್ಲ ಒರೆ; ಸಮಾಜಕ್ಕೇನು ಲಾಭ ಎಂಬುದು. ಇಂಥ ಕ್ಷೇತ್ರದಲ್ಲಿ ಹಣಕ್ಕೆ ಬೆಲೆಯೇ ಇಲ್ಲ. ಹಣದ ಅಳತೆ ಇಲ್ಲಿ ಸಲ್ಲದು ಎಂಬುದನ್ನು ಹೇಳಬೇಕಾಗಿಯೇ ಇಲ್ಲ. ತಾತ್ಕಾಲಿಕ ಪ್ರಯೋಜನಕ್ಕಿಂತ ಚಿರಕಾಲದ ಲಾಭವೇ ಇಲ್ಲಿ ಮುಖ್ಯ.

ಇತ್ತೀಚೆಗೆ ಸಾಮಾಜಿಕ-ಆರ್ಥಿಕ ಪ್ರಯೋಗಗಳು ಹಲವು ನಡೆದಿವೆ. ಸೋವಿಯತ್ ಕಮ್ಯುನಿಸಮ್ಮನ್ನು ತಂದು ರಷ್ಯ ಈ ಪ್ರಯತ್ನ ಮೊದಲಿಟ್ಟಿತು. ಆಮೇಲೆ ಫ್ಯಾಸಿಸ್ಟರೂ ನಾಜೀಗಳೂ ಪ್ರಯೋಗ ನಡೆಸಿದರು. ಅವರ ಪ್ರಯೋಗಗಳು ಸ್ಥಿರತೆ, ಶಾಶ್ವತತೆ, ಅಹಿಂಸೆಗಳನ್ನು ತರಲಿಲ್ಲ. ವಿಫಲವಾದವು. ತದ್ವಿಪರೀತವಾಗಿ ಮಾನವ ಲೋಕವನ್ನು ನೆತ್ತರುಹೊಳೆಯಲ್ಲಿ ಮುಳುಗಿಸಿವೆ. ತಮ್ಮ ವರ್ಗಕ್ಕೆ, ದೇಶಕ್ಕೆ ಹತ್ತಿರದ ಅಡ್ಡದಾರಿ ಹುಡುಕುವುದರಲ್ಲಿ ಇಡೀ ಮಾನವಲೋಕದ ಮಹತ್ತರ ಪ್ರಶ್ನೆಯನ್ನು ಅವು ಮರೆತವು. ಸರಿಯೋ ತಪ್ಪೋ 'ನನ್ನ ದೇಶ ಮಾಡಿದುದೇ ಸರಿ' ಎಂಬ ಸೂತ್ರವನ್ನು ಕಲಿತವು. ಕಡೆಗೆ ಅದರಿಂದ ಹಿಂಸೆ ಪ್ರಳಯಗಳಿಗೆ ತುತ್ತಾದವು.

ಬಾಳಿಗೊಂದು ಸರಿಯಾದ, ಕ್ರಮವಾದ ಯೋಜನೆ ಅಗತ್ಯ. ಈ ಯೋಜನೆ ಸಫಲವಾಗಬೇಕೆಂದರೆ ಅದರ ಗುರಿ ಸಾರ್ವತ್ರಿಕವಾಗಿ ಅನ್ವಯಿಸುವಂತಿರಬೇಕು. ಜಗತ್ತಿನ ಶಾಶ್ವತ ನಿಯಮಗಳಿಗೆ ಅನುಗುಣವಾಗಿರಬೇಕು. ಕೇಂದ್ರಿತ ಕಾರಖಾನೆಗಳಲ್ಲಿ ಉತ್ಪತ್ತಿಯಾದ ವಸ್ತುಗಳನ್ನು ಮಾರುವ ನಿಮಿತ್ತ ದೇಶದಲ್ಲಿ ಆಚಾರ-ಸಂಪ್ರದಾಯಗಳನ್ನು ಹರಡುವ ಪ್ರಯತ್ನವಾಗಬಾರದು.

ನಮ್ಮ ದೇಶದಲ್ಲಿ ಈ ಕ್ಷೇತ್ರದ ಜನರಿಗೆ ಬೇಕಾದಷ್ಟು ಕೆಲಸವಿದೆ. ಹಳ್ಳಿಯ ಜೀವನ ಸುಗಮವಾಗುವಂತೆ ಕಾರ್ಯಕ್ರಮಗಳನ್ನು ರೂಪಿಸಬಲ್ಲ ಜನರು ಹಳ್ಳಿಯವರಿಗೆ ಬಹಳ ಅಗತ್ಯ. ಅಡವಿಯ ಮೃಗಗಳಿಗಾದರೂ ಹೊಟ್ಟೆ ತುಂಬ ಅನ್ನ ಸಿಗುತ್ತದೆ. ಹಳ್ಳಿಯ ಜನಕ್ಕೆ ಈಗ ಅದೂ ಇಲ್ಲ. ಈಗಿನ ಸಾಮಾಜಿಕ ಆರ್ಥಿಕ ಪರಿಸ್ಥಿತಿ ಪ್ರಯತ್ನಶೀಲತೆಯನ್ನೇ ಕೊಲ್ಲುತ್ತಿದೆ. ಅಸಹಾಯರಾದ ಜನಕೋಟಿಯ ಜೀವನವನ್ನು ಸರಿ



ರವಿವಾರದ ರಜೆ, ವಿಶ್ರಾಂತಿ ಪಡೆಯುತ್ತೇ... ಹೊರಗೂ ಅಡಿಗೆ ಮಾಡಬೇಕಲ್ಲಾ... ಕಣೇ.....

ಯಾಗಿ ವ್ಯವಸ್ಥೆಗೊಳಿಸಿ, ಅವರು ಮಾನವ ಸಹಜ ಜೀವನ ನಡೆಸುವಂತೆ ಮಾಡುವದು ಈ ವರ್ಗದವರ ಕೆಲಸ.

ಈ ಗುರಿಯನ್ನು ಮುಟ್ಟಲು ಯೋಜನೆ ಮಾಡುವದೆಂದರೆ ನಾವು ಯಾವ ರೀತಿಯ ಜೀವನಕ್ಕಾಗಿ ಪ್ರಯತ್ನಿಸಬೇಕೋ ನಿರ್ಧರಿಸಬೇಕು. ಆ ಕಲ್ಪನೆ ಯೋಗ್ಯವಾದುದಾದರೆ ಸಮಾಜದಲ್ಲಿರುವ ಸಮಸ್ತ ವ್ಯಕ್ತಿಗಳಿಗೂ ಅವರ ರಚನಾಶಕ್ತಿ ಪ್ರಕಟನೆಗೆ ಅವಕಾಶವಾಗುತ್ತದೆ. ಸಹಜವಾದ ಜೀವನ ಪದ್ಧತಿಯನ್ನು ಉತ್ತಮಗೊಳಿಸಲಾಗಲಿ ಕೆಳಗಿಳಿಸಲಾಗಲಿ ಒಂದು ತಲೆಮಾರಿನಲ್ಲಿ ಸಾಧ್ಯವಿಲ್ಲ. ಹಾಗೆ ಮಾಡಲು ಹೋದರೆ ಪರಿಣಾಮ ದಾರುಣವಾಗುತ್ತದೆ. ಪ್ರಕೃತಿಯು ಕೋಟ್ಯಂತರ ವರ್ಷಗಳಿಂದ ಮಾನವನ ಜೀವನವನ್ನು ರೂಪಿಸುತ್ತ ಬಂದಿದೆ. ನಮಗಿರುವ ಜೀರ್ಣಕೋಶದಂಥ, ದಕ್ಷವಾದರೂ ಅತ್ಯಂತ ಸರಳವಾದ, ಯಂತ್ರವನ್ನು ಯಾವ ವಿಜ್ಞಾನಿಯೂ ರಚಿಸಲಾರ. ಹೃದಯದಂಥ ಸ್ವಯಂಚಾಲಕ ಸ್ವಯಂಶಾಸಕ ಯಂತ್ರವನ್ನು ಯಾವ ಯಂತ್ರಶಾಸ್ತ್ರಜ್ಞನೂ ನಿರ್ಮಿಸಲಾರ. ವಿಂತಿಯೋ ತಂತಿಯೋ, ಯಾವ ಮಾರ್ಕೊನಿಯೂ ನಮ್ಮ ನರಗಳ ಸಮೂಹದಂಥ ವಾರ್ತಾವಾಹಿನಿಯನ್ನು ರೂಪಿಸಲಾರ. ಮಾನವನ ದೇಹ ಮತ್ತು ಮನಸ್ಸುಗಳ ಸಹಜಕ್ರಿಯಾವಿಧಾನವನ್ನು ಅಜ್ಞಾನಿ ಮನುಷ್ಯ ಹೊಸದಾಗಿ ರಚಿಸಲೂ ಆರ, ಬದಲಿಸಲೂ ಆರ, ಆದುದರಿಂದ ತನ್ನ ಮನಸ್ಸಿಗೆ ತೋಚಿದಂತೆ ಜೀವನದ ದಿಕ್ಕನ್ನು ಬದಲಿಸಲು ಮಾಡಿದ ಮನುಷ್ಯ ಪ್ರಯತ್ನವೆಲ್ಲವೂ ವ್ಯರ್ಥ. ನಾವು ಮಾಡಬೇಕಾದುದೆಲ್ಲ ಪ್ರಕೃತಿಯೊಡನೆ ಸಹಕರಿಸುವುದು. ಅತ್ಯುತ್ತಮ ರೀತಿಯಲ್ಲಿ ಪ್ರಕೃತಿ ತನ್ನ ಕೆಲಸ ನಡೆಸಲು ತಕ್ಕ ಪರಿಸ್ಥಿತಿಯನ್ನು ಕಲ್ಪಿಸಿಕೊಡುವುದು. ಈ ರೀತಿ ಈ ವಿಧಾನವು ಪ್ರಕೃತಿ ನಿರ್ಮಿತ. ಅದನ್ನರಿತು ಪ್ರಕೃತಿಗೆ ಏನು ನೆರವು ಬೇಕೊ ಅದನ್ನು ಒದಗಿಸುವದು ಮನುಷ್ಯನ ಕೆಲಸ. ಪ್ರಕೃತಿಯ ವಿಧಾನಕ್ಕೆ ತಪ್ಪಿ ನಡೆದರೆ ಸಾಮಾಜಿಕ ಅವ್ಯವಸ್ಥೆಯೇ ಫಲ.

ದೇಹಕ್ಕೆ ಒಂದು ಸಾಮಾನ್ಯ ಶಾಖದ ಪ್ರಮಾಣ ಇದೆ. ಅದನ್ನು ಬದಲಿಸಲು ಪ್ರಯತ್ನಿಸುವದು ವ್ಯರ್ಥ ಎಂದು ವೈದ್ಯರಿಗೆಲ್ಲ ಗೊತ್ತು. ಸಾಮಾನ್ಯ ಪ್ರಮಾಣಕ್ಕಿಂತ ಹೆಚ್ಚಾದರೆ ಜ್ವರ ಬರುತ್ತದೆ; ಕಡಿಮೆಯಾದರೆ ನಿತ್ರಾಣ, ನೀರಸತೆ ಬರುತ್ತದೆ. ಎರಡಕ್ಕೂ ಸಾವೇ ಕೊನೆ. ಹೃದಯವನ್ನೇ ತೆಗೆದುಕೊಳ್ಳಿ. ಅದರ ಗತಿಯನ್ನು ಅತಿಯಾಗಿ ಹೆಚ್ಚಿಸಿದರೆ ತಡೆದೀತೆ? ಮಿತಿ ಮೀರಿದರೆ ರಕ್ತದ ಒತ್ತಡ ಪ್ರಾರಂಭವಾಗುತ್ತದೆ. ಹೀಗೆಯೇ ಮಾನವ ಜೀವನದ ಆವಶ್ಯಕತೆಗಳಿಗೆ ಒಂದು ಇತಿಮಿತಿ ಇದೆ. ಅಷ್ಟನ್ನು ಪೂರೈಸಿದರೆ ಬಾಳು ಉತ್ತಮವಾಗಿ ನಡೆಯುತ್ತದೆ. ಆ ಇತಿಮಿತಿಯನ್ನು ಕಾಲಕಾಲಕ್ಕೆ ನಿರ್ಧರಿಸಿ ಅದನ್ನು ಪಾಲಿಸಲು ಮಾಡಬೇಕಾದ ಕಾರ್ಯಕ್ರಮವೇ ಯೋಜನೆ.

ಆದರೆ ದುರ್ದೈವದಿಂದ ಈಗ ಹಣವೇ ದೊಡ್ಡದಾಗಿ ಮಾನವೀಯ ವ್ಯಕ್ತಿತ್ವ ಚಿಕ್ಕದಾಗಿದೆ. ಸರ್ವೇ ಜನಾಃ ಕಾಂಚನಮಾತ್ರಯಂತಿ. ಹಣವೆಂದರೆ ಹೆಣವೂ ಬಾಯಿ ಬಿಡುತ್ತದೆ ಎಂಬ ಗಾದೆಯನ್ನೆ ನಮ್ಮವರು ಹುಟ್ಟಿಸಿದ್ದಾರೆ.

ಎಷ್ಟೋ ಯೋಜನೆಗಳು ಬಂದಿವೆ. ಹೆಚ್ಚು

ಹೆಚ್ಚು ವಸ್ತುಗಳನ್ನು ಉತ್ಪಾದನ ಮಾಡುವುದೇ ಎಲ್ಲಕ್ಕೂ ಗುರಿ. ಮಾನವನ ಸ್ವಭಾವವನ್ನು ಉತ್ತಮಗೊಳಿಸುವ ಯೋಜನೆಯೇ ಇಲ್ಲ. ಇಂಥ ಯೋಜನೆಗಳೆಲ್ಲ ಮೇಜಿನ ಮೇಲಿನ ಪೂದಾನಿಯಲ್ಲಿ ಹರಿದು ತಂದಿಟ್ಟ ಹೂವಿನ ಹಾಗೆ ಒಂದೆರಡು ಗಂಟೆಯ ಹೊತ್ತು ಆ ಹೂ ಬಣ್ಣ ಬಣ್ಣವಾಗಿ ಗಮಗಮಿಸುತ್ತದೆ. ಗಿಡದಿಂದ ಹರಿದು ತಂದ ಕಾರಣ ಬೇಗನೆ ಬಾಡಿ ಹೋಗುತ್ತದೆ. ಅದರ ಸೊಬಗು ಒಂದೇ ಗಳಿಗೆಯದು.

ಯೋಜಕರು ತೋಟಗಾರನ ಹಾಗಿರಬೇಕು. ತೋಟಗಾರ ಮೊದಲು ನೆಲವನ್ನು ಹದಮಾಡುತ್ತಾನೆ. ಆಮೇಲೆ ಬೀಜ ಬಿತ್ತಿ ನೀರು ಹಾಯಿಸುತ್ತಾನೆ. ತನ್ನ ಕೆಲಸ ಮಾಡಿ ತಾನು ದೂರ ಸರಿಯುತ್ತಾನೆ. ಆ ಗಿಡ ತನ್ನ ಸ್ವಾಭಾವಿಕ ಸಾಮರ್ಥ್ಯದಿಂದ ನೆಲದೊಳಗಿನ ಆಹಾರವನ್ನು ಹೀರಿಕೊಂಡು ಬೆಳೆದು ಹೂ ಬಿಡುತ್ತದೆ. ಎಷ್ಟೇ ಸೊಗಸಾಗಿ ಅಲಂಕಾರವಾಗಿ ಇಟ್ಟರೂ ಬಣ್ಣದ ಪೂದಾನಿಯ ಹೂಗಳು ಕ್ಷಣಿಕ; ಅದರಲ್ಲಿ ಸಾವು ಅಡಗಿದೆ. ತೋಟದಲ್ಲಿನ ಹೂವಿನ ಗಿಡವಾದರೋ ಸ್ಥಿರ; ನೆಲದೊಳಗಿನ ರಸವನ್ನು ತನ್ನ ಬೇರುಗಳಿಂದ ಹೀರುತ್ತದೆ; ಅದು ಜೀವನ ಗಿಡದಲ್ಲಿ ಒಂದೆರಡು ಹೂ ಬಾಡಿದರೂ ಉಳಿದವು ಅರಳುತ್ತವೆ.

ಇದೇ ರೀತಿ ಯಾವ ಯೋಜನೆಯಾದರೂ ಮನುಷ್ಯ ಮತ್ತು ಪ್ರಾಣಿಗಳ ಬೆಳವಣಿಗೆಗೆ ತಕ್ಕ ಪರಿಸ್ಥಿತಿಯನ್ನು ನಿರ್ಮಿಸಬೇಕು. ಯೋಜನೆಗಳ ಉದ್ದೇಶ ಯಾವುದೋ ಒಂದು ಗುರಿ-ಗಮ್ಯ ಅಲ್ಲ. ಇಂತಿಷ್ಟು ಕೆಲಸ ಆಗಬೇಕು ಎಂದು ನಿರ್ಧರಿಸಿ ಅದಕ್ಕಾಗಿ ಯತ್ನಿಸುವದು ಪ್ರಕೃತಿಯ ಸ್ವಭಾವವಲ್ಲ. ಅದರಿಂದ ಬಲವಂತವಾಗಿ ಕೆಲವು ಫಲ ದೊರೆತಾವು. ಆ ಫಲ ಸಹಜವಲ್ಲವಾದುದರಿಂದ ಬೇಗ ಬಾಡಿಹೋಗುತ್ತವೆ. ಆ ಮೂರು ಗಳಿಗೆಯ ಫಲಭೋಗದ ತರುವಾಯ ಸಾವೇ ಬರಬಹುದು. ಕೃತಕವಾದುದು ಯಾವುದೂ ಹೆಚ್ಚು ಕಾಲ ಬದುಕಲಾರದು.

ಮನುಷ್ಯನ ಶಕ್ತಿಗಳೆಲ್ಲ ವಿಕಸಿತವಾಗಿ ಅವನು ಪೂರ್ಣವಾಗಿ ಬೆಳೆಯಲು ಸರ್ವಾನುಕೂಲವೂ ಆಗುವಂತೆ ಪರಿಸ್ಥಿತಿ ವಾತಾವರಣಗಳನ್ನು ನಿರ್ಮಿಸುವುದೇ ಯೋಜನೆಯ ಪ್ರಥಮೋದ್ದೇಶ್ಯ. ಪ್ರತಿಯೊಬ್ಬ ಮನುಷ್ಯನಿಗೆ ಹೊಟ್ಟೆ ತುಂಬಾ ಪುಷ್ಟಿಕರವಾದ ಆಹಾರ ಸಿಗಬೇಕು. ಮಳೆ, ಗಾಳಿ, ಚಳಿಗಳ ಬಾಧೆಗೆ ಮೈ ಒಳಗೊಳ್ಳದಷ್ಟು ಹೊದಿಕೆ ಬೇಕು. ಇರಲು ವಸತಿ ಬೇಕು. ಮೈಮನಗಳನ್ನು ಬಾಳಿನ ಭವ್ಯಕಾರ್ಯಕ್ಕೆ ಅಣಿಗೊಳಿಸುವ ಶಿಕ್ಷಣ ಬೇಕು. ಆರೋಗ್ಯಕರ ಸನ್ನಿವೇಶವಿರಬೇಕು. ಪರಸ್ಪರ ಸಹವಾಸಕ್ಕೆ ವಸ್ತುಗಳ ಉತ್ಪಾದನೆ ವಿನಿಮಯಕ್ಕೆ ಅನುಕೂಲಗಳು ಬೇಕು. ಯೋಜನೆಗಾರರ ಉದ್ದೇಶಗಳು ಇವು. ಇವಕ್ಕಿಂತ ಹೆಚ್ಚಿನದನ್ನೆಲ್ಲ ಆಯಾ ವ್ಯಕ್ತಿಯ ಶಕ್ತಿಸಾಮರ್ಥ್ಯಗಳಿಗೇ ಬಿಡಬೇಕು. ಆಗಲೇ ಅವರಿಗೆ ತಮ್ಮ ಸಂಕಲ್ಪ ಶಕ್ತಿಯನ್ನೂ ಮೌಲ್ಯನಿರ್ಧಾರವನ್ನೂ ಉಪಯೋಗಿಸಿ ತಮ್ಮ ಬಾಳನ್ನು ಬರೀ ಬದುಕಾಗಿ ಮಾಡದೇ, ಸಂಸ್ಕಾರವಂತ ರಚನೆಯಾಗಿ ಮಾಡಿ ಮಾನವ ಜಾತಿಯ ಪ್ರಗತಿಗೆ ತಮ್ಮ ಸ್ಥಿರ-ಶಾಶ್ವತ ಕಾಣಿಕೆಯನ್ನು ಸಲ್ಲಿಸಲು ಸಾಧ್ಯವಾಗುತ್ತದೆ.

ತಾನು ಆರಿಸಿಕೊಳ್ಳುವ ಜೀವನ-ವಿಧಾನ ಇತರರ ಸುಖಸಾಧನಕ್ಕೆ, ಹಕ್ಕಿಗೆ ಅಡ್ಡ ಬಾರದಿದ್ದರಾಯಿತು. ಯಾವ ಯೋಜನೆಯೂ ಮನುಷ್ಯನ ಈ ಸ್ವಾತಂತ್ರ್ಯವನ್ನು ತನ್ನ ಮನಸ್ಸೊಪ್ಪಿದ ಜೀವನ ವಿಧಾನವನ್ನು ಅವಲಂಬಿಸುವ ಅಧಿಕಾರವನ್ನು ಕಿತ್ತುಕೊಳ್ಳಲಾರದು. ಯೋಜನೆಯ ಕೆಲಸ ಮನುಷ್ಯನಿಗೆ ಕನಿಷ್ಠ ಮಿತಿಯ ಜೀವನಾನುಕೂಲತೆಯನ್ನಾದರೂ ಒದಗಿಸುವದು. ಅದನ್ನು ಮೀರಿ ಪ್ರತಿಯೊಬ್ಬನಿಗೂ ತನ್ನ ತನ್ನ ಬೆಲೆಗಳ ಪ್ರಕಾರ ಬದುಕಲು ಅವಕಾಶವಿರಬೇಕು. ಹಾಗಿಲ್ಲದೆ ಈ ಸ್ವಾತಂತ್ರ್ಯವನ್ನು ಮೊಟಕಿಸಿ, ಮನುಷ್ಯ ತನ್ನ ಮೌಲ್ಯಗಳನ್ನು ನಿರ್ಧರಿಸಿ ಅದರಂತೆ ನಡೆಯಲು ಸಾಧ್ಯವಿಲ್ಲದಂತೆ ಮಾಡುವ ನಿಷ್ಠುರ ಯೋಜನೆ ಮನುಷ್ಯನನ್ನು ಒಂದು ಯಂತ್ರದ

ಪೊಳೆ, ಕಂಬಿ ಆಗಿಸಿ ಬಿಡುತ್ತದೆ. ಹಾಗೆ ಹುಟ್ಟಿದಂದಿನಿಂದ-ಸಾಯುವವರೆಗೆ ಬದುಕು ಪರತಂತ್ರವಾದರೆ, ಅದರಲ್ಲಿ ಎಷ್ಟೇ ಕ್ಷಮತೆ ಇದ್ದರೂ ಅದು ವ್ಯರ್ಥ. ಮನುಷ್ಯನ ವ್ಯಕ್ತಿತ್ವದ ಪ್ರಕಟನೆಗೆ ಅವಕಾಶವಿರಬೇಕೆಂಬುದೇ ಮೊಟ್ಟಮೊದಲನೆ ನಿಯಮ. ಅದೇ ಇಲ್ಲದ ಮೇಲೆ ಏನಿದ್ದೇನು?

ನಿಯಮ ನಿಯಂತ್ರಣ ಸಾಮೂಹಿಕ ಕರ್ಮಕ್ಕೆ; ಕಾರ್ಖಾನೆ, ಸೈನ್ಯಗಳಲ್ಲಿ ಒಟ್ಟಾಗಿ-ಗುಂಪಾಗಿ ಕೆಲಸ ಮಾಡುವ ಜನರಿಗೆ; ವ್ಯಕ್ತಿತ್ವ ವಿಕಾಸವೇ ಗುರಿಯಾದ ವೈಯಕ್ತಿಕ ಕರ್ಮಕ್ಕಲ್ಲ. ಸಾಮೂಹಿಕ ಕರ್ಮದಲ್ಲಿ ವ್ಯಕ್ತಿ ಮುಖ್ಯವಲ್ಲ; ಇಷ್ಟು ಆಳುಗಳಲ್ಲಿ ಅವನೂ ಒಂದಾಳು. ಆ ಕೆಲಸವೇ ಮುಖ್ಯ. ನಮಗೆ ವ್ಯಕ್ತಿಯ ವಿಕಾಸವೇ ಗುರಿ. ಸಂಘ ಸಂಸ್ಥೆ ಅದಕ್ಕೆ ಸಾಧನ. ಇಲ್ಲಿ ನಿಯಮ-ನಿಯಂತ್ರಣಗಳಿಗೆ ಎಡೆಯಿಲ್ಲ.

ಉತ್ತಮ ವ್ಯವಸ್ಥೆಯುಳ್ಳ ಗೋಶಾಲೆಯಲ್ಲಿ ಹಸುಗಳಿಗೆ ಸರಿಯಾಗಿ ಸಮವಾಗಿ ಬೆರೆಸಿದ ಹಿಂಡಿ-ತಿಂಡಿಯನ್ನು, ನೀರು ಉಪ್ಪನ್ನು ಕಾಲಕ್ಕೆ ಸರಿಯಾಗಿ ಕೊಡುತ್ತಾರೆ. ಬೆಚ್ಚಗಿರುವ ಮನೆಯಲ್ಲಿ ಕಟ್ಟುತ್ತಾರೆ. ಬಿಸಿಲಿನಲ್ಲಿ ಸಾಕಷ್ಟು ವ್ಯಾಯಾಮ, ನಿತ್ಯ ಸ್ನಾನ, ಮೈ ತಿಕ್ಕುವದು ಕಾಲಕ್ಕೆ ಸರಿಯಾಗಿ ಹಾಲು ಹಿಂಡುವದು ಎಲ್ಲವೂ ನಡೆಯುತ್ತನೆ. ಆದರೆ ಮೃಗ ಜೀವನಕ್ಕಿಂತ ಮೇಲೇರ ಬಯಸಿದ ಮನುಷ್ಯ ಪ್ರಾಣಿಗೆ ಈ ಬಗೆಯ ಜೀವನ ಉಪಯೋಗವಿಲ್ಲ. ಒಳ್ಳೆಯ ಜೈಲಿನಲ್ಲಿ ಈ ವ್ಯವಸ್ಥೆಯೆಲ್ಲಾ ಇದ್ದೀತು. ಜೈಲಿನಲ್ಲಿ ಊಟ, ನಿದ್ದೆ, ವಿಶ್ರಾಂತಿ ಯಾವುದನ್ನು ಬಿಟ್ಟರೂ ತಪ್ಪೇ. ಅದರಿಂದ ಆರೋಗ್ಯ ಕೆಟ್ಟೀತು. ಸೆರೆಯಾಳಿನ ದೇಹಾರೋಗ್ಯದ ಬಗ್ಗೆ ಅಷ್ಟು ಗಮನ. ಆದರೆ ಕ್ರಿಯಾಸ್ವಾತಂತ್ರ್ಯ, ರುಚಿ ಸ್ವಾತಂತ್ರ್ಯ ಇಲ್ಲದ ಆ ಬಾಳು ಬಾಳಲ್ಲ.

ಆದುದರಿಂದ ಅಸಾಧ್ಯ ನಿರ್ಬಂಧಗಳ ಕೋಟೆ ಕಟ್ಟಿ ಬಾಳನ್ನು ಸೆರೆಮನೆಯ ವಾಸದಂತೆ ಮಾಡಬಾರದು. ಯೋಜನೆ ತೋಟಕ್ಕೆ ಬೇಲಿಯಿರುವ ಹಾಗೆ ರಕ್ಷಣೆಯ ಕೆಲಸ ಮಾಡಬೇಕು. ಗಾಳಿ ಹಾಗೂ ಬೆಳಕೇ ಬಾರದಂತೆ ಮಾಡಿದರೆ ಬೇಲಿಯೇ? ಈ ವರ್ಗಕ್ಕೆ ಸೇರಿದ ಜನರು ತಮ್ಮ ಬಾಳನ್ನು ಲೋಕಹಿತಕ್ಕಾಗಿ ಸಮರ್ಪಣೆ ಮಾಡುತ್ತಾರೆ. ಅವರ ಸಮರ್ಪಿತ ಜೀವನವು ಲೋಕದಲ್ಲಿ ಸ್ವತಂತ್ರ ಜೀವನವನ್ನು ರೂಪಿಸುವ ಯೋಜನೆಗಳಲ್ಲಿ ನಿರತವಾಗಬೇಕು.

ಉದಾತ್ತ ಜೀವನ ಕ್ಷೇತ್ರ: ಇದು ಸೇವಾ ಜೀವನದ ವರ್ಗ. ಈ ಕ್ಷೇತ್ರದಲ್ಲಿ ಹಕ್ಕು-ಅಧಿಕಾರ ಇಲ್ಲವೇ ಇಲ್ಲ. ಎಲ್ಲವೂ ಕರ್ತವ್ಯ-ಕರ್ಮ. ಇಲ್ಲಿ ಸಂಕಲ್ಪ ಬಲದ ಉಪಯೋಗ ಇಂದ್ರಿಯ ಮತ್ತು ಜೀವನದ ನಿಗ್ರಹಕ್ಕೆ ಸ್ವಾರ್ಥದ ಸಂಯಮಕ್ಕೆ; ಎಲ್ಲ ಕೃತಿ ಕರ್ಮವನ್ನೂ ಯೋಗ್ಯಮಾರ್ಗದಲ್ಲಿ ಹರಿಯಿಸಲಿಕ್ಕೆ ಇಲ್ಲಿನ ಮೌಲ್ಯಗಳು ಲೋಕಹಿತ-ಸಾಧಕ; ಸ್ವಾರ್ಥ, ಸಂತೋಷ ಸಾಧಕವಲ್ಲ. ಆದುದರಿಂದ ಇಲ್ಲಿ ಸ್ವಲಾಭವಲ್ಲ ಗುರಿ. ತಾತ್ಕಾಲಿಕ ಫಲವಲ್ಲ. ದೂರದ ಚಿರಫಲ.

ಈ ವರ್ಗದ ವ್ಯಕ್ತಿಯು ರಚನಾಶೀಲನಾಗುವ ಮೊದಲು ಸಮಾಜದ ಗುಣದೋಷಗಳೊಡನೆ ತಾದಾತ್ಮ್ಯ ಹೊಂದಬೇಕು. ಬರಿ ಬುದ್ಧಿಯಿಂದ ಯಾವ ಕೆಲಸವೂ ಇಲ್ಲಿ ಸಾಧ್ಯವಿಲ್ಲ. ತನ್ನ ಬಾಳಿನಲ್ಲಿ ಪ್ರತಿಯೊಂದನ್ನೂ ಪ್ರಯೋಗ ಮಾಡಿ ಅಲ್ಲಿ ಫಲ ಸಿದ್ಧಿಯಾದರೆ ಆಮೇಲೆ ಲೋಕದ ಮುಂದ ಆ ಮಾತನ್ನು ಆಡಬೇಕು. ಆಹಾರ ಶಾಸ್ತ್ರಪಂಡಿತ ಮೊದಲು ಇಲಿ, ಕೋತಿ, ಹಂದಿಗಳನ್ನು ಹಿಡಿದು ಪ್ರಯೋಗ ನಡೆಸುತ್ತಾನೆ. ಬೇರೆ ಬೇರೆ ಆಹಾರ, ಅದರ ಪರಿಣಾಮ ಎಲ್ಲವೂ ಇಲ್ಲಿ ಗೊತ್ತಾದ ಮೇಲೆ ಮನುಷ್ಯರಿಗೆ ಯಾವ ಆಹಾರ ಸರಿ ಎಂದು ಸಿದ್ಧಾಂತ ಮಾಡುತ್ತಾರೆ. ಹಾಗೆಯೇ ಎಲ್ಲಾ ಸಮಾಜ ಸುಧಾರಣೆಗಳಲ್ಲೂ ಮಾನವ ಜೀವನದಲ್ಲಿ ಹೊಸ ಹೊಸ ವಿಚಾರಗಳ ಪ್ರಯೋಗ ನಡೆಯಬೇಕು. ಆದುದರಿಂದ ಈ ವರ್ಗದ ಜನ ಪ್ರಯೋಗ ಮಾಡುವ ಪಂಡಿತರೂ ಆಗಬೇಕು. ಪ್ರಯೋಗಕ್ಕೆ ಗುರಿಯಾಗುವ ಪ್ರಾಣಿಗಳೂ ಆಗಬೇಕು. ತಮ್ಮ ಬಾಳಿನ

> ಭೂಮಿಯು
> ಗುರುತ್ವಾಕರ್ಷಣೆಗೆ
> ಒಳಗಾಗಿ
> ಆಗಾಗ ಭೂಮಿಗೆ
> ಬಂದು ಬೀಳುವ
> ಉಲ್ಕಾಪಾತ
> ದಂತೆ!
>
> ● ಸುಬ್ರಾಯ ಗಾಂವ್ಕರ್

ಲ್ಲಿಯೇ ಪ್ರಯೋಗ ಮಾಡಬೇಕು.

ಕಟ್ಟಕಡೆಯ ಈ ವರ್ಗದವರು ಜನತೆಗಾಗಿ ಯೋಜನೆ ಮಾಡಬೇಕು. ಆ ಯೋಜನೆಗೆ ಪ್ರಯೋಗಸಿದ್ಧ ತತ್ವಗಳೇ ಆಧಾರವಾಗಬೇಕು. ಮನಸ್ಸಿದ್ದಲ್ಲಿ ಮಾದೇವ. ಇತರರ ದುಃಖವನ್ನು ನಾವು ಅರಿತರೆ ನಮಗೆ ರಚನಾ ಸಾಮರ್ಥ್ಯವಿದ್ದರೆ ಆ ದುಃಖನಿವಾರಣೆಗೆ ಮಾರ್ಗ ಸ್ಫುರಿಸಿಯೇ ತೀರುತ್ತದೆ. ಈ ವರ್ಗದ ವ್ಯಕ್ತಿಯು ಪರರಿಗಾಗಿ ತಪಿಸಿಯಾನು, ದುಃಖವನ್ನನುಭವಿಸಿಯಾನು. ತನ್ನದಕ್ಕಿಂತ ಪರರ ಭಾವನೆಗಳಿಗೇ ಗಮನಕೊಟ್ಟಾನು. ಅವರ ಇಂಗಿತವರಿತಾನು. ಅಳುವವರೊಡನೆ ಅತ್ತಾನು, ನಲಿವವರೊಡನೆ ನಲಿದಾನು. ಅವನ ಮೌಲ್ಯಗಳು ಪರಹಿತಕಾರಿ ಮೌಲ್ಯಗಳು. ತನ್ನ ಹಕ್ಕು-ಅಧಿಕಾರಿಗಳ ಪರಿವೆಯೇ ಅವನಿಗಿಲ್ಲ. ಅನಾಥರನ್ನು ಕಾಯುವುದರಲ್ಲಿ, ಗೆಳೆಯರಿಲ್ಲದವರಿಗೆ ಗೆಳೆಯನಾಗುವದರಲ್ಲಿ ತನ್ನ ಪಿತೃತ್ವವನ್ನು ಉದಾತ್ತಗೊಳಿಸಿ, ವಸುಧೈವ ಕುಟುಂಬಕನಾದಾನು.

ವಿಜ್ಞಾನಿಗಳೆಷ್ಟೋ ಮಂದಿ ಪ್ರಯೋಗಗಳಲ್ಲಿ ತಾವೇ ಆಹುತಿಯಾಗಿದ್ದಾರೆ. ಆ ಹುತಾತ್ಮರ ಬಲಿದಾನವೇ ಮಾನವ ಪ್ರಗತಿ ಪಥದ ಕೈಗಂಬ. ಗಾಂಧೀಜಿ ಸರ್ವವಸ್ತ್ರ ಪರಿತ್ಯಾಗ ಮಾಡಿ ಕೇವಲ ಕೌಪೀನ ಧಾರಿಯಾದುದಕ್ಕೆ ಕಾರಣ ನಮ್ಮ ದೇಶದ ನಿರ್ಗತಿಕ ಅರ್ಧ ನಗ್ನ ಜನ ಕೋಟಿಯೊಡನೆ ಆತ್ಮೌಪಮ್ಯವನ್ನು ಸಾಧಿಸುವ ಉದ್ದೇಶದಿಂದ.

ಸಾಮಾಜಿಕ - ಆರ್ಥಿಕ ಸಮಸ್ಯೆಗಳಿಂದ ತುಂಬಿದ ನಮ್ಮೀ ದೇಶದಲ್ಲಿ ಜನತೆಯು ದುಃಖ-ದಾರಿದ್ರ್ಯ-ದೈನ್ಯಗಳನ್ನು ತಮ್ಮ ಸ್ವಂತ ಜೀವನದಲ್ಲಿ ಅನುಭವಿಸುವ ವ್ರತ ತೊಟ್ಟ ಜನರು ಬೇಕು. ಪರದುಃಖಕ್ಕೆ ದುಃಖಿತರಾಗಿ ಅದಕ್ಕೆ ಅವರು ಪರಿಹಾರವನ್ನರಸಬಲ್ಲರು. ಈ ಉದ್ದೇಶದಿಂದಲೇ ಆಶ್ರಮ, ಶಾಂತಿನಿಕೇತನ, ಚರಖಾ ಸಂಘ, ಗ್ರಾಮೋದ್ಯೋಗ ಸಂಘಗಳಂಥ ಪ್ರಯೋಗ ಶಾಲೆಗಳು ಏರ್ಪಾಡಾದುದು. ದೇಶದ ತೋಟಗಳಿಗೆಲ್ಲ ಸಸಿಗಳನ್ನು ಸಿದ್ಧಮಾಡಿ ಕೊಡುವ ಕೈತೋಟವಿದ್ದಂತೆ ಅವು. ಈ ಪ್ರಯೋಗ ಶಾಲೆಯಲ್ಲಿ ದೊರೆತ ಫಲವನ್ನು ಲೋಕಕ್ಕೆ ಅರ್ಪಿಸುವದು ಅದರ ಲಕ್ಷ್ಯ.

ಹಿಂಸೆ-ವೈರಿಗಳಿಂದ ಕುದಿಯುತ್ತಿರುವ ಈ ಲೋಕದ ಸಂಕಟ-ಪೀಡೆಗಳಿಗೆ ಪರಿಹಾರ ಸಿಗಬೇಕಾದರೆ ಈ ಉದಾತ್ತ ಜೀವನ ಕ್ಷೇತ್ರದಲ್ಲೇ ಜನತೆಯ ಬಾಳಿಗೆ ಯೋಜನೆ ಬೇಕು; ಸ್ವೈರ, ಸ್ವಾರ್ಥದ, ವೈಯಕ್ತಿಕ ದೃಷ್ಟಿಯದಲ್ಲ, ನಿಸ್ವಾರ್ಥ, ಚಿರಸ್ಥಾಯಿ ಅನಾಸಕ್ತ ದೃಷ್ಟಿಯದು. ಆ ರೀತಿ ಯೋಜನೆ ಮಾಡಿದರೆ ಎಂಥ ಸ್ಥಾನದಲ್ಲಿಯೇ ಇರಲಿ, ಪ್ರತಿಯೊಬ್ಬ ಮನುಷ್ಯನಿಗೂ ಸರ್ವಹಿತಕ್ಕಾಗಿ ಲೋಕಾಭ್ಯುದಯಕ್ಕಾಗಿ ತನ್ನ ಕೈಲಾದುದನ್ನು ಮಾಡುವ ಅವಕಾಶ ದೊರೆಯುತ್ತದೆ. ಆಗ ಬಾಳು ಕಾಲ - ದೇಶ - ಪರಿಸ್ಥಿತಿಗಳ ಲಕ್ಷ್ಯವಿಲ್ಲದ ಬರೀ ಅಂಧಾನುಕರಣವೂ ಆಗದು. ಹಾಗೆ ಯೋಜನೆ ಮಾಡಿದ ಬಾಳು ವ್ಯಕ್ತಿ-ಸಂಘಗಳ ಅವಶ್ಯಕತೆಗಳನ್ನು ಪೂರೈಸೀತು. ಸಮಸ್ತ ಲೋಕದ ಸುಖಕ್ಕೂ ದಾರಿಮಾಡೀತು; ವ್ಯಕ್ತಿವಿಕಾಸಕ್ಕೆ ಆತ್ಮಾಭ್ಯುದಯಕ್ಕೆ ವಿಶಾಲ ಕ್ಷೇತ್ರವನ್ನು ಕಲ್ಪಿಸಿ, ನೆರೆ ಹೊರೆಯವರ ಯೋಗಕ್ಷೇಮಕ್ಕೆ ಮನುಷ್ಯ ಕಂಟಕವಾಗದಂತೆ ಮಾಡೀತು. ●

**(ಮೇಲು ಕೋಟೆಯ ಜನಪದ ಪ್ರಕಾಶನ ಪ್ರಕಟಿಸಿರುವ ಡಾ. ಕುಮಾರಪ್ಪ ಅವರ 'ಶಾಶ್ವತ ಅರ್ಥಶಾಸ್ತ್ರ'ದಿಂದ ಅನುಮತಿಯೊಂದಿಗೆ ಪುನರ್ ಪ್ರಕಟಿತ)**

ನಿಮ್ಮ ಬಿಗಿಮನಸ್ಸನ್ನು ಬಿಚ್ಚಿ, ಹೊ ಹ್ಹೊ ಹ್ಹೋ ಎಂದು ಬಾಯಿಬಿಟ್ಟು ಮೂಗರಳಿಸಿ, ಸ್ವಚ್ಛಂದವಾಗಿ ನಗಿ... ಎಲ್ಲಾದರೂ ಹೇಗಾದರೂ ನಗಿ... ಒಟ್ಟಿನಲ್ಲಿ ನಕ್ಕುನಗಿಸುತ್ತಾ ಇರಿ...

● ಕೆ. ಚಂದ್ರಮೌಳಿ

# ನಕ್ಕು ನಗಿಸುವ ನಗೆಲೇಸು



ಇಲ್ಲಾಂತ ಅಂದವ್ರು ಯಾರು? ಆದ್ರೆ ಹೇಗೆ ನಗಿಸೋದು ಅನ್ನೋದೆ ಪ್ರಶ್ನೆ. 'ಕುಂಟಾ ಕುಂಟಾ ಕೂರಿಗೆ' ಅಂತ ಹಂಗಿಸಿದಾಗ, 'ಲಾಗಾ ಹಾಕ್ಲೇ ತಿಮ್ಮ' ಅಂತ ಕೋತೀನ ಕುಣಿಸಿದಾಗ, ಶಿಳ್ ಅಂತ ಶಿಳ್ಳೇ ಹೊಡ್ದು ಸರ್ಕಸ್ ಬಫೂನನ ಮೆತ್ತೆಯ ಮೇಲೆ ಲತ್ತೆ ಕೊಟ್ಟಾಗ, ಬಿಂಕದ ಸಿಂಗಾರಿಗೆ ಮಳೆಯ ರಾಡಿ ಬಡಿದಾಗ, ಡೊಳ್ಳು ಹೊಟ್ಟೆಯ ಸೆಟ್ಟಿ ಎರಡು ಮೆಟ್ಟಲು ಹತ್ತಿ ಏದುಸಿರು ಬಿಟ್ಟಾಗ, ಬಿರುಸಿನ ಬಾಸ್ ಹುರುಪಿನ ರೇಸಲ್ಲಿ ಜಾರಿ ಬಿದ್ದಾಗ.... ಇಂಥಾ ಸನ್ನಿವೇಶಗಳಲ್ಲೆಲ್ಲಾ ಬೇಡಾ ಅಂದ್ರೂ, ನಗು ಬಂದೇ ಬರುತ್ತೆ. ಆ ಕ್ಷಣದಲ್ಲಿ ಕಚಗುಳಿಯಿಟ್ಟಂತಾಗಿ, ನಿಮಗೇ ಗೊತ್ತಿಲ್ಲದೆ ಫಕ್ಕನೆ ನಗು ನಿಮ್ಮ ತುಟಿಯನ್ನೊಡೆದು ಸಿಡಿದು ಬರುತ್ತದೆ. ನೀವು ಏನೂ ಮಾಡಲಾಗುವದಿಲ್ಲ. ಒಮ್ಮೆ ನಕ್ಕಮೇಲೆ, ಛೆ, ಇದೆಂಥಾ ಪ್ರಮಾದವಾಯ್ತು ಅಂದ್ಕೊಂಡು ತುಟಿ ಬೇಕಾದ್ರೆ ಕಚ್ಕೊಳ್ಳಿ; ಇದೆಂಥಾ ಅನಾಗರಿಕ ನಗು ಅಂತ ಬೈಕೊಳ್ಳಿ.... ಕ್ರಮೇಣ ವಯಸ್ಸಾಗ್ತಾ ಆಗ್ತಾ, ತಲೆ ಪಕ್ವಾಗ್ತಾ ಆಗ್ತಾ ತಾನೇ ತಾನಾಗಿ ಈ ಕೆಟ್ಟ ನಗು ತನ್ನ ಅಟ್ಟಹಾಸ ಬಿಟ್ಟು ಕೊಕ್ ಕೊಕ್ ಅಂತ ಕೆಕ್ಕರಿಸಿ, ತುಸಿ ತುಸಿಯೆಂದು ಮುಸಿ ನಗುವಾಗಿ, ಕೊನೆಗೆ ತುಟಿಪಿಟಕ್ಕೆನ್ನದೆ ಒಳಗೊಳಗೇ ತಿರುಚಿಕೊಳ್ಳುತ್ತದೆ.

ಮಕ್ಕಳ ನಗು ಬಿಟ್ಟು ಶಾಲಾಕಾಲೇಜಿಗೆ ಬಂದರೆ ನಗಲು ನೂರಾರು ಅವಕಾಶಗಳು. ಅಣಕವಾಡೋದು, ನಕಲು ಮಾಡೋದು, ಗೂಬೆ ಕೂರಿಸೋದು, ಸ್ನೇಹಿತನನ್ನೇ ಕರಿಕುರಿ ಮರಿಯನ್ನಾಗಿಸಿ ಅಂಬ್ಯಾ ಅಂಬ್ಯಾ ಅನ್ನಿಸೋದು, ಎರಡೆರಡರ್ಥ ಇಟ್ಟುಕೊಂಡು ಶ್ಲೇಷೆಯಲ್ಲಿ ಮಾತಾಡೋದು - ಇಂಥಾ ನೂರು ಅವಕಾಶಗಳು ಸಿಗುತ್ತವೆ. ''ಕೆಳ್ಗೆ ಯಾಕ್ ನಿಂತೀರ‍್ರೋ, ಮ್ಯಾಗೆ ಬರ‍್ರೋ'' ಅನ್ನೊ ಬದಲು ಇಂಗ್ಲಿಷ್ ಮಾಸ್ತರು Why are you understanding I say. Up come, up come'' ಅನ್ನೋದು; ಹೆಡ್ಡಮಾಸ್ತರು ಗೋಣು ಅಲ್ಲಾಡಿಸ್ತಾ, ರಾಗಾ ಎಳೀತಾ ಪಾಠ ಹೇಳೋದು, ಕಾಲೇಜ್‌ಡೇನಲ್ಲಿ ಮಾಡರ್ನ್ ರಾಮಾಯಣ ಆಡೋದು, ಟ್ವಿಂಕಲ್ ಟ್ವಿಂಕಲ್ ಲಿಟಲ್

(ಮುಂಬಯಿ ಆಕಾಶವಾಣಿಯಿಂದ ಪ್ರಸಾರವಾದದ್ದು)

ಇಸ್ಪಾರ್ ಅನ್ನೊ ಕಲ್ಯಾಣಿ ರಾಗದಲ್ಲಿ ಎಳೆದಾಡೋದು, ಕಾಲೇಜು ಕುದುಮಿಯನ್ನು ಕಾಲೇಜಿನ ಬ್ಯೂಟೀಕ್ವೀನ್ ಮಾತಾಡಿಸಿದಾಗ ಕುದುಮಿಯ ಜುಟ್ಟು ನೆಟ್ಟಗಾದ್ದನ್ನು ತೋರಿಸೋದು, ಹಕ್ಕಿ, ಪ್ರಾಣಿ, ಇಂಜಿನ್‌ನಂತೆ ಕೂಗೋದು, ವಿಚಿತ್ರ ವೇಷ ಹಾಕಿ fancy dress ಅಂತ ಕುಣಿಯೋದು, ತಮಿಳಿಂಗ್ಲಿಷಲ್ಲಿ ಯಮ್. ಯಮ್. ಯನ್. ಅಯ್ಯರ್ ಹೇಳುವ ''ಅಪ್ಪೈ ಅಪ್ಪೈ ನೋ ರಿಪ್ಪೈ'' ಅನ್ನೋದು, ಪಂಜಾಬೀ ಇಂಗ್ಲಿಷಲ್ಲಿ ''ಈ ರಸೂಲ್‌ಸಾಬನ್ನು ನೋಡೋ ಸಕೂಲ್ ಅನ್ನೋಕೆ ಇಸ್ಕೂಲ್ ಅಂತಾನೆ'' ಅಂತ ರೇಗಿಸೋದು, ''ಏನೋ ಮುಲಾಮು ಬಕ್ಕೊಂಡು ತಿಂದೆಯಾ?'' (ಮುಲಾಮು ತಿಕ್ಕೊಂಡು ಬಂದೆಯಾ ಅನ್ನೋ ಬದಲಾಗಿ) ಎಂದು ಉಲ್ಟಾ ಮಾತಾಡೋದು...ಹೀಗೆ ಅವ ಕಾಶಗಳಿಗೆ ಕೊನೆ ಮೊದಲೇ ಇಲ್ಲ. ಇವೆಲ್ಲವೂ ಇನ್ನೊಬ್ಬರ ವೇಷಭೂಷಣ, ನಡೆನುಡಿಯಲ್ಲಿರುವ ಅಂಕುಡೊಂಕನ್ನು ಹುಡುಕಿ, ಅವನ್ನೂ ಹಿಗ್ಗಳಿಸಿ, ತಲೆಕೆಳಗಾಗಿಸಿ, ಅಡ್ಡದಿಡ್ಡಾಗಿಸಿ, ಹೀಯಾಳಿಸಿ ನೋಡುವ ಲಕ್ಷಣಗಳು. ಇದರಲ್ಲಿ ತಿಳಿಹಾಸ್ಯವೂ ಇದೆ, ತಿವಿಯುವ ಹಾಸ್ಯವೂ ಇದೆ, ಹೊಟ್ಟೆಕಿಚ್ಚೂ ಇದೆ, ಮೈಪರಚೂ ಇದೆ. ಈ ಹಾಸ್ಯಕ್ಕೆ ನಮ್ಮ ಸಿದ್ದನಗೌಡ್ರ ಮಾತು ಕನ್ನಡಿ ಹಿಡಿಯುತ್ತೆ - ''ಲೇ, ಯಾಕ್ಲೇ, ನನ್ ನೋಡಿ ಹಂಗ್ ನಗಾಕ್ ಹತ್ತೀ? ಏನ್, ನನ್ ಮಾರಿ ಮ್ಯಾಗೆ ಮಂಗ್ಯಾ ಕುಣ್ಯಾಕ್ ಹತ್ತೇದೇನ್ಲೇ?''... ಹೌದು, ಆ ವಯಸ್ಸಿನಲ್ಲಿ, ತನ್ನ ಮುಖ ಒಂದು ಬಿಟ್ಟು, ಬೇರೆ ಎಲ್ಲರ ಮುಖದಲ್ಲೂ ಕೋತೀ ಕುಣಿತಾನೇ ಇರುತ್ತೆ. ಈ ಹುಡುಗರ ಕಾಲೇಜ್‌ಡೇಗೆ ನೀವೇನಾದ್ರೂ ಮುಖ್ಯ ಅತಿಥಿಗಳಾಗಿ ಹೋದ್ರೋ- ಮುಗೀತು ಕಥೆ! ಈ ಕೋತೀ ಕುಣಿತಾ ಎಂದಿಗೆ ನಿಲ್ತದಪ್ಪಾ ಅನ್ನಿಸಿ ತಲೆ ಕೆರೆದುಕೋತೀರಾ, ಛಳೀ ಬಿಟ್ಟು ನಗೋದು ಮಾತ್ರ ಅನುಮಾನ. ನಕ್ಕರೂ ನಿಮ್ಮ ಬಿಗುಮಾನದ ತಕ್ಕಡೀಲಿ ಅರಿಸಿ, ತೂಗಿದ ಒಂದೆ



ರಡು ಚುಟಕಕ್ಕೆ ಮಾತ್ರ!

ಶಾಲಾ-ಕಾಲೇಜಿನಿಂದ ವಿಶಾಲ ಪ್ರಪಂಚಕ್ಕಿಳಿದಾಗ ನೀವು ಪಾರ್ಟಿ-ಗೀರ್ಟಿ ಅಂತ ಹಾರಾಡ್ತೀರಿ, ನೋಟ-ಮಾಟ ಅಂತ ಓಡಾಡ್ತೀರಿ, ಡಿಸ್ಕೋ-ಕಿಸ್‌ಕೋ ಅಂತ ಕುಣೀತೀರಿ, ಹಾಡು, ಜೋಕ್ಸು ಅಂತ ಕೂಗಾಡ್ತೀರಿ ಇಂಥ ಪಾರ್ಟಿಗಳಲ್ಲಿ ಯಾರು ಎಷ್ಟು ನಗ್ತಾರೆ, ಹೆಚ್ಚು ಕೂಗ್ತಾರೆ, ಹೆಚ್ಚು ನಗಿಸ್ತಾರೆ ಅನ್ನೋದೇ ಮುಖ್ಯ. ಒಬ್ಬನ್ನ ನೋಡಿ ಇನ್ನೊಬ್ಬನಿಗೆ ಹುರುಪು, ನಗಲು ನಗಿಸಲು ಪೈಪೋಟಿ. ಒಬ್ಬ ಹಾಡು ಕಿರುಲಿದ್ದೇ ತಡ, ಇನ್ನೊಬ್ಬ ತಬಲ ಕುಟ್ಟುತ್ತಾನೆ, ಮತ್ತೊಬ್ಬ ಶಾಹಿರಿ ಅನ್ತಾನೆ, ಏನೂ ಬಾರದವನೂ ಸಹ ಜೋಕ್ಸ್ ಹೇಳ್ತಾನೆ. ಪಾರ್ಟಿ-ಜೋಕ್ಸ್ ಎಂಬ ಪುಸ್ತಕದಿಂದ ಗಟ್ಟು ಹೊಡೆದದ್ದಾದರೂ ಸರಿ, ಮರೆತು ತಡವರಿಸಿದರೂ ಸರಿ, ಅವತ್ತು ಜೋಕ್ಸ್ ಹೇಳ್ಲೇಬೇಕು. ಇಲ್ಲಿಯ ಹಾಸ್ಯ ಎರಡು ರೀತಿಯದು - ಮುಚ್ಚುಹಾಸ್ಯ, ಬಿಚ್ಚು ಹಾಸ್ಯ ಅಥವಾ ಅಮಲೇರಿಸುವ ಮುಚ್ಚು ಹಾಸ್ಯ ಮತ್ತು ಅಮಲೇರಿದ ಮೇಲಿನ ಬಿಚ್ಚು ಹಾಸ್ಯ ಅಥವಾ ಸಸ್ಯಾಹಾರಿ ಮತ್ತು ಮಾಂಸಾಹಾರಿ ಜೋಕ್ಸು, ಎಲ್ಲರಿಗೂ ಎರಡೂ ಬೇಕು. ಆದರೆ ನಯವಿನಯದ ಸೋಗಿನಲ್ಲಿ ಕೆಲವರು ತರಲೆ ಮಾಡಿ ಕೂಗ್ತಾರೆ, ಕೆಲವರು ಪರದೆ ಹಾಕಿ ಕೂಡ್ತಾರೆ. ನಗದೆ ಛೀಛೀ

ಅಂತಾರೆ, ಸಿಟೆದು ಮೂಗುಮುರೀತಾರೆ!

ಅಂದಹಾಗೆ ಈ ನಯವಿನಯ, ವಯ್ಯಾರಿತನ ಅನ್ನೋದು ಹಾಸ್ಯಕ್ಕೇ ಮಂಕು ಬಡಿಯುತ್ತದೆ, ಸೌಂದರ್ಯಕ್ಕೆ ಹಾಕಿದ ಕಪ್ಪು, ಬುರುಕಾದಂತೆ ಅಡ್ಡ ಬರುತ್ತದೆ! ಈ ಸೋಗಿನಲ್ಲಿ ನೀವು ಇನ್ನೊಬ್ಬರ ಕಾಲೆಳೆಯುವಂತಿಲ್ಲ, ಕಚಗುಳಿ ಇಡುವಂತಿಲ್ಲ, ಛೇಡಿಸುವಂತಿಲ್ಲ, ಹಂಗಿಸುವಂತಿಲ್ಲ, ಹಿಗ್ಗಳಿಸಿ, ಓೀಯಾಳಿಸಿ ನಗುವಂತಿಲ್ಲ, ಅವರವರ ನಿಜರೂಪವನ್ನು ಅವರಿಗೇ ತಿಳಿವಂತೆ ಕನ್ನಡಿ ಹಿಡಿದು ತೋರಿಸುವಂತಿಲ್ಲ....ಇಂಥಾ ಬಿಗುಮಾನದ ಬೇಗೆಯಲ್ಲಿ, ನಯವಿನಯದ ಸೋಗಿನಲ್ಲಿ, ವೈಯಾರಿತನದ ಮೆರುಗಿನಲ್ಲಿ, ಬಲಿತು ಪಕ್ಕಾಗುವವರ ನಡುವಿನಲ್ಲಿ, ಸಭ್ಯತೆಯ ನಾಜೂಕಿನ ಪರಿಸ್ಥಿತಿಯಲ್ಲಿ ಹಾಸ್ಯದ ಹೊನಲು ಹರಿಯುವುದಾದರೂ ಹೇಗೆ ಅಂತ ಆಶ್ಚರ್ಯಪಡಬೇಡಿ. ಅಲ್ಲೂ ಹರಿಯುತ್ತೆ. ಆದರೆ ಅಲ್ಲಿ ಬೆದರುಗೂಬೆಯ ತರಹ ಒಂದು ಕೆಣಕುಗೊಂಬೆಯನ್ನು ತಂದಿಡಬೇಕು. ತಿವಿಯುವ ಹಾಸ್ಯವನ್ನು ತಡೆದುಕೊಳ್ಳುವ ಈ ಕೆಣಕು ಗೂಬೆ ಆ ಗುಂಪಿನಿಂದ ಹೊರಗಿನದ್ದಾಗಿರಬೇಕು. ಇಂತಹ ಕೆಣಕು ಗೂಬೆ ಒಬ್ಬೊಬ್ಬರಿಗೆ ಒಂದೊಂದು ರೀತಿಯಲ್ಲಿ ಸಿಕ್ಕಿದೆ - ಇಂಗ್ಲಿಷರಿಗೆ ಐರಿಷ್‌ಮನ್, ಅಮೆರಿಕನ್ನರಿಗೆ ಜ್ಯೂ, ಭಾರತೀಯರಿಗೆ ಸರದಾರ್‌ಜೀ ಸಿಕ್ಕಾಪಾಗೆ. ಯಾವ್ದಾದರೂ ಪಾರ್ಟೀಲೀ ಸರದಾರ್‌ಜೀ ಜೋಕ್ಸ್ ಶುರುಮಾಡಿದರೆ ಅಲ್ಲಿ ಗುಲ್ಲೋಗುಲ್ಲು. ಇಂದಿನ ಇಂಥಾ ಸುಸಂಸ್ಕೃತ ಪಾರ್ಟಿಗಳಲ್ಲೆಲ್ಲಾ ಇನ್ನೊಬ್ಬರ ಮೇಲೆ, ಅಲ್ಲಿಲ್ಲದವರ ಬಗ್ಗೆಯೇ ಜೋಕ್ ಜಾಸ್ತಿ. ಅಲ್ಲಿದ್ದವರ, ನಮ್ಮ ಮೇಲೆ, ನಿಮ್ಮ ಮೇಲೆ ಏನಾದ್ರೂ J...O...K...E ಜೋಕ್ ಮಾಡಿದರೆ ಜೋ...ಕೆ! ಜೋಕೆ!! ಹುಷಾರ್!!!



ಜೋಕ್ಸ್ ಪಾರ್ಟಿಗಳಲ್ಲೇ ಆಗಬೇಕೆಂದಿಲ್ಲ. ಎಲ್ಲೆಲ್ಲಿ ನೋಡಿದರೂ ಹತ್ತು ತೆರನಾದ ಜೋಕ್ಸ್‌ಗಳನ್ನು ಕೇಳಬಹುದು - ಮಾಸ್ತರ ಜೋಕ್, ವೈದ್ಯರ ಜೋಕ್, ನ್ಯಾಯವಾದಿಗಳ ಜೋಕ್, ಆಫೀಸ್ ಜೋಕ್, ಬ್ರಹ್ಮಚಾರಿ ಜೋಕ್, ಹೆಂಗಳ ಜೋಕ್, ಗಂಡಂದಿರ ಜೋಕ್, ಹಳ್ಳೀದು, ದಿಳ್ಳೀದು, ಕುಡುಕರದ್ದು, ನರ್ಸ್‌ಗಳದ್ದು, ನನ್‌ಗಳದ್ದು ಅಂತ ಹೇಳ್ತಾನೇ ಹೋಗಬಹುದು. ಬೇಂದ್ರೆಯವರು 'ಸಾಯೋ ಆಟ' ಅಂತ ನಾಟಕ ಬರೆದರು. ಆದರೆ ನೀವು ಸಾಯೋ ಜೋಕು ಕೇಳಿರಲಾರಿರಿ - ಆ ಜೋಕು ನಿಮಗೆ ಈಗಲೇ ಬೇಕಿಲ್ಲ.

ಸಾಯೋ ಜೋಕಿರಲಿ, ನಿವೃತ್ತರಾದ ಮೇಲೆ, ಮುದುಕರಾದ ಮೇಲೆ ನಗುಕ್ಕಾದರೂ ಪುರುಸೊತ್ತಿಲ್ಲದೆ ಅನ್ನಬೇಡಿ. ಇದುವರೆಗೂ, ಜೀವನದ ಉದ್ದಕ್ಕೂ, ಯಾವಾಗ್ಲೂ ನೀವು ಹೊರಗೆ, ಅಲ್ಲಿ, ಇಲ್ಲಿ, ಎಲ್ಲೆಲ್ಲೂ ಹಾಸ್ಯಕ್ಕಾಗಿ ವಸ್ತು ಹುಡುಕ್ತಾ ಇದ್ರೋ ಇಲ್ಲವೋ? ಹೊರಗೆ ಕಾಣದ ದೇವನನ್ನು ಒಳಹೊಕ್ಕು ನೋಡು ಅಂತ ವೇದಾಂತ ಓದ್ತೀರೋ ಇಲ್ಲವೋ? ಸರಿ, ಮತ್ತೆ ಅದೇ ರೀತಿ ಅಲ್ಲಿ ಇಲ್ಲಿ ಹೊರಗೆಲ್ಲಾ ಹಾಸ್ಯವನ್ನು ಯಾಕೆ ಹುಡುಕ್ತೀರಿ? ನಿಮ್ಮ ದೃಷ್ಟಿಯನ್ನು ನಿಮ್ಮ ಕಡೆಗೇ ತಿರುಗಿಸಿಕೊಳ್ಳಿ, ನಿಮ್ಮನ್ನೇ ನೋಡ್ಕೊಳ್ಳಿ, ನಿಮ್ಮ ಅಂಕು-ಡೊಂಕು, ಡುಬ್ಬು-ಕೊಬ್ಬು, ಒರಟು-ಒನಪು, ಅಚಾತುರ್ಯ-ಅವಿವೇಕ ಇವನ್ನೇ ಚಿಂತಿಸಿಕೊಳ್ಳಿ. ..... ಹೀಗೆ ನಿಮ್ಮನ್ನ ನೀವೇ ನೋಡ್ತಾ



ನೋಡ್ತಾ, ನಿಮ್ಮ ಬಗ್ಗೆ ನೀವೇ ಪಕ್ ಅಂತ ನಗಿರಿ; ಅದನ್ನು ಇತರರಿಗೂ ತಿಳಿಸಿ ಅವರನ್ನೂ ನಗಿಸಿ!

ಮೇಲೆ ಹೇಳಿದ ಹಾಸ್ಯಕ್ಕೆ, ಜೋಕುಗಳಿಗೆ ಎಷ್ಟೇ ಹೆಸರುಗಳಿದ್ದರೂ, ಅವನ್ನೆಲ್ಲಾ ನಾಲ್ಕಾರು ಗುಂಪಿನಲ್ಲಿ ಸೇರಿಸಿಬಿಡಬಹುದು.

1. ವಕ್ರನಡೆ, ನುಡಿ, ವೇಷ, ಭೂಷಣ, ರೂಪಿನಿಂದ ಕೆಟ್ಟದಾಗಿ ಸಿಡಿದು, ಗುಡುಗಿದ ನಗು, ಕೀಳುನಗು.

2. ನಕಲು, ಅಣಕ, ಶ್ಲೇಷೆ (Pun), ತಿರುಗ ಮುರುಗ ಅರ್ಥ ಬರುವ ಮಾತು, Spoonorism, ಕುಚೋದ್ಯಗಳಿಂದ ಬರುವ ಅಬ್ಬರದ ದಡಬಡ ನಗು, ಎಷ್ಟೋ ವೇಳೆ ವಿಚಾರವಿಲ್ಲದ ಡೊಳ್ಳುನಗು.

3. ಅಸಂಬದ್ಧವಾದ ಅಥವಾ ಹೊಂದಾಣಿಕೆಯಿಲ್ಲದ ನಡೆ-ನುಡಿ, ಕುಚೇಷ್ಟೆಗಳಿಂದ ಹೊರ ಹೊಮ್ಮುವ ನಗು, ಕಚಗುಳಿಯಿಟ್ಟ ನಗು.

4. ತಿಳಿಹಾಸ್ಯ, ಚುಚ್ಚುಹಾಸ್ಯ, ಕುಟುಚ್ಚುಹಾಸ್ಯ, ತಿರುಗು-ಮುರುಗು ಹಾಸ್ಯ, ವಿಡಂಬನೆ, ಮಾತಿನ ಚಕಮಕಿಯಲ್ಲಿ ಹಾರುವ ಬೆಡಗಿನ ಕಿಡಿಯ ನಗು, ವಿಚಾರವಂತ ವಿಶಿಷ್ಟ ನಗು.

5. ಒಂದೇ ವಿಷಯವನ್ನು ಹತ್ತು ಮುಖಗಳಿಂದ, ಹನ್ನೆರಡು ಕೋನಗಳಿಂದ ನೋಡಿ ಅನಿರೀಕ್ಷಿತವಾದುದನ್ನು ಎದುರಿಸಿ, ವಿಚಿತ್ರ, ಸನ್ನಿವೇಶ, ಅನಿರೀಕ್ಷಿತ ತಿರುಗು, ಅಸಂಬದ್ಧ ಹೆಣಿಕೆ, ಕಾಣದ ಬಣ್ಣ, ವಕ್ರಗೆರೆ ಇವುಗಳ ವಿಶಿಷ್ಟ ಸಂಯೋಜನೆಯಿಂದ ಮುಂದಿಡುವ ವ್ಯಂಗ್ಯಚಿತ್ರದ ಹಾಸ್ಯ, ಪ್ರಾಸಂಗಿಕ ಹಾಸ್ಯ (Situational humour) ವಿರೋಧಾಭಾಸಗಳ ವಿಪರೀತದ ಹಾಸ್ಯ. ಯೋಚನೆ ಬಂದಾಗಲೆಲ್ಲಾ, ನೆನಪಾದಾಗಲೆಲ್ಲಾ ಪಕ್ಕನೆ ಕೊಕ್ಕೆನಿಸಿ ನಗಿಸುವ ಹಾಸ್ಯ.

6. ಇವೆಲ್ಲವನ್ನೂ ಮೀರಿದ ದೈವೀ ನಗು - ವಿವರಿಸಲಾಗದ ಅತಿಮಾನವೀಯ ಸ್ಮಿತ. ಮಕ್ಕಳಾಟ ನೋಡಿದ ಅಜ್ಜಂದಿರ ಮುಸಿನಗು, ಬಾಳಿನ ಬವಣೆಯಲ್ಲಿ ತೊಳಲಾಡುತ್ತಿರುವವರನ್ನು ನೋಡಿದ ಸ್ಥಿತಪ್ರಜ್ಞರ ಮಂದಸ್ಮಿತ, ಮಾನವನ 'ಅಹಂ'ನಿಂದ ನಡೆಯುವ ಸಾಹಸಗಳನ್ನು ನೋಡಿದರೂ ತನ್ನ ಲೀಲೆಯಲ್ಲೇ ಮಗ್ನನಾಗಿರುವ ದೈವಿಕ ಸ್ಮಿತ!

ಒಟ್ಟಿನಲ್ಲಿ ನಗುಕ್ಕೆ, ನಗಿಸುಕ್ಕೆ ವಯಸ್ಸು, ಅಂತಸ್ತು... ಇನ್ನೇನೂ ಅಡ್ಡಿ ಬರುಲ್ಲ. ಪ್ರಪಂಚದಲ್ಲಿ ಯಾರಿಗೇ ಆಗಲಿ, ತಡೆಯಲಾಗದ, ಸಹಿಸಲಾಗದ ವಿಷಯವೆಂದರೆ - ಇನ್ನೊಬ್ಬರು ತಮ್ಮನ್ನು ನೋಡಿ ನಗುವುದು. ಅಂದ್ರೆ ನೀವು ಇನ್ನೊಬ್ಬರ ನಗೆಪಾಟಲಾಗುವುದು. ಇನ್ನೊಬ್ಬರು ಬೈದರೆ ಕುರಿಯಂತೆ ತಲೆತಗ್ಗಿಸಿ ಕೊಳ್ತೀರಿ, ಸಿಟ್ಟಾದರೆ ಎದುರಾಡ್ತೀರಿ, ತಡೆಯದಿದ್ದರೆ ಅಳುತ್ತೀರಿ, ಹೊಡೆದರೆ ಕೈ ಮಾಡ್ತೀರಿ.... ಆದ್ರೆ, ನಿಮ್ಮನ್ನು ನೋಡಿ ಒಂದು ಚಿಳ್ಳೆ ನಕ್ಕರೂ ನಿಮಗೆ ಹಿಡಿಸೋಲ್ಲ. ಇದ್ದಕ್ಕಿದ್ದ ಹಾಗೇ, ನಿಂತಲ್ಲೇ ಬೆತ್ತಲೆ ಆದವರಂತೆ, ಏನು ಮಾಡೋದೆಂದೇ ಹೊಳೆಯದೆ ಏಕಾಏಕಿ ಕಸಿವಿಸಿಯಾಗುತ್ತೀರಿ. ಒಂದು ವೇಳೆ, ಗುಂಪಲ್ಲಿ ಅಕಸ್ಮಾತ್ತಾಗಿ ನಿಮ್ಮ ಬಟ್ಟೆ ಕಳಚಿ ನೀವು ಬೆತ್ತಲಾದ್ರೂ, ಏನನ್ನು ಮುಚ್ಚಿಕೋಬೇಕೂಂತ ನಿಮಗೆ ಗೊತ್ತು. ಆದೆ, ಯಾರಾದರೂ ಪಕ್ಕನೆ ನಕ್ಕರೆ ಮಾತ್ರ, ಎಲ್ಲಾ ಬಟ್ಟೆ ಮೈಮೇಲಿದ್ದರೂ, ಪೂರ್ತಿ ಬೆತ್ತಲೆಯಾದ ಅನುಭವ ಆಗುತ್ತದೆ. ಎಲ್ಲಿ ತನಕ ಕಾಣ್ತಾ ಇದೆ. ಏನನ್ನು ಮುಚ್ಚುಕೋಬೇಕು ಅಂತ ತಿಳಿ

ದರ ತಾನೇ ನೀವು ಪ್ರಯತ್ನ ಮಾಡೋದು. ಇನ್ನೊಬ್ಬರ ನಗು ಹೆಚ್ಚಾದ ಹಾಗೆ ನಿಮ್ಮ ಬೆತ್ತಲ ಅನಿಸಿಕೆ ಬೆಳೆದು, ಏನೇನು ಕಾಣ್ತಾ ಇದೆ ಅನ್ನೋದು ತಿಳೀದೇ ಒದ್ದಾಡಬೇಕಾಗುತ್ತದೆ. ಅದಕ್ಕೇ ಸಾಮಾನ್ಯವಾಗಿ ಎಲ್ಲರೂ ಇನ್ನೊಬ್ಬರನ್ನೂ ಹಾಸ್ಯ ಮಾಡ್ತಾರೆ, ಆದ್ರೆ ತಮ್ಮ ಮೇಲಿನ ಹಾಸ್ಯ ನಗುವನ್ನು ಸಹಿಸುವುದಿಲ್ಲ.

ನೀವು ಹೀಗೆ ನಗೆಪಾಟಲಾಗಬಾರದೂಂತ ಇದ್ರೆ, ನೀವೇ ಮೊದಲು ನಗಬೇಕು. ಹಾಗಂದ ತಕ್ಷಣ ಒಬ್ಬೊಬ್ರೇ ನಕ್ಕುಬಿಡಬೇಡಿ ಧಾರವಾಡದ್ದೋ, ಬೆಂಗ್ಳೂರಿನದ್ದೋ ಆಸ್ಪತ್ರೆಗೆ ಸೇರಿಸಿಬಿಟ್ಟಾರು. ನೀವು ನಗೆಪಾಟಲಾಗಬಾರದೂಂತ ಇದ್ರೆ ನೀವು ನಗಬೇಕು, ನಗಿಸಬೇಕು ಇಲ್ಲವೇ ಇನ್ನೊಬ್ಬರನ್ನು ನಗಿಸಬೇಕು, ನೀವೂ ನಗಬೇಕು, ಹೇಗೆ ನಗಬೇಕೂಂತ ಈಗ ಮತ್ತೆ ಕೇಳಬೇಡಿ. ನಿಮ್ಮ ಬಿಗಿ ಮನಸ್ಸನ್ನು ಬಿಚ್ಚಿ, ಹೊ ಹ್ಹೊ ಹ್ಹೋ ಎಂದು ಬಾಯಿಬಿಟ್ಟು, ಮೂಗರಳಿಸಿ, ಸ್ವಚ್ಛಂದವಾಗಿ, ಅಸಭ್ಯವಾಗಿ ನಗಿ. ಸಮಯೋಚಿತವಲ್ಲದ ಕೀಳುನಗೆ ನಗಿ, ಕೆಣಕಿ, ಗೇಲಿ ಮಾಡಿ ನಗಿ; ಸಭ್ಯವಾಗಿ, ನಯವಾಗಿ ತೇಲಿಸಿ ನಗಿ; ಮೇಲುನಗೆ ನಗಿ; ಮುಗುಳು ನಗಿ; ಮುಸಿನಗೆ ನಗಿ...... ಎಲ್ಲಾದರೂ ನಗಿ, ಹೇಗಾದರೂ ನಗಿ, ಒಟ್ಟಿನಲ್ಲಿ ನಕ್ಕುನಗಿಸುತ್ತಾ ಇರಿ..... ಅದಕ್ಕೇ 'ನಕ್ಕು ನಗಿಸುವ ನಗೆ ಲೇಸು.' ●




ಮನೇಲಿ ನೀನೊಬ್ಬೇ ದುಡಿದು ಹಣ್ಣಾಗೋದು ನನ್ಕೈಲಿ ನೋಡಲಾಗದೆ
ಇನ್ನೊಂದು ಮದುವೆ ಮಾಡ್ಕೊಂಡು ಬಂದ್ಬಿಟ್ಟೆ ಕಣೇ...!!



**ಸೂಕ್ಷ್ಮ ಕಲೆಯ ಕುರಿತು ತುಂಬ ಹಗುರವಾಗಿ ಮಾತನಾಡುವ ಜನ ಅಕ್ಕಿಕಾಳು ನಂಜಪ್ಪನವರನ್ನು, ಅವರ ಕೆಲಸವನ್ನೊಮ್ಮೆ ನೋಡಬೇಕು. ಖಂಡಿತ ಅವರಿಗೆ ಸೂಕ್ಷ್ಮ ಕಲೆಯ ಬಗ್ಗೆ ಗೌರವ ಭಾವ ಮೂಡುತ್ತದೆ.**

# ಅಕ್ಕಿಕಾಳು ನಂಜಪ್ಪನವರ ಅದ್ಭುತ ಕಲೆ

● *ತಿಂಗಳೇಶ*

**ಅ**ಕ್ಕಿ, ಎಳ್ಳು, ಸಾಸಿವೆ, ಗಸಗಸೆ ಇತ್ಯಾದಿ ಪುಟ್ಟಗಾತ್ರದ ಕಾಳುಗಳು ಗೃಹಿಣಿಯೊಬ್ಬಳ ಕಣ್ಣಿಗೆ ಬಿದ್ದರೆ ಘಮಘಮಿಸುವ ಪದಾರ್ಥ ಸಿದ್ಧಗೊಳ್ಳಬಹುದು. ಇವೇ ಧಾನ್ಯ ವ್ಯಾಪಾರಿಗಳ ಲೆಕ್ಕಾಚಾರದಲ್ಲಿ ಲಾಭ-ನಷ್ಟಗಳಿಗೆ ಮೂಲವಾಗಬಹುದು. ಆದರೆ ನಂಜಪ್ಪನವರು ಇವುಗಳ ಮೇಲೆ ಅದ್ಭುತ ಕಲೆಯನ್ನೇ ಅರಳಿಸಿ ನಿಲ್ಲಿಸಬಲ್ಲರು.

ಬುದ್ಧ, ಗಾಂಧಿ, ವಿವೇಕಾನಂದ, ಪರಮಹಂಸ, ಟಾಗೋರ್, ವಿನೋಬಾ ಭಾವೆ ಮುಂತಾದ ಹದಿಮೂರು ಮಹನೀಯರ ಭಾವಚಿತ್ರಗಳನ್ನು ಒಂದು ಅಕ್ಕಿಕಾಳಿನ ಒಂದೇ ಬದಿಯಲ್ಲಿ ಚಿತ್ರಿಸುವುದನ್ನು ಊಹಿಸಬಲ್ಲಿರಾ?

ಊಹೆಯ ಚಾಚುಗೈಗೂ ನಿಲುಕದ ಈ ಸಾಧನೆಯನ್ನು ನಂಜಪ್ಪನವರು ಸಿದ್ಧಿಸಿಕೊಂಡಿದ್ದಾರೆ. ಇಂತಹ ಹಲವಾರು ಸೂಕ್ಷ್ಮ ಕಲೆ (Micro Art)ಗಳ ಪರಿಣಿತಿಯಲ್ಲಿ ಮೇಲಿನದೊಂದು ನಮೂನೆ ಮಾತ್ರ. ಅಗಾಧವನ್ನೆಲ್ಲ ಅಣುವಿನೊಳಗೆ ಅಡಕಗೊಳಿಸುವುದು ಇವರ ಕಲೆಯ ಮೂಲ ತತ್ವ.

ಭಗವದ್ಗೀತೆಯ ನಾಲ್ಕು ಅಧ್ಯಾಯಗಳನ್ನು ನಾಲ್ಕೇ ಅಕ್ಕಿಕಾಳಿನಲ್ಲಿ ಬರೆದದ್ದು, ಒಂದು ಅಕ್ಕಿಕಾಳಿನಲ್ಲಿ 4160 ಅಕ್ಷರಗಳನ್ನು ಮೂಡಿಸಿದ್ದು, ಎಂಟು ಭಾಷೆಗಳ ವರ್ಣಮಾಲೆಯನ್ನು ಒಂದೇ ಅಕ್ಕಿಕಾಳಿನಲ್ಲಿ ಪಡಿಮೂಡಿಸಿದ್ದು, ಸಾಸಿವೆಕಾಳಿನ ಒಂದೇ ಬದಿಯಲ್ಲಿ ಗಾಂಧಿ-ಬುದ್ಧರ ಭಾವಚಿತ್ರ ಬರೆದದ್ದು, ಕೂದಲೆಳೆಯಲ್ಲಿ ಗಾಯತ್ರಿಮಂತ್ರ ಲೇಖಿಸಿದ್ದು... ನಂಜಪ್ಪನವರ ಕಲಾವಂತಿಕೆಯ ಮೊನೆಗೆ ನಿಲುಕದ ಸಾಧ್ಯತೆಗಳು ವಿರಳವೆಂದೇ ಹೇಳಬೇಕು.

ನಂಜಪ್ಪನವರು ನಮ್ಮನ್ನು ಕೊಂಡೊಯ್ಯುವ ಇನ್ನೊಂದು ಆಶ್ಚರ್ಯಕರ ಮಜಲೆಂದರೆ ತಮ್ಮ ಅಣುಬರವಣಿಗೆಗೆ ಅವರು ಭೂತಗನ್ನಡಿಯನ್ನು ಬಳಸದಿರುವುದು. (ಅಕ್ಷರಗಳ ಸಂಖ್ಯೆ 500

ಮಿಕ್ಕಿದರೆ ಮಾತ್ರ ಭೂತಗನ್ನಡಿಯನ್ನು ಬಳಸು ತ್ತಾರೆ) ಆದರೆ ಅವರ ಕಲೆಯ ಆಯಾಮಗಳನ್ನು ಗ್ರಹಿಸಲು ಮಾತ್ರ ಭೂತಗನ್ನಡಿಯ ಬಳಕೆ ಅನಿವಾರ್ಯ.

ಇಂತಹದೊಂದು ನಾಜೂಕಿನ ಕಲೆಯನ್ನು ಕರಗತ ಮಾಡಿಕೊಳ್ಳಲೋಸ್ಕರ ನಂಜಪ್ಪನವರು ಹಲವು ಗುರುಗಳ ನೆರವನ್ನು ಪಡೆದು ಕೆಲವಾರು ವರ್ಷಗಳ ಪರಿಶ್ರಮವನ್ನು ಧಾರೆಯರೆದಿರಬಹುದೆಂದು ಭಾವಿಸುವುದು ಸಹಜ. ಆಶ್ಚರಿಯ ಅಂಶವೆಂದರೆ, ಅಕ್ಕಿಕಾಳು ನಂಜಪ್ಪನವರು ಈ ಕಲೆಯ ಬಲೆಯೊಳಗೆ ಸಿಲುಕಿದ್ದು ತೀರಾ ಆಕಸ್ಮಿಕ. ಇಂಗ್ಲೀಷಿನ 26 ಮೂಲಾಕ್ಷರಗಳನ್ನು ಅಕ್ಕಿಕಾಳಿನ ಮೇಲೆ ಇಂಡಿಯನ್ ಇಂಕಿನಲ್ಲಿ ಬರೆದುದನ್ನು ತಾವು ನೋಡಿರುವುದಾಗಿ ಗೆಳೆಯರೊಬ್ಬರು ಹೇಳಿದಾಗ ಅದರ 'ಗಾಳಿ' ನಂಜಪ್ಪನವರನ್ನು ಹೊಕ್ಕಿತು. ಅದು ಬರಿ ಒಳಹೊಕ್ಕು


5″ × 8″ ಅಗಲದ ಹಾಳೆಯಲ್ಲಿ 1,100 ಪ್ರಕೃತಿ ದೃಶ್ಯಗಳು; 130 ನಗ್ನ ದೃಶ್ಯಗಳು.



ಅಕ್ಕಿಕಾಳಿನಲ್ಲಿ ಹಕ್ಕಿಪಕ್ಷಿಗಳು....

ಹೊರಸರಿದು ಬರಲಿಲ್ಲ. ಅವರನ್ನು ಆವರಿಸಿಕೊಂಡು ಬಹುದೂರ ಕರೆತಂದು ನಿಲ್ಲಿಸಿತು. ಈ ಅವಧಿಯಲ್ಲಿ ಅಣುಬರಹದ ಹತ್ತು ಹಲವು ಸಾಧ್ಯತೆಗಳತ್ತ ಕಣ್ಣು ಚಾಚಿ ಕಲೆಯ ಕವಲುಗಳನ್ನು ಕೊನರಿಸಿದರು.

ಅಂದು ಗೆಳೆಯನ ಮಾತಿನಿಂದ ಸ್ಫೂರ್ತಿಗೊಂಡು ಅಕ್ಕಿಕಾಳಿನ ಮೇಲೆ ಇಂಗ್ಲಿಷ್ ವರ್ಣಮಾಲೆ ಬರೆದು ತೋರಿಸಿದ ನಂಜಪ್ಪನವರು ಇಂದು ಒಂದೇ ಅಕ್ಕಿಕಾಳಿನ ಮೇಲೆ 160 ಬಾರಿ ಇಂಗ್ಲಿಷ್ ವರ್ಣಮಾಲೆಯನ್ನು ಬರೆಯುವಷ್ಟು (4160 ಅಕ್ಷರ) ಪ್ರಾವೀಣ್ಯ ಪಡೆದಿದ್ದಾರೆ! ಇದೊಂದು ಜಾಗತಿಕ ದಾಖಲೆ. ಇದನ್ನು ಅಧಿಕೃತವಾಗಿ ಗಿನ್ನಿಸ್ ಪುಸ್ತಕದಲ್ಲಿ ಸೇರಿಸುವುದೊಂದೇ ಬಾಕಿ ಉಳಿದಿದೆ. ಈಗಾಗಲೇ ಲಿಮ್ಕಾ ದಾಖಲೆ ಪುಸ್ತಕದಲ್ಲಿ ಇವರ ಹೆಸರು ಸ್ಥಾನ ಗಿಟ್ಟಿಸಿದೆ.

ಇಂಡಿಯನ್ ಇಂಕಿನಲ್ಲಿ ಅಕ್ಕಿಕಾಳಿನ ಮೇಲೆ ಅಕ್ಷರ ಮೂಡಿಸುವುದು ಇವರ ಪ್ರತಿಭೆಯ ಒಂದು ಎಸಳು ಮಾತ್ರ. ಹಲವು ವರ್ಣಗಳನ್ನು ಬಳಸಿ ಪ್ರಕೃತಿ ಚಿತ್ರಗಳನ್ನು ಕೂಡ ಇವರು ಅಕ್ಕಿಕಾಳಿನ ಮೇಲೆ ರಚಿಸಬಲ್ಲರು. ಎಳ್ಳುಕಾಳಿನ ಮೇಲೆ ಐದು ಭಾವಚಿತ್ರಗಳನ್ನು ಚಿಡಿಸಿದ್ದಾರೆ. ಹತ್ತು ಎಳ್ಳುಕಾಳುಗಳಲ್ಲಿ ದಶಾವತಾರಗಳು ಮೈದಳೆದು ನಿಂತಿವೆ. ಗಾಂಧಿ, ಬುದ್ಧರು ಗಸಗಸೆ ಕಾಳಿನ ಮೇಲೆ ತಮ್ಮ ಜಗತ್ಪ್ರಸಿದ್ಧ ಮಂದಹಾಸ ಬೀರಿದ್ದಾರೆ.

ಹಸುವಿನ ಕೂದಲಲ್ಲಿ ಗಾಂಧಿ, ಬುದ್ಧ, ವಿವೇಕಾನಂದರ ಚಿತ್ರಗಳು ರೂಪುದಳೆದಿವೆ. ಮನುಷ್ಯರ ಕೂದಲನ್ನು ಹದಿನೆಂಟು ಭಾಗಗಳಾಗಿ ಸೀಳಿ ವಿಶ್ವದಾಖಲೆ ಸ್ಥಾಪಿಸಿದ್ದ ಇಂಗ್ಲೆಂಡಿನ ಆಲ್ಬರ್ಟ್ ವೆಸ್ಟ್‌ರ ಸಾಧನೆಯನ್ನು ಮುರಿದಿರುವ ನಂಜಪ್ಪನವರು ಕೂದಲನ್ನು 40 ಭಾಗಗಳಾಗಿ ಸೀಳಿದ್ದಾರೆ. ಇದಿನ್ನೂ ಗಿನ್ನಿಸ್ ದಾಖಲೆ ಪುಸ್ತಕದಲ್ಲಿ ಅಧಿಕೃತ ಸ್ಥಾನ ಪಡೆಯಬೇಕಿದೆ.

ಈ ಕಲಾವಿದರ ಅಣುಕಲೆ ಕೇವಲ ಹವ್ಯಾಸವಾಗಿ ಹತ್ತಾರು ಗಜಗಳ ವ್ಯಾಪ್ತಿಯಲ್ಲಷ್ಟೇ ಅರಳಿನಿಂತಿಲ್ಲ. ಅದರಾಚೆಗೂ ಕಡಲಾಚೆಗೂ ಸಂಚರಿಸಿ ಶಹಬಾಷಗಿರಿ ಸಂಪಾದಿಸಿದೆ. ನಂಜಪ್ಪನವರು ಉದ್ಯೋಗದಲ್ಲಿರುವ ಹೆಚ್.ಎ.ಎಲ್. ಕಂಪನಿಯ ವತಿಯಿಂದ ಇವರ ಕಲಾಸಂಗ್ರಹ ಬ್ರೆಜಿಲ್, ಫ್ರಾನ್ಸ್‌ಗಳನ್ನು ಸುತ್ತಾಡಿ ಸೈ ಎನ್ನಿಸಿಕೊಂಡಿದೆ. ದೆಹಲಿ, ಬಾಂಬೆ, ಬಳ್ಳಾರಿ, ಬೆಂಗಳೂರು, ಹಿರಿಯೂರುಗಳಲ್ಲಿ ತಮ್ಮ ಕಲಾಕೃತಿಗಳನ್ನು ಪ್ರದರ್ಶಿಸಿರುವ ನಂಜಪ್ಪನವರು ಶಾಲೆಗಳಿಗೆ ವಂತಿಗೆ ಸಂಗ್ರಹಿಸಿಕೊಟ್ಟಿದ್ದಾರೆ.

ಇಷ್ಟೊಂದು ಸೂಕ್ಷ್ಮ ಸ್ವರೂಪದ ಕಲೆಯಲ್ಲಿ ತೊಡಗಿಸಿಕೊಂಡಿರುವ ಇವರು ಏನೆಲ್ಲಾ ಸಲಕರಣೆಗಳನ್ನು ಬಳಸುತ್ತಿರಬಹುದೆಂಬ ಕುತೂಹಲ ವುಂಟಾಗುವುದು ಸಹಜ. ತಮ್ಮ ನಾಜೂಕಿನ ಬಳಕೆಗೆ ಹೊಂದುವಂತೆ ತಾವೇ ನಿರ್ಮಿಸಿದ ಕುಂಚ, ಬ್ಲೇಡ್, ಇಂಡಿಯನ್ ಇಂಕ್, ಚಿಮಟ, ಜಲವರ್ಣ - ಇವಿಷ್ಟೇ ಅವರ ಕಲೆಯ ಹಿಂದಿನ ಕಚ್ಚಾವಸ್ತುಗಳು. ಸೂಕ್ಷ್ಮ ಕಣ್ಣು, ನಯವಾಗಿ

ಕದಲುವ ಬೆರಳು, ಅಗಾಧ ಸಂಯಮ ಸಂಜಪ್ಪನವರ ಕಲೆಯ ಸಿದ್ಧಿಗಾಗಿ ಸದ್ದಿಲ್ಲದೆ ದುಡಿಯುತ್ತಿವೆ.

ಕೆಲವರಿಗೆ ಈ ಕಲೆಯ ಬಗ್ಗೆ ಅಸಡ್ಡೆಯೂ ಇರುತ್ತದೆ. ಅಂಥವರಿಗಾಗಿ ನಂಜಪ್ಪನವರ ಬಳಿ ಉತ್ತರವೂ ಇದೆ. ಕಡಿಮೆ ಸ್ಥಳದಲ್ಲಿ ಅತಿ ಹೆಚ್ಚು ವಿಷಯಗಳನ್ನು ಅಡಕ ಮಾಡುವುದು ಇಂದಿನ ಕ್ರೌಡೆಡ್ ಯುಗದಲ್ಲಿ ಉಪಯುಕ್ತವಲ್ಲವೆ? ಇದು ಅವರ ಮರು ಸವಾಲು.

ನಂಜಪ್ಪನವರು ತಮ್ಮ ದೃಷ್ಟಿ ಶಕ್ತಿಯನ್ನು ದುಡಿಸಿಕೊಂಡು ಆಚೆ ತಳ್ಳುವ ಸ್ವಭಾವದವರಲ್ಲ! ಕಣ್ಣುಗಳ ಆರೋಗ್ಯಕ್ಕಾಗಿ ನಿಯಮಿತ ವ್ಯಾಯಾಮವನ್ನೂ ರೂಢಿಸಿಕೊಂಡಿದ್ದಾರೆ. ದಿನಂಪ್ರತಿ ಬೆಳಗಿನ ಜಾವ ಐದು ನಿಮಿಷಗಳ ಕಾಲ ದೂರದ ನಕ್ಷತ್ರಗಳನ್ನು ದಿಟ್ಟಿಸುವುದನ್ನು ಮತ್ತು ಒಂಬತ್ತು ಅಂಗುಲ ದೂರದಿಂದ ಸೂಕ್ಷ್ಮ ವಸ್ತುವನ್ನು ವೀಕ್ಷಿಸುವುದನ್ನು ಅವರು ನಿಯಮಿತವಾಗಿ ಪಾಲಿಸುತ್ತಾರೆ.

ಪ್ರಸ್ತುತ ಹೆಚ್.ಎ.ಎಲ್.ನಲ್ಲಿ ಡೆಪ್ಯುಟಿ ಮ್ಯಾನೇಜರ್ (ವಿನ್ಯಾಸ ವಿಭಾಗ) ಹುದ್ದೆಯಲ್ಲಿರುವ ಟಿ. ನಂಜಪ್ಪನವರು ಜನಿಸಿದ್ದು (20.4.35) ಬೆಂಗಳೂರು ಜಿಲ್ಲೆಯ ಹುಲಿಮಂಗಲ ಗ್ರಾಮದಲ್ಲಿ. ಕೃಷಿ ಕುಟುಂಬದಲ್ಲಿ ಹುಟ್ಟಿ ಬೆಳೆದ ಇವರು ತಮ್ಮ ವಿದ್ಯಾಭ್ಯಾಸವನ್ನು (BSc. B.L.) ಬೆಂಗಳೂರಿನಲ್ಲಿ ಪೂರೈಸಿದ್ದಾರೆ. ಕಚೇರಿಯ ಕೆಲಸ ಮುಗಿಸಿ ಮನೆ ಸೇರಿದ ಕೂಡಲೆ ಇವರು ತಮ್ಮ ಹವ್ಯಾಸದಲ್ಲಿ ಮುಳುಗುತ್ತಾರೆ.

ನೋಡುಗರನ್ನು ನಿಬ್ಬೆರಗುಗೊಳಿಸಲು ಯಶಸ್ವಿಯಾಗಿರುವ ನಂಜಪ್ಪನವರು ಅಷ್ಟಕ್ಕೇ ತಮ್ಮ ಸಾಧನೆಯ ಹಾದಿಯನ್ನು ಕೊನೆಗಾಣಿಸಲಿಚ್ಛಿಸರು. ಅವರ ಬಳಿ ಯೋಜನೆಗಳ ಗೊಂಚಲೇ ಇದೆ. ಹಸುವಿನ ಕೂದಲಿನಲ್ಲಿ ರಂಧ್ರ ಕೊರೆದು ಮನುಷ್ಯನ ಕೂದಲನ್ನು ತೂರಿಸುವುದು ಅವರ ಯೋಜನೆಗಳಲ್ಲೊಂದು.

ತಮಗೆ ಕರಗತವಾದ ಕಲೆಯನ್ನು ಮುಂದಿನ ವರ್ಷದಿಂದಲೇ ಇತರರಿಗೂ ಹಂಚುವ ಅಭಿಲಾಷೆ ಅವರದು. ಅದಕ್ಕಾಗಿ ತರಬೇತಿ ಶಾಲೆಯನ್ನು ಆರಂಭಿಸುವ ಯೋಚನೆಯಿದೆ. ಮೈಕ್ರೋ ಆರ್ಟಿಸ್ಟ್‌ಗಳ ಕುರಿತು ಒಂದು ಪರಿಚಯಾತ್ಮಕ ಪುಸ್ತಕವನ್ನು ಹೊರತರಬಯಸಿದ್ದಾರೆ.

.... ಹೀಗೆ ನಂಜಪ್ಪನವರ ನಡಿಗೆಯ ಹಾದಿಯುದ್ದಕ್ಕೂ ಕನಸುಗಳ ಕುಸುಮಗಳು ಹರಡಿಕೊಂಡಿವೆ. ಅವುಗಳ ಸಾಕಾರಕ್ಕೆ ಜನರ ಪ್ರೋತ್ಸಾಹ ಎಷ್ಟು ಅಗತ್ಯವೆಂಬುದರ ಅರಿವೂ ಅವರಿಗೆ ನಿಚ್ಚಳವಾಗಿದೆ. ಈಗಾಗಲೇ ಈ ಕ್ಷೇತ್ರದಲ್ಲಿ ಭಾರತವನ್ನು ವಿಶ್ವದೆತ್ತರಕ್ಕೆ ಒಯ್ದಿರುವ ಅಕ್ಕಿಕಾಳು ನಂಜಪ್ಪನವರು ಮುಂದಿನ ದಿನಗಳಲ್ಲಿ ಇನ್ನೆಷ್ಟು ಅದ್ಭುತಗಳನ್ನು ನಮ್ಮೆದುರು ತೆರೆದಿಡುತ್ತಾರೋ!

## ಸುಮ್ಮನೆ ಒಂದಷ್ಟು ಮಾಹಿತಿ

- ★ *ಪುರುಷರು ಕ್ರಿಕೆಟ್ ಆಡಲು ಉಪಯೋಗಿಸುವ ಚೆಂಡಿನ ತೂಕ ಸುಮಾರು 150 ರಿಂದ 165 ಗ್ರಾಮ್ ಇದ್ದರೆ, ಮಹಿಳೆಯರು ಕ್ರಿಕೆಟ್‌ನಲ್ಲಿ ಬಳಸುವ ಚೆಂಡಿನ ತೂಕ ಮಾತ್ರ 140 ರಿಂದ 150 ಗ್ರಾಮ್ ಇರುತ್ತದೆ!*
- ★ *ಅತಿ ಹೆಚ್ಚು ಟೆಸ್ಟ್ ಪಂದ್ಯಗಳಿಗೆ 'ಅಂಪೈರ್' ಕೆಲಸ ಮಾಡಿದವನು ಇಂಗ್ಲೆಂಡಿನ ಫ್ರಾಂಕ್ ಚೆಸ್ಟರ್. ಇದೊಂದು ಜಾಗತಿಕ (48 ಪಂದ್ಯಗಳು) ದಾಖಲೆ.*
- ★ *'AND' (ಮತ್ತು) ಎಂಬ ಇಂಗ್ಲಿಷ್ ಶಬ್ದ ಕ್ರಿಸ್ತರ ಪವಿತ್ರ ಗ್ರಂಥವಾದ ಬೈಬಲ್‌ನಲ್ಲಿ 46,227 ಸಲ ಕಾಣಿಸಿಕೊಂಡಿದೆ.*

ಸಂಗ್ರಹ: ವಿಜಯಕುಮಾರ್ ಜೈನ್

# ಇನ್ನೊಂದು ಸೌರಮಂಡಲ?

**ಬಾಹ್ಯಾಕಾಶ ವೈಜ್ಞಾನಿಕ ಕಥೆ, ಕಾದಂಬರಿಗಳಿಗೆ ಸಾಕಷ್ಟು ಸಾಮಗ್ರಿಯನ್ನು ಒದಗಿಸಿದೆ. ಆದರೆ ಇವೆಲ್ಲ ಕೇವಲ ಕಾಲ್ಪನಿಕ. ವಾಸ್ತವಿಕವಾಗಿ ಬಾಹ್ಯಾಕಾಶವನ್ನು ಅಭ್ಯಸಿಸಲು ಹೊರಟಾಗ ಎದುರಾಗುವ ಸಮಸ್ಯೆಗಳೇ ಬೇರೆ. ಅವು ಅನೇಕ.**

ಬಾಹ್ಯಾಕಾಶದಿಂದ ಸಾಕಷ್ಟು ದೂರ ನಿಂತು ಸೌರಮಂಡಲವನ್ನು ನೋಡಿದಾಗ ಗ್ರಹಗಳನ್ನು ಗುರುತಿಸಲು ಸಾಧ್ಯವಾಗುವುದೇ? ಎಂಬ ಪ್ರಶ್ನೆಗೆ ''ಅಸಾಧ್ಯ'' ಎಂದೇ ಉತ್ತರಿಸಬೇಕಾಗುತ್ತದೆ. ಯಾಕೆಂದರೆ ಗ್ರಹಗಳಲ್ಲಿ ಅತ್ಯಂತ ದೊಡ್ಡದಾದ ಗುರುಗ್ರಹ ಕೂಡ ಸೂರ್ಯನ ದ್ರವ್ಯರಾಶಿಯ ಸಾವಿರದ ಒಂದು ಭಾಗದಷ್ಟಿದೆ. ಆದ್ದರಿಂದ ಅದನ್ನು ಒಂದು ಆಕಾಶಕಾಯವನ್ನಾಗಿ ಗುರುತಿಸುವುದು ಸಾಧ್ಯವಾಗುವುದಿಲ್ಲ.

ಸೂರ್ಯ ಹಾಗೂ ಗುರು ಇವುಗಳ ಚಲನೆಯನ್ನು ಅಭ್ಯಸಿಸಿದಾಗ ಒಂದು ಅಂಶ ವ್ಯಕ್ತಪಡುತ್ತದೆ. ಸೂರ್ಯನ ಸುತ್ತ ಗುರು ತಿರುಗುತ್ತಿದೆ ಎನ್ನುವುದಕ್ಕಿಂತ ಎರಡೂ ದ್ರವ್ಯರಾಶಿಯ ಕೇಂದ್ರದ ಸುತ್ತ ಸುತ್ತುತ್ತಿವೆ ಎನ್ನಬಹುದು. ಈ ದ್ರವ್ಯರಾಶಿಯ ಕೇಂದ್ರ ಸೂರ್ಯನ ಗೋಳದಲ್ಲೇ ಇರುವುದರಿಂದ ಅದರ ಚಲನೆ ಸ್ಪಷ್ಟವಾಗಿ ಗೋಚರಿಸುವುದಿಲ್ಲ. ಆದರೆ ದೂರದಿಂದ ಗಮನಿಸಿದಾಗ ಸೂರ್ಯಗೋಳ ಚೆಂಡಿನಂತೆ ನೇರವಾಗಿ ತಿರುಗದೆ ಬುಗುರಿಯಂತೆ ಅತ್ತಿಂದಿತ್ತ ಓಲಾಡುವುದು ತಿಳಿಯುತ್ತದೆ. ಈ ಅವಧಿ 12 ವರ್ಷ ಇರುವುದರಿಂದ ಸೂರ್ಯನ ಸುತ್ತ 12 ವರ್ಷಗಳಿಗೊಮ್ಮೆ ಸುತ್ತುವ ಗ್ರಹವೊಂದಿದೆ ಎಂದು ಊಹಿಸಬಹುದು.

ಇನ್ನೂ ಒಂದು ಬಗೆಯ ಉಪಾಯವಿದೆ. ಜೋಡಿನಕ್ಷತ್ರಗಳಿಗೆ ಈ ವಿಧಾನ ಸಾಕಷ್ಟು ಉಪಯೋಗವಾಗುತ್ತಿದೆ. ನಕ್ಷತ್ರದ ರೋಹಿತವನ್ನು ಅಭ್ಯಾಸ ಮಾಡಿದಾಗ ಅದು ಚಲನೆಯಲ್ಲಿರುವುದು ವ್ಯಕ್ತವಾಗುವುದು. ಇಂಥ ಅಳತೆಗಳಿಂದಲೂ ಗ್ರಹಗಳ ಅಸ್ತಿತ್ವವನ್ನು ಊಹಿಸಲು ಸಾಧ್ಯ.

ಗ್ರಹಗಳಿಗೆ ಸ್ವಯಂ ಪ್ರಕಾಶ ಇರುವುದಿಲ್ಲ. ಆದ್ದರಿಂದ ಎಷ್ಟೇ ಭಾರಿಗಾತ್ರದ ದೂರದರ್ಶಕವಾಗಲೀ ಅದನ್ನು ಗುರುತಿಸಲಾರದು. ಆದರೆ ಇವು ಸಾಕಷ್ಟು ಕಡಿಮೆ ಉಷ್ಣತೆಯಲ್ಲಿರುವುದರಿಂದ (ನಕ್ಷತ್ರಗಳ ಉಷ್ಣತೆ 1000 ಡಿಗ್ರಿಗಳಿಗಿಂತ ಕಡಿಮೆ) ಅವಕೆಂಪು ಕಿರಣಗಳನ್ನು ಬೀರುತ್ತವೆ. ಆದ್ದರಿಂದ ನಕ್ಷತ್ರದ ಬೆಳಕಿನ ಅಧ್ಯಯನದಲ್ಲಿ ಅವಕೆಂಪು ಕಿರಣಗಳ ಹೆಚ್ಚಳ ಕಂಡುಬಂದಾಗ ಅವು ಗ್ರಹಗಳೆಂದು ತಿಳಿಯಬಹುದು.

ಈ ಎಲ್ಲ ವಿಧಾನಗಳಿಗಿಂತ ಹಳೆಯ 'ಖಗೋಲಮಿತಿ' ವಿಧಾನವೇ ಹೆಚ್ಚು ಪರಿಣಾಮಕಾರಿಯಾದದ್ದು. ಈ ಗ್ಯಾಲಕ್ಸಿ - ಆಕಾಶಗಂಗೆ - ಯ

● ಬಿ. ಎಸ್. ಶೈಲಜಾ

ಎಲ್ಲಾ ನಕ್ಷತ್ರಗಳೂ (ಸೌರಮಂಡಲ ಸಹ) ಗ್ಯಾಲಕ್ಸಿಯ ಕೇಂದ್ರವನ್ನು ಸುತ್ತುತ್ತವೆ. ಆದರೆ ಬೇರೆಬೇರೆ ನಕ್ಷತ್ರಗಳ ಪಥದಲ್ಲಿ ಸ್ವಲ್ಪ ವ್ಯತ್ಯಾಸ ವಿರುತ್ತದೆ. ಇದರಿಂದ ಒಂದೊಂದು ನಕ್ಷತ್ರದ ಚಲನೆಯೂ ಬೇರೆ ಬೇರೆ ಇದ್ದಂತೆ ಭಾಸವಾಗುತ್ತದೆ. ನಮಗೆ ಹತ್ತಿರವಿರುವ ನಕ್ಷತ್ರಗಳ ಚಲನೆ ಹೆಚ್ಚು ಸ್ಪಷ್ಟವಾಗಿ ಗೋಚರಿಸುತ್ತದೆ. 'ಅಚಲ'ವಾದ ನಕ್ಷತ್ರಗಳು ಸಹ ನಿಧಾನವಾಗಿಯಾದರೂ ಚಲಿಸುತ್ತವೆ ಎಂದು ಖ್ಯಾತ ಖಗೋಳ ವಿಜ್ಞಾನಿ ಎಡ್ಮಂಡ್ ಹ್ಯಾಲೀ ಹಿಂದೆಯೇ ಪ್ರತಿಪಾದಿಸಿದ್ದನು. ಪ್ರಕಾಶಮಾನ ನಕ್ಷತ್ರಗಳಾದ ಸಿರಿಯಸ್ ಹಾಗೂ ಆರ್ಕ್ಟರಸ್ - ಇವು ಟಾಲೆಮಿ ಗುರುತಿಸಿದ ಸ್ಥಳದಿಂದ ಸರಿದಿವೆ ಎಂದಾತ ತೋರಿಸಿಕೊಟ್ಟಿದ್ದ. ಈ ಚಲನೆಗಳ ಅಧ್ಯಯನದಲ್ಲಿ ಗ್ರಹದ ಅಸ್ತಿತ್ವ ಪತ್ತೆಯಾಗುವುದು. ಇದಕ್ಕೆ ಉತ್ತಮ ಉದಾಹರಣೆ ಬರ್ನಾರ್ಡ್ ನಕ್ಷತ್ರ.

1916ರಲ್ಲಿ ಖಗೋಳ ವಿಜ್ಞಾನಿ ಇ. ಇ. ಬರ್ನಾರ್ಡ್ ನಕ್ಷತ್ರವೊಂದರ ವೈಚಿತ್ರ್ಯವನ್ನು ಹೊರಗೆಡಹಿದ. ಹಿನ್ನೆಲೆಯ ಇತರ ನಕ್ಷತ್ರಗಳಿಗೆ ಹೋಲಿಸಿದಾಗ ಅದು ಉತ್ತರದಿಕ್ಕಿಗೆ ಸಾಕಷ್ಟು ವೇಗವಾಗಿ ಚಲಿಸುತ್ತಿದೆ ಎಂದು ತಿಳಿಯಿತು. ಅದರ ಚಲನೆ ಸ್ಪಷ್ಟವಾಗಿ ಗೋಚರಿಸಲು ಅದರ ದೂರವೂ ಸಾಕಷ್ಟು ಸಹಕಾರಿಯಾಗಿದೆ (ಕೇವಲ ಆರು ಬೆಳಕಿನ ವರ್ಷಗಳು). ಒಫಿಯೂಕಸ್ ನಕ್ಷತ್ರಪುಂಜದಲ್ಲಿರುವ ಈ ಕ್ಷೀಣ (ಬರಿಗಣ್ಣಿಗೆ ಕಾಣಿಸದ) ಕೆಂಪು ನಕ್ಷತ್ರಕ್ಕೆ ಈಗ ಆತನದೇ ಹೆಸರಿದೆ. ಅಕಸ್ಮಾತ್ ಅದು ಈಗಿನ ಎರಡರಷ್ಟು ದೂರದಲ್ಲಿದ್ದಿದ್ದರೆ ಈ ಸ್ಥಳಪಲ್ಲಟವನ್ನು ಪತ್ತೆ ಮಾಡುವುದೂ ಕಷ್ಟವಾಗಿಬಿಡುತ್ತಿತ್ತು. ಈಗ ಅದರ ಚಲನೆ ವರ್ಷಕ್ಕೆ 10.3 ಆರ್ಕ್‌ಸೆಕೆಂಡ್‌ಗಳು (3600 ಆರ್ಕ್‌ಸೆಕೆಂಡ್‌ಗಳು= 1 ಡಿಗ್ರಿ). ಅಂದರೆ 360 ವರ್ಷಗಳಲ್ಲಿ ಅದು ಒಂದು ಡಿಗ್ರಿಯಷ್ಟು ಸರಿಯುತ್ತದೆ. ಬರ್ನಾರ್ಡ್ ನಕ್ಷತ್ರ ನಿಧಾನ




ವಾಗಿ ಸೂರ್ಯನತ್ತಲೇ ಬರುತ್ತಿದೆ. ಸುಮಾರು 10,000 ವರ್ಷಗಳಲ್ಲಿ ಅದು ಸೂರ್ಯನಿಗೆ ಸಮೀಪವಾಗಿ (ನಾಲ್ಕು ಬೆಳಕಿನ ವರ್ಷಗಳು) ಹಾದುಹೋಗುತ್ತದೆ. ಆಗ ಅದರ ಪಲ್ಲಟ ಈಗಿರುವುದರ ಮೂರರಷ್ಟು ಸ್ಪಷ್ಟವಾಗಿ ಕಾಣುತ್ತದೆ.

ಇಷ್ಟು ಹತ್ತಿರ ಇದ್ದರೂ ಈ ನಕ್ಷತ್ರ ಬರಿಗಣ್ಣಿಗೆ ಕಾಣುವಷ್ಟು ಪ್ರಕಾಶಮಾನವಾಗಿಲ್ಲ. (ಇದು ಸೂರ್ಯನಿಗಿಂತ 2,230 ಪಟ್ಟು ಕ್ಷೀಣವಾಗಿದೆ.) ಇದರ ಉಷ್ಣತೆಯು 3250 ಡಿಗ್ರಿ ಕೆಲ್ವಿನ್ (ಸೂರ್ಯನದ್ದು 5770 ಡಿಗ್ರಿ ಕೆಲ್ವಿನ್). ಇದರ ದ್ರವ್ಯರಾಶಿ ಸಹ ಕಡಿಮೆ ಇರುವುದರಿಂದ ಗ್ರಹಗಳಿಂದ ಉಂಟಾಗುವ ಪಲ್ಲಟ ಹೆಚ್ಚು ಸ್ಪಷ್ಟವಾಗಿ ಗೋಚರಿಸುತ್ತದೆ.

ಅತ್ಯಂತ ಹೆಚ್ಚಿನ ಚಲನೆ ಇರುವ ಈ ನಕ್ಷತ್ರವನ್ನು ಅಭ್ಯಸಿಸಲು 1938ರಿಂದ ಛಾಯಾಚಿತ್ರಗಳ ಅಧ್ಯಯನ ಪ್ರಾರಂಭವಾಯಿತು. 1962ರ ಹೊತ್ತಿಗೆ ಸುಮಾರು 2000 ಚಿತ್ರಗಳನ್ನು ಒಟ್ಟುಗೂಡಿಸುವುದು ಸಾಧ್ಯವಾಯಿತು. ಆಗ ಅದರ ಡೊಂಕಾದ ಚಲನೆ (ಚಿತ್ರ ನೋಡಿ) ಸ್ಪಷ್ಟವಾಗಿ ಗೋಚರಿಸಿತು.

ಪ್ರಕಾಶಮಾನವಾದ ಸಿರಿಯಸ್ ನಕ್ಷತ್ರಕ್ಕೆ




ವಾಸ್ತವವಾಗಿ ನಕ್ಷತ್ರ, ಹಾಗೂ ಗ್ರಹಗಳೆರಡೂ ದ್ರವ್ಯರಾಶಿ ಕೇಂದ್ರ (X) ದ ಸುತ್ತ ಸುತ್ತುತ್ತವೆ. ಸೂರ್ಯನಂಥ ದೊಡ್ಡ ನಕ್ಷತ್ರವಾದರೆ ಈ ಬಿಂದು ನಕ್ಷತ್ರದೊಳಗೇ ಇರುತ್ತದೆ. ಆದ್ದರಿಂದ ಚಲನೆ ಗೋಚರಿಸುವುದಿಲ್ಲ. 'ಬರ್ನಾರ್ಡ್'ದಂಥ ಸಣ್ಣ ನಕ್ಷತ್ರ ಆಕಾಶದಲ್ಲಿ ನಕ್ಷತ್ರಗಳ ಹಿನ್ನೆಲೆಯಲ್ಲಿ ನೇರವಾಗಿ ಚಲಿಸದೆ, ನಿಯತಕಾಲಿಕವಾಗಿ ಮೇಲೆ ಕೆಳಗೆ ಚಲಿಸಿದಂತೆ ಭಾಸವಾಗುತ್ತದೆ.

ಸಂಗಾತಿಯೊಂದಿದೆ ಎಂದು ಇದೇ ಬಗೆಯ ಅಧ್ಯಯನದಿಂದ ಗುರುತಿಸಲಾಗಿತ್ತು. ತದನಂತರದಲ್ಲಿ ಅದರ ಸಂಗಾತಿ ಒಂದು ಶ್ವೇತಕುಬ್ಜ ಎಂದೂ ಸ್ಥಿರಪಟ್ಟಿತು. ಆದ್ದರಿಂದ ಬರ್ನಾರ್ಡ್ ನಕ್ಷತ್ರಕ್ಕೂ ಸಂಗಾತಿ ಇರಬಹುದೇ? ಎಂಬ ಪ್ರಶ್ನೆ ಉದ್ಭವಿಸಿತು. ಆ ನಕ್ಷತ್ರದ ಉಷ್ಣತೆ ಹಾಗೂ ದ್ರವ್ಯರಾಶಿಗನುಸಾರವಾಗಿ ಲೆಕ್ಕಹಾಕಿದಾಗ ಗುರುಗ್ರಹದಂತಹ ಗ್ರಹವೊಂದಿರಬಹುದು ಎಂದು ಊಹಿಸಬಹುದಾಗಿತ್ತು.

ಖಗೋಳಜ್ಞ ವ್ಯಾನ್ ಡಿ ಕೆಂಫ್ ಈ ಬಗ್ಗೆ ಮೊದಲ ಸಿದ್ಧಾಂತವನ್ನು 1962ರಲ್ಲಿ ಮುಂದಿಟ್ಟ. ''ಗುರುವಿಗಿಂತ ಒಂದೂವರೆ ಪಟ್ಟು ದ್ರವ್ಯರಾಶಿ ಇರುವ ಗ್ರಹ 24 ವರ್ಷಗಳಿಗೊಮ್ಮೆ ಬರ್ನಾರ್ಡ್ ನಕ್ಷತ್ರವನ್ನು ಸುತ್ತುತ್ತಿದೆ'' ಎಂಬ ಸಿದ್ಧಾಂತ ಅದು. ಸೂರ್ಯನ ಸುತ್ತ ಧೂಮಕೇತುಗಳ ಪಥದಂತೆ ಅದು ದೀರ್ಘವೃತ್ತವಾಗಿದ್ದು, ಹತ್ತಿರ ಬಂದಾಗ ಸೂರ್ಯ-ಮಂಗಳಗಳಷ್ಟು ದೂರ ಇದ್ದು, ದೂರವಿದ್ದಾಗ ಸೂರ್ಯ-ಗುರುಗಳ ದೂರಕ್ಕಿಂತ ಹೆಚ್ಚಿರುತ್ತದೆ ಎಂದು ಲೆಕ್ಕ ಹಾಕಿ ಹೇಳಿದ.

ಆನಂತರ ಇನ್ನಷ್ಟು ಛಾಯಾಚಿತ್ರಗಳನ್ನು ಒಟ್ಟುಗೂಡಿಸಿ, 1986ರಲ್ಲಿ ಎರಡು ಗ್ರಹಗಳಿರಬಹುದಾದ ಸಾಧ್ಯತೆಯನ್ನು ಲೆಕ್ಕ ಹಾಕಿದರು. (ಗುರು ಮತ್ತು ಶನಿ ಸೂರ್ಯನನ್ನು ಸುತ್ತುವಂತೆ) ಮೊದಲನೆಯ ಗ್ರಹ ಗುರುವಿನ ಮುಕ್ಕಾಲು ದ್ರವ್ಯರಾಶಿಯದಾಗಿದ್ದು 12 ವರ್ಷಗಳಿಗೊಮ್ಮೆ ಸುತ್ತಿದರೆ, ಎರಡನೆಯದು ಗುರುಗ್ರ

## ಇ.ಇ. ಬರ್ನಾರ್ಡ್

1857ರಲ್ಲಿ ಹುಟ್ಟಿದ ಎಡ್ವರ್ಡ್ ಎಮರ್ಸನ್ ಬರ್ನಾರ್ಡ್ ತಂದೆಯನ್ನು ಕಾಣಲೇ ಇಲ್ಲ. ಬಡತನದಲ್ಲಿ ಬೆಳೆದ ಆತನಿಗೆ ಶಾಲೆಗೆ ಹೋಗುವುದೂ ಸಾಧ್ಯವಾಗಲಿಲ್ಲ. ತಾಯಿಗೆ ಜೀವನ ನಿರ್ವಹಣೆಯಲ್ಲಿ ನೆರವಾಗಲು ಸ್ಟುಡಿಯೋ ಒಂದರಲ್ಲಿ ಛಾಯಾಚಿತ್ರಗಳನ್ನು ತೊಳೆಯುವ ಸಹಾಯಕನಾಗಿ ಸೇರಿಕೊಂಡ. ಆತನ ಜೀವನ ಸಾಫಲ್ಯಕ್ಕೆ ಇದೇ ನಾಂದಿಯಾಯಿತು.

ಅತ್ಯಂತ ಚಿಕ್ಕ ವಯಸ್ಸಿನಲ್ಲೇ ಆತನಿಗೆ ಖಗೋಳವಿಜ್ಞಾನದತ್ತ ಒಲವು ಉಂಟಾಯಿತು. ಎರಡೂವರೆ ಅಂಗುಲದ ದೂರದರ್ಶಕವೊಂದರಿಂದ ತನ್ನಾಸೆಯನ್ನು ಈಡೇರಿಸಿಕೊಂಡ. ಆನಂತರ 1876ರಲ್ಲಿ ಐದು ಅಂಗುಲ ದೂರದರ್ಶಕವೊಂದನ್ನೂ ಕೊಂಡುಕೊಂಡ. ಖಗೋಳವಿಜ್ಞಾನದಲ್ಲಿ ಮುನ್ನಡೆಗೆ ಗಣಿತ ಅವಶ್ಯವೆಂದು ತಿಳಿದಾಗ ಆತನಿಗೆ ನಿರಾಶೆಯಾಯಿತು. ಆದರೂ ನೆಬ್ಯುಲಗಳು, ಜೋಡಿನಕ್ಷತ್ರಗಳ ವೀಕ್ಷಣೆಯನ್ನು ಮುಂದುವರೆಸಿದ. 1881ರಲ್ಲಿ ಧೂಮಕೇತುಗಳನ್ನು ಪತ್ತೆಹಚ್ಚತೊಡಗಿದ. ಹೊಸಧೂಮಕೇತುಗಳನ್ನು ಕಂಡುಹಿಡಿಯುವವರಿಗೆ ಆಗ ಇನ್ನೂರು ಡಾಲರ್‌ಗಳ

ದ್ರವ್ಯರಾಶಿ ಕೇಂದ್ರದ ಚಲನೆ

ನಕ್ಷತ್ರದ ಚಲನೆ

ಹದ ಅರ್ಧದಷ್ಟಿದ್ದು 20 ವರ್ಷಗಳಿಗೊಮ್ಮೆ ಸುತ್ತುತ್ತದೆ. (ಚಿತ್ರ ನೋಡಿ)

ಈ ವಾದಕ್ಕೆ ವೀಕ್ಷಣೆಗಳೊಡನೆ ಒಳ್ಳೆಯ ಹೊಂದಾಣಿಕೆಯಿದ್ದುದರಿಂದ ಸಾಕಷ್ಟು ಪುಷ್ಟಿ ದೊರಕಿದೆ.

ಈ ಗ್ರಹಗಳಲ್ಲಿ ಏನಿರಬಹುದು - ಇದು ಮುಂದಿನ ಪ್ರಶ್ನೆ. ಇದರ ಕಲ್ಪನೆ ಕಷ್ಟ. ಏಕೆಂದರೆ ಸೂರ್ಯ ಹಾಗೂ ಬರ್ನಾರ್ಡ್ ನಕ್ಷತ್ರಗಳಿಗೆ ಅಪಾರ ವ್ಯತ್ಯಾಸವಿದೆ. ಭಾರೀಗಾತ್ರದ ಅಣುಗಳಿಲ್ಲ, ಲೋಹಗಳೂ ಕಡಿಮೆ. ಆದ್ದರಿಂದ

---

ಬಹುಮಾನವಿತ್ತು. ಸುಮಾರು ಹದಿನಾರು ಧೂಮಕೇತುಗಳನ್ನಾತ ಕಂಡುಹಿಡಿದ. ಇದರಿಂದ ಅವನಿಗೆ ಹಣ ಹಾಗೂ ಮನ್ನಣೆ ದೊರೆಯಿತು. 1888ರಲ್ಲಿ ಲಿಕ್ ವೀಕ್ಷಣಾಲಯದಲ್ಲಿ ಕೆಲಸವೂ ಸಿಕ್ಕಿತು. 1892ರಲ್ಲಿ ಛಾಯಾಚಿತ್ರಗಳನ್ನು ಪರಿಶೀಲಿಸಿ ಕ್ಷೀಣ ಧೂಮಕೇತುವನ್ನು ಪತ್ತೆ ಮಾಡಿದ. ಈಗ ಎಲ್ಲರೂ ಉಪಯೋಗಿಸುವ ಈ ತಂತ್ರವನ್ನು ಆತ ಮೊದಲಬಾರಿಗೆ ಸುಮಾರು 100 ವರ್ಷಗಳಷ್ಟು ಹಿಂದೆಯೇ ಬಳಸಿದ.

1892ರ ಸಪ್ಟೆಂಬರ್ 9ರಂದು ಬರ್ನಾರ್ಡ್ ಗುರುಗ್ರಹದ ಐದನೆಯ ಉಪಗ್ರಹ ಅಮಾಲ್ತಿಯಾವನ್ನು ಪತ್ತೆ ಮಾಡಿದ. (ಈ ತಿಂಗಳು ಅದರ ಶತಮಾನೋತ್ಸವ!)

ಲಿಕ್ ಮತ್ತು ಯೆರ್ಕೀಸ್ ವೀಕ್ಷಣಾಲಯಗಳಿಂದ ತೆಗೆದ ಛಾಯಾಚಿತ್ರಗಳಿಂದ ನೆಬ್ಯುಲಗಳ ಪಟ್ಟಿಯೊಂದನ್ನು ಆತ ತಯಾರಿಸಿದ. ಅನೇಕ ನೆಬ್ಯುಲಗಳಿಗೆ ಆತನ ಹೆಸರಿದೆ. ಹೀಗೆ ತೆಗೆದ ಛಾಯಾಚಿತ್ರಗಳಿಂದ (ವರ್ಷದಿಂದ ವರ್ಷಕ್ಕೆ) ನಕ್ಷತ್ರಗಳ ಸ್ಥಳಪಲ್ಲಟವನ್ನು ಅಳತೆ ಮಾಡುವುದು ಸಾಧ್ಯವಾಯಿತು. 1894 ಹಾಗೂ 1916ರಲ್ಲಿ ತೆಗೆದ ಛಾಯಾಚಿತ್ರಗಳನ್ನು ಪರಿಶೀಲಿಸಿದಾಗ ಒಂದು ಕ್ಷೀಣ ನಕ್ಷತ್ರ, ಇತರ ನಕ್ಷತ್ರಗಳಿಗಿಂತ ವೇಗವಾಗಿ ಸರಿದಿರುವುದು ತಿಳಿಯಿತು. ಹೀಗೆ ಈಗ 'ಬರ್ನಾರ್ಡ್ ನಕ್ಷತ್ರ' ಎನ್ನಿಸಿಕೊಂಡಿರುವ ನಕ್ಷತ್ರ ಹೆಸರು ಪಡೆಯಿತು. ಅವಿರತಶ್ರಮದಿಂದ ಈತ ಸಾಧಿಸಿದ ಅಂಶಗಳು ಹಲವಾರು. ಗುರುಗ್ರಹದ ದಕ್ಷಿಣಾರ್ಧದಲ್ಲಿ ಒಂದು ಛಾಯೆಯನ್ನಾತ ಗುರುತಿಸಿದ. 1889ರಲ್ಲಿ ಧೂಮಕೇತುವೊಂದು ನಾಲ್ಕು ಭಾಗಗಳಾಗಿ ಸಿಡಿದದ್ದನ್ನು ಆತ ವೀಕ್ಷಿಸಿದ. ಇದಲ್ಲದೆ ಅನೇಕ ಗ್ರಹ, ಉಪಗ್ರಹಗಳ ಚಲನೆಗಳನ್ನೂ ಗುರುತಿಸಿ, ಅವುಗಳ ವ್ಯಾಸವನ್ನು ಅಳತೆ ಮಾಡಿದ.

ಇದಲ್ಲದೆ ಈತ ನಡೆಸಿದ ಸೂರ್ಯಗ್ರಹಣದ ವೀಕ್ಷಣೆಗಳು, ಧೂಮಕೇತುಗಳು, ಜೋಡಿನಕ್ಷತ್ರಗಳು, ಸಿಡಿಯುವ ನಕ್ಷತ್ರಗಳಾದ 'ನೋವಾ'ಗಳು ಇತ್ಯಾದಿ.

ಶಾಲೆಗೆ ಹೋಗಿ ಕಲಿಯಲು ಅವಕಾಶವಿಲ್ಲದಿದ್ದರೂ ತನ್ನ ಶ್ರಮದಿಂದ, ಶ್ರದ್ಧೆಯಿಂದ ಪ್ರೊಫೆಸರ್ ಪಟ್ಟವನ್ನು ಗಳಿಸಿಕೊಂಡ ಬರ್ನಾರ್ಡ್‌ಗೆ ಅನೇಕ ಚಿನ್ನದ ಪದಕಗಳು, ಬಹುಮಾನಗಳು, ಗೌರವಗಳು ದೊರೆತವು.

1923ರಲ್ಲಿ ತೀರಿಕೊಂಡ ಬರ್ನಾರ್ಡ್ ತನ್ನ ಹೆಸರಿನ ನಕ್ಷತ್ರಗಳು ಹಾಗೂ ನೆಬ್ಯೂಲಗಳ ಮೂಲಕ ಅಮರನಾಗಿದ್ದಾನೆ. ●

| | ಗ್ರಹ-1 | ಗ್ರಹ-2 | ಗುರು | ಶನಿ |
|---|---|---|---|---|
| ದ್ರವ್ಯರಾಶಿ | 0.7 | 0.5 | 1.00 | 0.3 |
| ನಕ್ಷತ್ರದಿಂದ ದೂರ (ಖಗೋಳಮಾನ) | 2.7 | 3.8 | 5.2 | 9.5 |
| ಪರಿಭ್ರಮಣದ ಅವಧಿ(ವರ್ಷಗಳು) | 12 | 20 | 12 | 29.5 |

ಕಬ್ಬಿಣ ಸಿಲಿಕೇಟುಗಳು ಪ್ರಧಾನವಾಗಿರುವಂಥ (ಒಳಗ್ರಹಗಳು) ಬುಧ, ಶುಕ್ರ, ಭೂಮಿ ಹಾಗೂ ಮಂಗಳಗಳಂಥ ಗ್ರಹಗಳ ರಚನೆ ಸಾಧ್ಯವೇ ಇಲ್ಲ. (ವೈಜ್ಞಾನಿಕ ಕಥೆ ಬರೆಯುವವರಿಗೆ ಎಂಥ ನಿರಾಸೆ! ಜೀವರಚನೆಯೇ ಸಾಧ್ಯವಿಲ್ಲ!) ಜಲಜನಕ, ಹೀಲಿಯಂಗಳಿಂದಾಗಿರುವ ಗುರು ಮತ್ತು ಶನಿಯಂಥ ಗ್ರಹಗಳಿರಬಹುದಷ್ಟೇ. ಯುರೇನಸ್, ನೆಪ್ಚೂನ್‌ಗಳಲ್ಲಿ ನೀರು, ಮಿಥೇನ್ ಮತ್ತು ಅಮೋನಿಯ ಮುಂತಾದವುಗಳಿವೆ. ಇಂಥ ಗ್ರಹಗಳು ಸಹ ಬರ್ನಾರ್ಡ್ ನಕ್ಷತ್ರಕ್ಕಿರಬಹುದು.

ಈ ಬರ್ನಾರ್ಡ್ ನಕ್ಷತ್ರಕ್ಕೆ ಗ್ರಹಗಳು ಇರುವುವಾದರೆ ಅವು ನಮಗೆ ಅತ್ಯಂತ ಸಮೀಪದ ಸಂಗಾತಿಗಳಾಗುತ್ತವೆ.

ಈಚೆಗೆ ಹರ್ಷೆ ಎಂಬ ವಿಜ್ಞಾನಿಯು, ವ್ಯಾನ್ ಡೆ ಕೆಂಪ್ ಅವರ ಅಳತೆಗಳನ್ನೇ ಸಂದೇಹಿಸಿದ್ದಾರೆ. ಅವರು ಬಳಸಿದ ದೂರದರ್ಶಕ ಸ್ಥಿರವಾಗಿಲ್ಲದೆ ಪಥದ ಡೊಂಕು ಹೆಚ್ಚು ಎಂಬ ಭ್ರಮೆಯುಂಟುಮಾಡಿವೆ ಎಂಬುದು ಅವರ ಆಕ್ಷೇಪಣೆ. ಇದಕ್ಕೆ ಸಾಕಷ್ಟು ಆಧಾರವಿಲ್ಲ.

ಈ ವಾದವಿವಾದಕ್ಕೆ ಅಂತ್ಯ ತಂದೊಡ್ಡಲು ಈಗ ಎರಡು ಮೂರು ಬೇರೆ ಬೇರೆ ದೂರದರ್ಶಕಗಳು ಬರ್ನಾರ್ಡ್ ನಕ್ಷತ್ರವನ್ನೇ ಅನುಸರಿಸುತ್ತಿವೆ. ●




ವ್ಯಾನ್ ಡೆ ಕೆಂಪ್‌ನ ಪ್ರಕಾರ ಬರ್ನಾರ್ಡ್ ನಕ್ಷತ್ರಕ್ಕೆ ಎರಡು ಗ್ರಹಗಳಿರಬಹುದು. ಸೌರಮಂಡಲದಲ್ಲಿ ಅದನ್ನು ಹೋಲಿಸಬಹುದು. ಗುರುಗ್ರಹದ ದ್ರವ್ಯರಾಶಿಯನ್ನು 1 ಎಂದು ಪರಿಗಣಿಸಲಾಗಿದೆ. ಒಂದು ಖಗೋಳಮಾನ = ಭೂಮಿಗೆ ಹಾಗೂ ಸೂರ್ಯನಿಗೆ ಇರುವ ಸರಾಸರಿ ದೂರ.

# ಈ ಜನಕ್ಕೆ 'ಬೀಗ'ವೆಂದರೇನೆಂದು ಗೊತ್ತೇ ಇಲ್ಲ!

● ನಮಿತಾ
(ಆಧಾರ: SUNDAY)

**ನಂಬಿಕೆ ಒಮ್ಮೆ ಮನದಲ್ಲಿ ನೆಲೆನಿಂತಿತೆಂದರೆ ಅದು ಉಂಟುಮಾಡುವ ಪರಿಣಾಮ ಊಹಾತೀತ. ಶಿಂಗ್ನಾಪುರದ ಜನರ ನಂಬಿಕೆ ಮತ್ತೆಲ್ಲೂ ಕಾಣಸಿಗದಂಥದ್ದು.**

ಹೌದು. ಇಲ್ಲಿ ಯಾವುದಕ್ಕೇ ಆಗಲಿ 'ಬೀಗ ಹಾಕುವುದು' ಒಂದು 'ದುರ್ನಡತೆ'. ಮನೆಯ್ನು ಬೃಹತ್ ಚೌಕಟ್ಟುಗಳಿಗೆ ಚಿಲಕದ ಕೊಂಡಿಯಿಲ್ಲ, ಕಿಟಕಿಗಳಿಗೆ ಮುಚ್ಚಿಕೊಳ್ಳುವ ಫಡಕುಗಳೂ ಇಲ್ಲ. ಈ ಜನಕ್ಕೆ ಬಾಗಿಲು ಎಂದರೇನೆಂಬುದು ಚಿತ್ರಗಳಲ್ಲಿ ನೋಡಿ ಗೊತ್ತು. ಕೆಲವು ಅಂಗಡಿಗಳಿಗೆ ಮಾತ್ರ ಇತ್ತೀಚಿತ್ತಲಾಗಿ ಬಾಗಿಲುಗಳನ್ನಿಡುತ್ತಾರೆಯೇ ಏನಾ ಅವಕ್ಕೂ ಚಿಲಕ ಮತ್ತು ಬೀಗಗಳಿಲ್ಲ!

ಮಹಾರಾಷ್ಟ್ರದ 'ಸಕ್ಕರೆಪಟ್ಟಣ'ವೆನಿಸಿಕೊಂಡಿರುವ ಅಹ್ಮದ್‌ನಗರದಿಂದ ಪೂರ್ವಕ್ಕೆ 30 ಕಿಲೋಮೀಟರುಗಳ ಅಂತರದ ಮೇಲಿರುವ ಶಿಂಗ್ನಾಪುರ ಬೀಗವೆಂದರೇನೆಂದು ಅರಿಯದ ಹಳ್ಳಿ. ಹಣ-ಆಭರಣಗಳನ್ನಲ್ಲಿಯವರು ಟ್ರಂಕು-ತಿಜೋರಿಗಳಲ್ಲಡಗಿಸಿಡುವುದಿಲ್ಲ. ಹಾಗೆ ಮಾಡಿದರೆ ''ದೇವರು ಸಿಟ್ಟಿಗೇಳುತ್ತಾನೆ'' ಎಂದು ಬಲವಾಗಿ ನಂಬುವ ಈ ಊರಿನ ಹಿರಿಯರು ಹೇಳುವ ಪ್ರಕಾರ ಕಳೆದ ಒಂದು ಶತಮಾನದ ಅವಧಿಯಲ್ಲಿ ಶಿಂಗ್ನಾಪುರದಲ್ಲಿ ಒಂದೇ ಒಂದು ಕಳುವಿನ ಪ್ರಕರಣವೂ ದಾಖಲಾಗಿಲ್ಲ! ಬಹುಶಃ ಇಂಥದೊಂದು ಹಳ್ಳಿಯಿದೆ ಎಂದರೆ ಅಚ್ಚರಿಗೊಳ್ಳುವ ಬಹುತೇಕರ ನಡುವೆ ಸಂಕಟಪಡುವ ಒಂದಿಬ್ಬರಾದರೂ ಇದ್ದಾರು: ಈ ಸುದ್ದಿ ಕೇಳಿದ ಕಳ್ಳಕಾಕರು ಕೈಕೈ ಹಿಸುಕಿಕೊಂಡರೆ, ಪೊಲೀಸರು ಪಿತ್ತನೆತ್ತಿಗೇರಿಸಿಕೊಂಡಾರು. ಅಂದ ಹಾಗೆ ಶಿಂಗ್ನಾಪುರದವರಿಗೆ ಪೊಲೀಸುಠಾಣೆಯ ಅಗತ್ಯವೇ ಇಲ್ಲದ್ದರಿಂದ ಇಲ್ಲಿ ಖಾಕಿ ದಿರಿಸಿನವರಿಗೆ ಪ್ರವೇಶವೇ ಇಲ್ಲ. ಅಕಸ್ಮಾತ್ತಾಗಿ ಯಾವನಾದರೂ ಒಬ್ಬ ಪೊಲೀಸು ಪೇದೆ ಕಂಡರೆ ಅಂದು ಆ ಊರಿಗೆ ಯಾರೋ ಮಂತ್ರಿಮಹೋದಯರು ಬರುವವರಿದ್ದಾರೆಂದು ಅರ್ಥ.

''ಇಡೀ ಹಳ್ಳಿಯಲ್ಲಿ ಸುತ್ತಾಡಿ ನೋಡಿ, ಎಲ್ಲಿಯಾದರೂ ಯಾವುದೇ ಮನೆಗೆ ಮುಂಬಾಗಿಲು ಕಂಡರೆ ಹೇಳಿ. ಯಾವುದೇ ಅಂಗಡಿಗೆ ಚಿಲಕವಿದ್ದರೆ ತೋರಿಸಿ. ನಮ್ಮ ಶನಿಭಗವಾನನಿರುವಾಗ ನಮಗೆ ಯಾತರ ಭಯ? ಅಹೋರಾತ್ರಿ ನಮ್ಮನ್ನಾತ ಕಣ್ಣಿಟ್ಟು ಕಾಪಾಡುತ್ತಾನೆ. ನಮ್ಮ ಹಳ್ಳಿಯಲ್ಲಿ ಪರರ ವಸ್ತುಗಳಿಗೆ ಕೈಹಚ್ಚಿದವ ಕಣ್ಣು ಕಳೆದುಕೊಳ್ಳುತ್ತಾನೆ. ಇಲ್ಲವೆ ಹುಚ್ಚು ಹಿಡಿಸಿಕೊಂಡು ಬೀದಿ ಬೀದಿ ಅಲೆಯುತ್ತಾನೆ,'' ಎನ್ನುತ್ತಾರೆ ಶಿಂಗ್ನಾಪುರದ ಹಿರಿಯರು.






ಶನಿಭಗವಾನನ ಮಂದಿರ

ಗ್ರಾಮದ ನಟ್ಟನಡುವಿರುವ ಕಲ್ಲು ಮಂಟಪದ ಮಧ್ಯೆ ನಿಂತಿರುವ ಕರಿ ಬಂಡೆಯೇ ಶಿಂಗ್ನಾಪುರದವರ ಅಧಿದೈವ. ನಾಲ್ಕೂ ನಿಟ್ಟಿಗೂ ಎದ್ದು ಕಾಣುವ ಈ ಶಿಲೆಗೆ ಗೋಡೆ-ಮಾಡು-ಛತ್ತು-ಗೋಪುರ ಮುಂತಾದವೇನೂ ಇಲ್ಲ. ಕೆಲವರ್ಷಗಳ ಹಿಂದೆಯಷ್ಟೇ ಆಧುನಿಕ ಹಾಲುಬಣ್ಣದ ಟೈಲ್ಸ್‌ನಿಂದ ಸಿಂಗರಿಸಲ್ಪಟ್ಟಿವೆ ಕಟ್ಟೆ-ಕಂಬಗಳು. ಭಕ್ತರು ದಾನವಾಗಿತ್ತ ಬೃಹತ್ ಗಾತ್ರದ ಗಂಟೆಗಳು ಹಗಲಿರುಳೂ ಜಾಗೃತೆಯ ಜಾಗಟೆ ಬಾರಿಸುತ್ತವೆ.

ಶನಿಭಗವಾನನ ಮಹಿಮೆಯನ್ನು ಸಾರುವ ಕಟ್ಟುಕಥೆಗಳಿಗೇನೂ ಇಲ್ಲಿ ಕೊರತೆಯಿಲ್ಲ. ಹಲವು ವರ್ಷಗಳ ಹಿಂದಿನ ಮಾತಂತೆ: ಕಾಳ ರಾತ್ರಿಯಲ್ಲಿ ಕಳ್ಳರ ತಂಡವೊಂದು ಶಿಂಗ್ನಾಪುರಕ್ಕೆ ನುಗ್ಗಿ ಒಂದು ಜತೆ ಹೋರಿಗಳನ್ನು ಹಾರಿಸಿಕೊಂಡು ಹೊರಟಿತಂತೆ. ರಾತ್ರಿಯಿಡೀ ಹೋರಿಗಳನ್ನೋಡಿಸಿಕೊಂಡು ನಡೆದ ಅವರು ಬೆಳ್ಳಿ ಚಿಕ್ಕಿ ಮೂಡುವ ಹೊತ್ತಿಗೆ 'ಬಹುಶಃ ತುಂಬ ದೂರ ಬಂದಿದ್ದೇವೆಂ'ದುಕೊಂಡು ಒಂದೆಡೆ ವಿಶ್ರಮಿಸಿದರಂತೆ. ಬೆಳಗ್ಗೆದ್ದು ನೋಡಿದರೆ ಅವರು ಅವಾಕ್ಕಾದರಂತೆ! ಯಾಕೆಂದರೆ ತಾವು ಮಲಗಿರುವುದು ಶನಿಭಗವಾನನ ಮಂದಿರದ ಮೆಟ್ಟಿಲುಗಳ ಬಳಿ! ಪಕ್ಕದಲ್ಲೇ ತಾವು ಕದ್ದ ಹೋರಿಗಳು ನಿಶ್ಚಿಂತೆಯಿಂದ ನಿಂತುಕೊಂಡಿವೆ. ಸುತ್ತ ಗ್ರಾಮಸ್ಥರು ನೆರೆದು, ಶನಿಭಗವಾನನಿಗೆ ಪೂಜೆ ಸಲ್ಲಿಸುತ್ತಿದ್ದಾರೆ! ದೈವದ ಹಿರಿಯರೆದುರು ಕ್ಷಮೆಯಾಚಿಸಿ, ಅವರ ಸಲಹೆಯಂತೆ ದೇವಸ್ಥಾನಕ್ಕೆ 'ತಪ್ಪುದಂಡ' ವಿತ್ತು ಅಲ್ಲಿಂದ ಹೋಗಬೇಕಾಯಿತಂತೆ ಆ ಕಳ್ಳರು.

ಈ ನಂಬಿಕೆ ಶಿಂಗ್ನಾಪುರದ ಗ್ರಾಮಸ್ಥರನ್ನು ನಿರ್ಭಯರನ್ನಾಗಿಸಿದೆ. ಅವರ ಈ ನಂಬಿಕೆಯನ್ನು ದುರುಪಯೋಗಪಡಿಸಿಕೊಳ್ಳುವ ದುರುಳರೂ ಇಲ್ಲಿಲ್ಲ. ಕಬ್ಬಿನ ತೋಟಗಳು ಇಲ್ಲಿಯವರ ಪ್ರಮುಖ ಆದಾಯಮೂಲ. ಅಹ್ಮದನಗರಕ್ಕೆ ಕಬ್ಬು ಸಾಗಿಸಿ ಬಂದ ಹಣವನ್ನವರು ಗಡಿಗೆ ಮಡಕೆಗಳಲ್ಲಿಡುತ್ತಾರೆಯೆ ವಿನಾ ಅವುಗಳನ್ನು ಬಟ್ಟೆಯಿಂದ ಮುಚ್ಚಿ ಬಚ್ಚಿಡುವುದಿಲ್ಲ. ತಮ್ಮ ಜಾನುವಾರುಗಳು. ಕೋಳಿ-ಮೇಕೆಗಳಿಗಾಗಿ

> ನೂರಾರು
> ಭಾವಗಳ
> ನೋವುಗಳ
> ಕನಸಿನ
> ಪ್ರತಿಫಲ!
>
> ● ಸುಬ್ರಾಯ ಗಾಂವ್ಕರ

ಮಾತ್ರ ಬೇಲಿ ಕಟ್ಟಲು ಹಳ್ಳಿಗರಿಗೆ ಅನುಮತಿಯಿದೆ.

ದೇವಸ್ಥಾನದ ಪೂಜಾರಿ ಹೇಳುತ್ತಾನೆ: ''ಸುಮಾರು ನೂರೈವತ್ತು ವರ್ಷಗಳ ಹಿಂದೊಮ್ಮೆ ಪ್ರವಾಹನುಗ್ಗಿಬಂತು. ಕೆಲವು ಹುಡುಗರು ಈಜ ದಾಟುವಾಗ ಶನಿಭಗವಾನನ ಶಿಲೆ ಕಂಡಿತು. ಅದನ್ನು ಎಳೆದು ದಡಕ್ಕೆ ತರಲೆಂದು ಅವರು ಪ್ರಯತ್ನಿಸಿದಾಗ ಎತ್ತೆತ್ತಿ ಹಾಕಿದಲ್ಲೆಲ್ಲ ಶಿಲೆಯಲ್ಲಿ ನೆತ್ತರು ಒಸರಿತು! ಗಾಬರಿಗೊಂಡ ಆ ತರುಣರು ಹಳ್ಳಿಯ ಹಿರಿಯರಿಗೆ ವರದಿ ಒಪ್ಪಿಸಿದರು. ಎಷ್ಟೋ ಜನ ಕಲ್ಲನ್ನೆತ್ತಲು ಯತ್ನಿಸಿದರೂ ಅದು ಜಪ್ಪೆನ್ನಲಿಲ್ಲ!'' ಆ ರಾತ್ರಿ ಹಿರಿಯನೊಬ್ಬನಿಗೆ ಸ್ವಪ್ನವಾಯಿತಂತೆ. ಶನಿಭಗವಾನ ಕಾಣಿಸಿಕೊಂಡು ತನ್ನನ್ನು ಪ್ರತಿಷ್ಠಾಪಿಸಲು ನಿರ್ದಿಷ್ಟ ಸ್ಥಳವೊಂದನ್ನು ಸೂಚಿಸಿದನಂತೆ.

ಸುಮಾರು ಎರಡುಸಾವಿರದ ಆಸುಪಾಸಿನಷ್ಟು ಜನಸಂಖ್ಯೆಯುಳ್ಳ ಶಿಂಗ್ನಾಪುರ ಮಹಾರಾಷ್ಟ್ರದ ಪ್ರೇಕ್ಷಣೀಯ ಸ್ಥಳವಾಗಿ ಬೆಳೆದಿದೆ. ವರ್ಷದಲ್ಲಿ ಮೂರು ಜಾತ್ರೆಗಳಾಗುತ್ತವೆ: 'ಶನಿವಾರದಂದು ಹುಣ್ಣಿವೆ' ಬಂದಾಗ. ಆಗ ಸೇರುವ ಭಕ್ತರ ಸಂಖ್ಯೆ ಲಕ್ಷಕ್ಕೂ ಮೀರುತ್ತದೆ. ಈ ಜಾತ್ರೆಗಳ ಸಂದರ್ಭದಲ್ಲಿ ಮಾತ್ರ ಹಳ್ಳಿಯ ಹಿರಿಯರು ಪೊಲೀಸರ ನೆರವು ಬಯಸುತ್ತಾರೆ.

ಈ ಜನಸಂದಣಿಯ ಕ್ಷಣಗಳಲ್ಲಿ ಮೈಮರೆತು ತಮ್ಮ ವಸ್ತುಗಳನ್ನು 'ಕಳೆದುಕೊಳ್ಳು'ವ ಜನ ಗಾಬರಿಗೊಳ್ಳುವುದಿಲ್ಲ. ಕಳೆದದ್ದು ಮರಳಿ ಬರುವ ಭರವಸೆ ಅವರಿಗುಂಟು. ಮರುದಿನವೋ ಅದರ ಮಾರನೆ ದಿನವೋ ಇಂಥ ನೂರಾರು ಕಳೆದ ವಸ್ತುಗಳು ದೇವಾಲಯದ ಪಾರುಪತ್ಯಗಾರರ ಬಳಿ ತಮ್ಮ ಮಾಲಿಕನಿಗಾಗಿ ಕಾದುಕುಳಿತಿರುತ್ತವೆ. ಸಿಕ್ಕ ವಸ್ತುಗಳ ಪಟ್ಟಿಯನ್ನು ಆಗೀಗ ಘೋಷಿಸುತ್ತಲೇ ಇರುತ್ತಾರಾದ್ದರಿಂದ ಗುರುತು-ಪುರಾವೆ ಹೇಳಿ ಪಡೆದುಕೊಳ್ಳುವುದು ಸುಲಭ. ಇನ್ನೂ ಕೆಲ ಸಂದರ್ಭಗಳಲ್ಲಿ ಕಳೆದು ಹೋದ ವಸ್ತುಗಳು ಬೆಳಗಾಗುವುದರೊಳಗಾಗಿ ತನ್ನೊಡೆಯನ ಮನೆ ಬಾಗಿಲಲ್ಲಿ ಬಂದು ಕೂತಿರುತ್ತವಂತೆ.

ಶಿಂಗ್ನಾಪುರದ ಬಹುತೇಕರಿಗೆ ಸಮೀಪದ ಸಕ್ಕರೆ ಕಾರಖಾನೆಯೇ ಜೀವನಾಧಾರ. ವರ್ಷಕ್ಕೆರಡು ಕಬ್ಬಿನ ಫಸಲು ತೆಗೆದು ಮುಳಾಸಹಕಾರಿ ಸಕ್ಕರೆ ಕಾರಖಾನೆಗೆ ಸಾಗಿಸುತ್ತಾರೆ. ಹೀಗಾಗಿ ಪ್ರತಿ ಕುಟುಂಬವೂ ಕೆಲವು ಹಸುಗಳನ್ನೂ ಒಂದು ಮೋಟಾರ್ ಬೈಕನ್ನೂ ಹೊಂದಿರುತ್ತದೆ.

ಶನಿಭಗವಾನ್ ಮಂದಿರಕ್ಕೊಂದು ವಿಶ್ವಸ್ಥ ಮಂಡಲಿಯಿದೆ. ದೇವಸ್ಥಾನಕ್ಕೆ ದೊರೆವ ದೇಣಿಗೆಗಳಿಂದ ಒಂದು ಪ್ರಾಥಮಿಕ ಶಾಲೆಯನ್ನೂ, ಭಕ್ತರಿಗ್ಗಾಗಿ ಧರ್ಮಶಾಲೆಯನ್ನೂ, ಊರವರಿಗಾಗಿ ಧರ್ಮಾರ್ಥ ದವಾಖಾನೆಯನ್ನೂ ಈ ಮಂಡಳಿ ನಡೆಸುತ್ತದೆ.

'ತಮ್ಮ ಪ್ರತಿಹೆಜ್ಜೆಯನ್ನೂ, ಪ್ರತಿ ಶ್ವಾಸೋಚ್ಛ್ವಾಸವನ್ನೂ ನಿಯಂತ್ರಿಸುವವ ಶನಿಭಗವಾನನೆ' ಎಂದು ಬಲವಾಗಿ ನಂಬಿಕೊಂಡಿರುವವರು ಶಿಂಗ್ನಾಪುರದ ಜನ. ಅರುಣ ಕಿರಣಗಳು ಊರನ್ನು ಆವರಿಸುತ್ತಿದ್ದ ಹಾಗೆಯೇ ದೈನಂದಿನ ಚಟುವಟಿಕೆಗೆ ಸಿದ್ಧರಾಗುವ ಈ ಹಳ್ಳಿಗರು, ಗೋಧೂಳಿ ಹಾರುವ ಹೊತ್ತಿಗೆ ಆ ದಿನದ ಘಟನೆಗಳ ಉಜಳಣೆ ನಡೆಸುತ್ತ ಸ್ನೇಹಪೂರ್ವಕವಾಗಿ, ವಿಶ್ವಾಸಪೂರ್ವಕವಾಗಿ ನಗುತ್ತ ನಲಿಯುತ್ತ ಮರುದಿನದ ಬದುಕಿನ ಬಗ್ಗೆ ಚರ್ಚೆ ನಡೆಸುತ್ತಾರೆ. ರಾತ್ರಿಯಾದಂತೆ ತಮ್ಮ ರಕ್ಷಣೆಯ ಭಾರವನ್ನು ಆ ಶನಿಭಗವಾನನಿಗೊಪ್ಪಿಸಿ ನೆಲಕ್ಕೆ ಬೆನ್ನು ಹಚ್ಚುತ್ತಾರೆ. ●

# ನಿಮ್ಮ ಶಬ್ದ ಭಂಡಾರ ಬೆಳೆಸಲಿ

## ಶಬ್ದ ಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳ ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಅದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

1. ಹೊಯ್ ಕಯ್
   (ಅ) ಬಡಿದಾಟ
   (ಆ) ಮೋಸ
   (ಇ) ಕೈ ಬೀಸುವಿಕೆ
   (ಈ) ಸರಿಸಮಾನ
2. ಪ್ರತಿಷ್ಠಿತ
   (ಅ) ಗೌರವ ಪಾತ್ರ
   (ಆ) ಓಡಿಹೋದ
   (ಇ) ಎದುರಾಳಿ
   (ಈ) ಆಶ್ರಿತ
3. ದುರ್ವಹ
   (ಅ) ದುಂದುವೆಚ್ಚ
   (ಆ) ಹೊಲಸು ಪ್ರವಾಹ
   (ಇ) ಎಣಿಸಲಾರದ
   (ಈ) ಹೊರಲಾರದ
4. ಪ್ರಗಲ್ಭ
   (ಅ) ಬಸಿರಿ
   (ಆ) ಹೊಟ್ಟೆಯಲ್ಲಿರುವ ಕೂಸು
   (ಇ) ಧೈರ್ಯವುಳ್ಳ
   (ಈ) ನಂಬಿಕೆಯುಳ್ಳ
5. ಮೂಬದಲು
   (ಅ) ವಿನಿಮಯ
   (ಆ) ಮೂರು ಸಲ
   (ಇ) ಬಾಯಿ ಬಾರದಿರುವುದು
   (ಈ) ವೃದ್ಧಾಪ್ಯ
6. ಹಲ್ಲಣ
   (ಅ) ಅಲಗಾಡಿಸುವಿಕೆ
   (ಆ) ಓಟ
   (ಇ) ದುರವಸ್ಥೆ
   (ಈ) ಜೀನು
7. ಬಹುಶ್ರುತ
   (ಅ) ತುಂಬ ಬೈಗಳು ತಿಂದವ
   (ಆ) ಸಂಗೀತಗಾರ
   (ಇ) ವಾಚಾಳಿ
   (ಈ) ಪಂಡಿತ
8. ತೂಷ್ಣೀಭಾವ
   (ಅ) ಬಿಸಿ
   (ಆ) ಸಂತೃಪ್ತಿ
   (ಇ) ಸುಮ್ಮನಿರುವಿಕೆ
   (ಈ) ಲಗುಬಗೆ
9. ಸಲುಗೆ
   (ಅ) ಪ್ರೀತಿಸು
   (ಆ) ಮುದುಡು
   (ಇ) ಮೋಸಹೋಗು
   (ಈ) ಸಂತೋಷಗೊಳ್ಳು
10. ನಿಮ್ನ
    (ಅ) ವ್ರತ
    (ಆ) ವೇದ
    (ಇ) ಬೆಚ್ಚಗಿನ
    (ಈ) ಕೆಳಗಿನ
11. ಛಾನಸ
    (ಅ) ಸಂದರ್ಭ
    (ಆ) ಚಪ್ಪರ
    (ಇ) ಚಿಕ್ಕ
    (ಈ) ವಿಲಂಬ
12. ತಿರ್ಯಕ್
    (ಅ) ಕೆಳಗಿನ
    (ಆ) ಮೇಲಿನ
    (ಇ) ತುರಿಕೆ
    (ಈ) ಅಡ್ಡಲಾಗಿರುವ

# ಶಬ್ದ ಭಾಂಡಾರದ ಸರಿಯಾದ ಅರ್ಥಗಳು

**1. ಹೊಯ್ ಕಯ್**

(ಈ) ಸರಿಸಮಾನ, ಸರಿಮಿಗಿಲು. ಉದಾ:- ಕುಮಾರವ್ಯಾಸ ಪಂಪನಿಗೆ ಹೊಯ್-ಕಯ್ಯಾಗಿ ನಿಲ್ಲುವ ಪ್ರತಿಭಾಶಾಲಿ. [ಕನ್ನಡ]

**2. ಪ್ರತಿಷ್ಠಿತ**

(ಅ) ಗೌರವಪಾತ್ರ, ಸಂಭಾವಿತ, ಕೀರ್ತಿಪಡೆದ (ಮನುಷ್ಯ) ಸ್ಥಾಪಿಸಲ್ಪಟ್ಟ (ದೇವಸ್ಥಾನ, ಮೂರ್ತಿ), ತಳವೂರಿದ. ಉದಾ:- ಪ್ರತಿಷ್ಠಿತ ವ್ಯಕ್ತಿಗಳಿಗೆ ಮರ್ಯಾದೆ ಆದ ಮೇಲೆ ಸಾಮಾನ್ಯ ಜನರ ವಿಚಾರ. [ಸಂ.]

**3. ದುರ್ವಹ**

(ಈ) ಹೊರಲಾರದ, ಸಹಿಸಲಾರದ. ಉದಾ:- ಈ ದುರ್ವಹವಾದ ದುಃಖ ನನ್ನ ಪಾಲಿಗೇಕೆ ಬಂತೋ. [ಸಂ. ದುರ್=ಕಷ್ಟದಿಂದ, ವಹ=ಹೊರುವಂಥ]

**4. ಪ್ರಗಲ್ಭ**

(ಇ) ಧೈರ್ಯವುಳ್ಳ, ದಿಟ, ಆತ್ಮವಿಶ್ವಾಸವುಳ್ಳ, ಬಲವಾದ, ಮಾತಿನಲ್ಲಿ ಜಾಣತನವುಳ್ಳ, ಚತುರ, ಪ್ರೌಢ, ಸ್ವಾಭಿಮಾನವುಳ್ಳ, ದರ್ಪವುಳ್ಳ. ಪ್ರಗಲ್ಭವಾದ ಮಾತು ಎಂದರೆ ಜಾಣತನದ ಅಥವಾ ತೂಕದ ಮಾತು. ಪ್ರಗಲ್ಭಳಾದ ಹೆಂಗಸು ಎಂದರೆ ಗಂಡನನ್ನು ಆಳಬಲ್ಲ ದಿಟ್ಟ ಹೆಂಗಸು.[ಸಂ.]

**5. ಮೂಬದಲು**

(ಅ) ವಿನಿಮಯ, ಒಂದು ವಸ್ತು ಕೊಟ್ಟು ಇನ್ನೊಂದನ್ನು ತೆಗೆದುಕೊಳ್ಳುವುದು, ಎರಡೂ ಕಡೆ ಲಿಖಿತ ರಶೀದಿಗಳಿಲ್ಲದೆ ಚಾಲತಿ ಲೆಕ್ಕದಲ್ಲಿ ಕೊಟ್ಟ ಮತ್ತು ತೆಗೆದುಕೊಂಡ ಹಣ. ಮೂಬದಲೆ ಎಂದೂ ಇದೆ.

**6. ಹಲ್ಲಣ**

(ಈ) (ಕುದುರೆ ಮೊದಲಾದ್ದಕ್ಕೆ ಹಾಕುವ) ಜೀನು, ಕಡಿವಾಣ ಹಲ್ಲಣ ಹಾರಿಹೋಯಿತು. ಅಂದರೆ ಪೌರುಷವೆಲ್ಲ ನೆಲಸಮವಾಯಿತು. [ಸಂ. - ಪಲ್ಯಯನದಿಂದ]

**7. ಬಹುಶ್ರುತ**

(ಈ) ಪಂಡಿತ, ಅನೇಕ ಶಾಸ್ತ್ರಗಳನ್ನು ಕೇಳಿ ತಿಳಿದವ, ತುಂಬ ಜ್ಞಾನವುಳ್ಳವ. (ಉದಾ:- ಬಹುಶ್ರುತರಾದ ಜನರು ಇಂದು ಕಡಿಮೆ) [ಸಂ. ಬಹು: ತುಂಬಾ+ಶ್ರುತ=ಕೇಳಿದ]

**8. ತೂಷ್ಣೀಭಾವ**

(ಇ) ಸುಮ್ಮನಿರುವಿಕೆ, ಉದಾ:- ತೂಷ್ಣೀಭಾವದಿಂದ ಅವನು ಎಲ್ಲವನ್ನೂ ಸಹಿಸುತ್ತಿದ್ದನು.[ಸಂ.]

**9. ನಲುಗು**

(ಅ) ಮುದುಡು, (ಕಾಗದ, ಅರಿವೆ ಮೊದಲಾದವುಗಳಂತೆ) ನಿರಿಬೀಳು ಬಾಡು, ಬಲಗುಂದು, ಕಳೆಗುಂದು [ಕನ್ನಡ]

**10. ನಿಮ್ನ**

(ಈ) ಕೆಳಗಿನ, ಇಳುಕಲಾದ, ತಗ್ಗು ಸ್ಥಳ, ಕೀಳು. ನಿಮ್ನ ವರ್ಗ ಎಂದರೆ ಕೆಳಗಿನ ವರ್ಗ.[ಸಂ.]

**11. ಛಾನಸ**

(ಈ) ವಿಲಂಬ, ವಿಲಂಬ ಪ್ರವೃತ್ತಿ, ತೀರ ಮೆಲ್ಲಗೆ ಕೆಲಸಮಾಡುವ ಅಭ್ಯಾಸ ಉದಾ:- ಸರಕಾರದ ಛಾನಸದಿಂದ ಜನರು ಬಲು ಬೇಸತ್ತಿದ್ದಾರೆ.[ಸಂ. 'ಛಾಂದಸ'ದ ಅಪಭ್ರಂಶ]

**12. ತಿರ್ಯಕ್**

(ಈ) ಅಡ್ಡಲಾಗಿರುವ, ವಕ್ರವಾದ, ತಿರ್ಯಕ್ ಜಂತು ಎಂದರೆ ಮೃಗ ಪಕ್ಷಿ ಮೊದಲಾದ ಕೆಳಗಿನ ಜೀವ ಜಾತಿಗಳು (ಅವು ಮನುಷ್ಯನಂತೆ ನೆಟ್ಟಗೆ ನಡೆಯದೆ ಅಡ್ಡಕ್ಕೆ ನಡೆಯುವುದರಿಂದ) [ಸಂ. ]

### ನಿಮ್ಮ ಶಬ್ದಶಕ್ತಿ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

6-8 ಸರಿಯಿದ್ದರೆ ... ಸಾಧಾರಣ

9-10 ಸರಿಯಿದ್ದರೆ ... ಉತ್ತಮ

11-12 ಸರಿಯಿದ್ದರೆ ... ಅತ್ಯುತ್ತಮ

ಕನ್ನಡ ಕಥೆ

# ಕೊನೆ

**ಉಂಡು ಹೋದವ ಕೊಂಡೂ ಹೋದ ಎಂಬುದು ಆಗ ಹೇಗೆ ಗೊತ್ತಾಗಬೇಕು?**

ಮುದಿ ಬೀಳತೊಡಗಿದ್ದ ಆ ಊರಿಗೆ ನಾನು ಹೋದ ಹೊಸತರಲ್ಲಿ ನನ್ನ ಬಗ್ಗೆ ಇನ್ನೂ ಕತೆಗಳು ಹುಟ್ಟಿಕೊಂಡಿರಲಿಲ್ಲ. ಒಳ್ಳೆಯ ನೌಕರಿಯಿತ್ತು. ಮಾತು ಕೇಳುವ ಆರೋಗ್ಯವಿತ್ತು. ಬಂಧನಗಳು ಬಿಡಿ; ಅವತ್ತೂ ಇರಲಿಲ್ಲ, ಇವತ್ತಿಗೂ ಇಲ್ಲ. ಅಶೋಕನಗರಕ್ಕೂ ವಿಶ್ವೇಶ್ವರನಗರಕ್ಕೂ ನಡುವಿನ ಒಂದು ಪಾಳುಬಿದ್ದ ಕೆರೆಯಂತಹ ಇಳುಕಲು ಜಾಗದಲ್ಲಿ ಕಟ್ಟಿದ್ದ ಅಪಾರ್ಟ್‌ಮೆಂಟು 'ಸಫೀನಾ'ದಲ್ಲಿ ನನಗೊಂದು ಮನೆ. ಆಫೀಸ್ ಕಾರು ಬಾಗಿಲಿಗೆ ಬರುತ್ತೆ. ರಾತ್ರಿ ಎಷ್ಟೊತ್ತಾದರೂ ಬಾರುಗಳು ತೆಗೆದಿರುತ್ತವೆ. ಯಾವುದೋ ಸರಹೊತ್ತಿನಲ್ಲಿ ಬಂದು ಸಫೀನಾ ಅಪಾರ್ಟ್‌ಮೆಂಟಿನೊಳಗಿನ ನನ್ನ ಗೂಡು ಸೇರಿಕೊಂಡು ಬಿಟ್ಟರೆ ಮುಗಿಯಿತು - ಬದುಕಿನ ಪುಸ್ತಕದಲ್ಲಿ ಒಂದು ಹಾಳೆ ತಿರುವಿದಂತೆಯೇ.

ಅಂಥ ನಿರುಪದ್ರವಕಾರಿ ನಿರಾತಂಕ ಜೀವನ ಪ್ರಾರಂಭಿಸಿದ ಕೆಲವೇ ದಿನಗಳಲ್ಲಿ ನನ್ನ ಕಣ್ಣಿಗೆ ಬಿದ್ದವಳು ಜೋಸೆಫೀನ್. ಅದಕ್ಕೂ ಮುಂಚೆ ನನ್ನ ಕಣ್ಣಿಗೆ ಬಿದ್ದದ್ದು - ಅವಳ ಮೊಳಕಾಲು. ಒಂದೇಟಿಗೆ ಎದ್ದುನಿಂತು ಬಿಟ್ಟೆ. ಒಂದೇ ಒಂದು ಚಿಕ್ಕ ಮುದುರು, ಮಡತೆ, ಗಂಟು, ಕಡೆಗೆ ಒಂದು ಗೀರೂ ಇಲ್ಲದ ಅಂಥ ನುಣುಪಾದ ಮಂಜುಗಡ್ಡೆಯಂಥ ಮೊಳಕಾಲನ್ನು ನಾನು ದೇವರಾಣೆಗೂ ನೋಡಿರಲಿಲ್ಲ. ಅದನ್ನು ಕಡುಗುಲಾಬಿ ಬಣ್ಣದ ಸ್ಕರ್ಟಿನ ಫ್ರಿಲ್ಲುಗಳು ವಿಪರೀತ ಸಂಕೋಚದಿಂದ ಮುಚ್ಚಿದ್ದವು. ಅಂಥ ಮೊಳಕಾಲು ನೋಡಿದ ಮೇಲೆ ಅವುಗಳ ಒಡತಿಯ ಮುಖ ನೋಡದಿದ್ದರೆ ದೇವರು ಮೆಚ್ಚಿಯಾನೆಯೇ? ನನ್ನ ಕಿಟಕಿಯ ಮುಂದೆ ನಿಂತಿದ್ದವಳನ್ನು ಅದೇ ಕಿಟಕಿಯ ಮೇಲ್ಭಾಗದಿಂದ ಇಣುಕಿ ನೇರವಾಗಿ ನೋಡಿದೆ.

ನಿಮ್ಮ ಮೇಲಾಣೆ!

ಜಗತ್ತಿನ ಯಾವ ಹೆಂಗಸೂ ಮತ್ಯಾವ ಗಂಡಸಿಗೂ ಅಷ್ಟೊಂದು ಹುಚ್ಚನ್ನು ಅದರಲ್ಲೂ ನೋಡಿದ ಮೊದಲ ಕ್ಷಣದಲ್ಲೇ ಹಿಡಿಸಿರಲಿಕ್ಕಿಲ್ಲ. ಅವಳ ತಿಳಿ ಜೇನುಬಣ್ಣದ ಕಂಗಳಲ್ಲಿ ನವಿಲು ಕುಣಿಯುತ್ತಿದ್ದವು. ಎದೆಗಳು ಆನಂದದಿಂದ ಕಾಯುವಂತೆ ಸ್ಥಿರಗೊಂಡಿದ್ದವು. ಮಸ್ತಾದ ಜಡೆಯಾಗಬಹುದಾದ ತಲೆಗೂದಲು ಬೆನ್ನಮೇಲೆ ಹರಡಿ ಜಲಪಾತಗಳಂತಿಳಿಬಿದ್ದಿದ್ದವು. ಹೆಂಗಸೆಂದರೆ ಹೀಗಿರಬೇಕು ಎಂಬ ಭಾವನೆ ಮೂಡಿ ಬಂದ ಬೆನ್ನಲ್ಲೇ ಇಂಥ ಹೆಂಗಸೂ ಇರಲು ಸಾಧ್ಯವೆ ಎನ್ನಿಸಿ ಏನು ಮಾಡಲೂ ತೋಚದೆ ಅದೊಂದು ವಿಚಿತ್ರವಾದ ದನಿ ಹೊರಡಿಸಿ ಖುವ್ವೋ...ಖುವ್ವೋ... ಎಂದು ಕೆಮ್ಮಿಬಿಟ್ಟೆ.

● ರವಿ ಬೆಳಗೆರೆ

ಆಗ ನೋಡಿದಳು ನನ್ನನ್ನು ಜೋಸೆಫೀನ್!

ನನ್ನ ಬದುಕಿನ ಮುಂಜಾನೆಗಳಿಗೆ ಅರ್ಥ ದೊರೆಯಲು ಪ್ರಾರಂಭವಾದದ್ದೇ ಆ ಕ್ಷಣದಿಂದ. ನಿತ್ಯ ಬೆಳಿಗ್ಗೆ ಸರಿಯಾಗಿ ಆರುಗಂಟೆ ಹತ್ತು ನಿಮಿಷಗಳಿಗೆ ನನ್ನ ಮನೆಯ ಕಿಟಕಿಗೆ ಬರುತ್ತಾಳೆ ಜೋಸೆಫೀನ್. ಅವಳ ಹತ್ತಿರ ಮನೆಯಲ್ಲಿ ಧರಿಸುವಂತಹ ತಿಳಿಹಸಿರು, ಕಡುಗುಲಾಬಿ ಮತ್ತು ಅವಳ ಕಣ್ಣ ಬಣ್ಣದ ಮೂರು ಸ್ಕರ್ಟುಗಳಿವೆ. ಅವುಗಳ ಪೈಕಿ ಕಣ್ಣಬಣ್ಣದ್ದು

ಮಾತ್ರ ಇಡಿಯಾಗಿ ಅವಳ ನುಣುಪಾದ ಮೊಳಕಾಲನ್ನು ಮುಚ್ಚುತ್ತದೆ. ನನ್ನ ಕಿಟಕಿಯೆದುರು ವರಾಂಡದ ಮೂಲೆಯಲ್ಲಿ ಒಂದು ಸ್ಟೂಲಿದೆ. ಬೆಳಿಗ್ಗೆ ಆರುಗಂಟೆಗೆ ಬರುವ ಹಾಲಿನ ಹುಡುಗ ಮಂಜಿನಷ್ಟು ತಣ್ಣಗಿನ ಹಾಲಿನ ಪಾಕೀಟುಗಳನ್ನು ಆ ಸ್ಟೂಲಿನ ಮೇಲಿಟ್ಟು ಹೋಗುತ್ತಾನೆ. ಸಫೀನಾ ಅಪಾರ್ಟ್‌ಮೆಂಟಿನ ಐದನೆ ಮಹಡಿಯಿಂದ ಇಳಿದು ಬರುವ ಜೋಸೆಫೀನ್ ಸರಿಯಾಗಿ ಆರು ಹತ್ತಕ್ಕೆ ಬಂದು ಅರ್ಧಲೀಟರಿನ ಪಾಕೀಟು ತೆಗೆದುಕೊಂಡು ಹಿಂತಿರುಗುತ್ತಾಳೆ. ಎರಡು ವಿಷಯ ಗ್ಯಾರಂಟಿಯಾದವು.

ಒಂದು: ಜೋಸೆಫೀನ್ ತನ್ನ ಮನೆಯಲ್ಲಿ ಒಬ್ಬಂಟಿಯಾಗಿರುತ್ತಾಳೆ.

ಎರಡು: ಒಂದೊಂದು ದಿನ ಹಾಲಿನ ಹುಡುಗ ತಡವಾಗಿ ಬಂದರೆ ಅವಳು ನನ್ನ ಕಿಟಕಿಯೆದುರಿನ ವರಾಂಡದಲ್ಲಿ ನಿಂತು ಸಿಡಸಿಡನೆ ಸಿಡುಕುತ್ತ ಮೇಲೆರುವ ಸೂರ್ಯನನ್ನು ದಿಟ್ಟಿಸುತ್ತ ಒಂದೆರಡು ನಿಮಿಷ ನಿಲ್ಲುತ್ತಾಳೆ.

ಕೇವಲ ಅರ್ಧಲೀಟರಿನ ಪಾಕೀಟು ಒಯ್ಯುವವಳು ಒಬ್ಬಂಟಿಗಳಲ್ಲದೆ ಮತ್ತೇನು? ಎಂಬ ನನ್ನ ತರ್ಕ ಸತ್ಯವಾದದ್ದಕ್ಕೆ ನನ್ನನ್ನು ನಾನೇ ಮೆಚ್ಚಿಕೊಂಡು, ಅವತ್ತು ನಾಲ್ಕಾರು ಮೊಗೆ ಹೆಚ್ಚು ನೀರು ಸುರಿದುಕೊಂಡು ಸ್ನಾನ ಮಾಡಿದೆ. ರಾತ್ರಿ ಎರಡನೇ ಪೆಗ್ಗಿಗೇ ಗುಂಡು ಮುಗಿಸಿ ಬೇಗ ಮಲಗುವುದನ್ನು ರೂಢಿಮಾಡಿಕೊಂಡೆ. ಐದೂ ಮುಕ್ಕಾಲಿಗೆದ್ದು ಹಲ್ಲುಜ್ಜಿಕೊಂಡು ಸಾಧ್ಯವಾದಷ್ಟೂ ಚೆನ್ನಾಗಿ ತಲೆಬಾಚಿಕೊಂಡು ಕಿಟಕಿಗಳನ್ನು ವಿಶಾಲವಾಗಿ ತೆಗೆದಿರಿಸಿ ರಾತ್ರಿಯಿಡೀ



ನಾನು ಕಾಯುವ ಆ ಆರೂ ಹತ್ತೆಂಬ ಅಪೂರ್ವ ನಿಮಿಷಗಳಿಗಾಗಿ ಮತ್ತೆ ಕಾಯುತ್ತ ಕೂಡುವುದು ನನ್ನ ನೌಕರಿಗಿಂತಲೂ ಪ್ರಮುಖವಾದ ಉದ್ಯೋಗವಾಯಿತು. ''ದೇವರೇ,'' ಕೇಳಿ ಕೊಂಡೆ. ''ನಿನ್ನ ಕಾಲದ ಚೀಲದಲ್ಲಿ ದಿನಕ್ಕೆ ಒಂದೇ ಒಂದು, ಮುಂಜಾವಿನ ಆರೂ ಹತ್ತರ ಘಳಿಗೆಯಾ ಇರುವುದು? ಕಡೇ ಪಕ್ಷ ಅದನ್ನಾದರೂ ಅರ್ಧಗಂಟೆಯ ಕಾಲ ಜಾರಿಯಲ್ಲಿಡು. ಅಥವಾ ಹಾಲು ತರುವ ಹುಡುಗ ಹತ್ತಾದರೂ ನಿಮಿಷ ತಡವಾಗಿ ಬರುವಂತೆ ಶಪಿಸು. ಹೇ, ದಯಾಮಯಿ ಪರಮಾತ್ಮನೇ, ಬೆಳಿಗ್ಗೆ ಎದ್ದವಳ ಕೈಗೆ ಆ ಕಣ್ಣ ಬಣ್ಣದ ಸ್ಕರ್ಟು ಸಿಗದಂತೆ ಕಾಳಜಿವಹಿಸು. ನಾನು ಮೊಳಕಾಲು ನೋಡದೆ ಬದುಕಲಾರೆ. ಆಮೆನ್!''

ನಕ್ಕಳು ಜೋಸೆಫೀನ್!

ಅವಳ ಮೊಳಕಾಲು ನೋಡಿದ ಹದಿಮೂರನೆಯ ದಿನ ಹೂವೊಂದು ಪಕಳೆ ಬಿಚ್ಚಿದಂತೆ ಅನಾಯಾಸವಾಗಿ, ನನ್ನನ್ನು ನೋಡಿ ಮೆಲುನಗೆ ನಕ್ಕಳು. ದೇವರು ನನ್ನೆಲ್ಲ ವಿನಂತಿಗಳನ್ನೂ ಮನ್ನಿಸಿದ್ದ. ಕಡುಗುಲಾಬಿ ಸ್ಕರ್ಟು, ಹಾಲಿನ ಹುಡುಗ ಐದು ನಿಮಿಷ ಲೇಟು ಮತ್ತು ಜೋಸೆಫೀನ್‌ಳ ಕೆಳತುಟಿಯಲ್ಲಿ ಕದಲಿದ್ದು ನಗೆ! ಅದನ್ನು ನಿರೀಕ್ಷಿಸದ ನಾನು ತಕ್ಷಣ ಹೇಗೆ ಪ್ರತಿಕ್ರಿಯಿಸುವುದೋ ಗೊತ್ತಾಗದೆ ಎರಡು ಬಾರಿ ಪೆದ್ದನಂತೆ ಖಪ್ವೋ...ಖಪ್ವೋ...ಎಂದು ಕೆಮ್ಮಿಬಿಟ್ಟೆ.

ಮತ್ತೆ ನಕ್ಕಳು ಜೋಸೆಫೀನ್.

ಅಂದಿನಿಂದ ಎಡೆಬಿಡದೆ ಪ್ರತಿನಿತ್ಯ ನಗುತ್ತಿದ್ದಳು. ಹಾಲಿನ ಡೈರಿಯವರನ್ನು ಪತ್ರಿಕೆಯವರು ಎಷ್ಟು ಕಟುವಾಗಿ ಟೀಕಿಸುತ್ತಿದ್ದರೆಂದರೆ ಬರಬರುತ್ತ ಹಾಲು ಲೇಟಾಗುವುದೇ ಅಪರೂಪವಾಯಿತು. ಆದರೆ ನನ್ನಲ್ಲಾದ ಬದಲಾವಣೆಗಳು ನನಗೇ ಗೊತ್ತಿಲ್ಲದೆ ಆಗಿದ್ದವು. ಮೂಗಿನಿಂದ ತೊಟ್ಟಿಕ್ಕುವ ತನಕ ವಿಸ್ಕಿ ಹೀರಿ ಸರಹೊತ್ತಿನಲ್ಲಿ ತಾರಾಡುತ್ತ ಸಫೀನಾದ ಮೆಟ್ಟಿಲು ಕುಟ್ಟಿ ಏರಿಬರುತ್ತಿದ್ದ ನಾನು, ಎರಡನೇ ಪೆಗ್ಗು ಮುಗಿಸುವ ಹೊತ್ತಿಗೆ 'ಛೀ, ಕುಡುಕ ಮನಸ್ಸೇ' ಎಂದು ಜೋಸೆಫೀನ್ ಬಯ್ದಂತಾಗಿ ಸರ್ರನೆ ಊಟ ಮುಗಿಸಿ ಎದ್ದು ಬರುತ್ತೇನೆ. ಐದಕ್ಕೇ ಎಚ್ಚರವಾಗುತ್ತದೆ. ಸ್ನಾನ, ಶೇವ್ ಎರಡೂ ಮುಗಿಸಿದರೂ ಆರೂ ಹತ್ತಾಗುವುದು ಅಷ್ಟು ಸುಲಭವಲ್ಲ ಎನ್ನಿಸಿದಾಗ ಬನೀನು ಕಳಚಿಟ್ಟು ಒಳಮನೆಯಲ್ಲಿ ದಿಕ್ಕು ತೋಚದವನಂತೆ ಉಠಾಬೈಸು, ದಂಡ ತೆಗೆಯುತ್ತೇನೆ. ಮೊಳಕಾಲು ಕಂಡ ಮೂರನೇ ತಿಂಗಳ ಕಡೆಯವಾರದ ಹೊತ್ತಿಗೆ ಅಕಸ್ಮಾತ್ತಾಗಿ ಕನ್ನಡಿಯಲ್ಲಿ ನನಗೆ ನಾನೇ ಕಾಣಿಸಿ, ವಾಹ್ ಬೆಳಗೆರೆ! ಏನಯ್ಯಾ ನಿನ್ ಬಾಡೀ.... ಒಳ್ಳೇ ಸ್ಟೀಲು ಕಣೋ? ಎಂದು ಒಳಗೇ ಹೇಳಿಕೊಂಡು ಖುಷಿಪಡುತ್ತೇನೆ.

ಏನಿದು ರವೀ, ನಿನ್ನಿಂದ ಪತ್ರಗಳು ಇಷ್ಟೊಂದು ಕರಾರುವಾಕ್ಕಾಗಿ ಬರುತ್ತಿವೆ! ಎಂದು ಚನ್ನಣ್ಣ ಬರೆಯುತ್ತಾನೆ. ಒಪ್ಪಿಕೊಂಡ ಅಕಾಡೆಮಿಯ ಕೆಲಸ ಅಂದುಕೊಂಡದ್ದಕ್ಕಿಂತ ಮೊದಲೇ ಮುಗಿಸಿದ್ದಕ್ಕೆ ಧನ್ಯವಾದಗಳು ಅಂತ ರಾಮಚಂದ್ರಪ್ಪ ಸರ್ಕಾರಿ ಶೈಲಿಯಲ್ಲಿ ಬರೆಯುತ್ತಾರೆ. ಚಂದಾ ಮುಟ್ಟಿಸಿದ್ದಕ್ಕೆ ಚಂಪಾ ಆನಂದ ತುಂದಿಲರಾಗಿದ್ದಾರೆ. ಏನ್ಸಾರ್ ನೀವು ಇಂಗಾಗಿಬಿಟ್ರಿ? ಎಂದು ಮಿತ್ರ ವಡ್ಡು ಖುಷಿಯಿಂದ ಕಣ್ಣರಳಿಸುತ್ತಾನೆ. 'ಯು ಆರ್ ಬಿಕಮಿಂಗ್ ಡೇಂಜರಸ್ಲಿ ಸ್ಲಿಮ್ ಅಂಡ್ ಸ್ಮಾರ್ಟ್' ಗೆಳೆಯ ಸತ್ತೂರ್ ಪ್ರಕಟಿಸುತ್ತಾರೆ.

ಎಲ್ಲ ಜೋಸೆಫೀನ್‌ಳ ಕೃಪೆ!

ಆರೂ ಹತ್ತರ ಮಹಾತ್ಮೆ. ಐದಕ್ಕೆ ಎದ್ದವನು ಆರೂ ಹತ್ತರ ತನಕ ಏನು ಮಾಡಬೇಕು? ಆರೂ ಹತ್ತರಿಂದ ಆಫೀಸಿಗೆ ಹೊರಡುವ ಒಂಬತ್ತೂ ಐವತ್ತರವರೆಗಾದರೂ ಏನು ಮಾಡಬೇಕು? ವಾಕಿಂಗು, ಎಕ್ಸರ್‌ಸೈಜು, ಕಡಿಮೆ ಗುಂಡು, ಜಾಸ್ತಿ ಬರವಣಿಗೆ! ಮನೆಯ ತುಂಬ ಕತೆಗಳ ಸ್ಕ್ರಿಪ್ಟುಗಳೇ... ಗೆಳೆಯರ ಪತ್ರಗಳೇ! ಕಣ್ಣ ಕೊಳದಲ್ಲಿ ಮಾತ್ರ ಕದಲುವುದು

ಅವಳೊಬ್ಬಳೇ.

ಹೀಗೇ ಆರು ತಿಂಗಳು ಕಳೆದು ಹೋದವು ನೋಡಿ. ಒಂದು ಜಿಲ್ಲಾಮಟ್ಟದ ಬಂಡಾಯ ಸಮ್ಮೇಳನ, ನೋಡನೋಡುತ್ತಿರುವಂತೆಯೇ ಇಬ್ಬರು ಕತೆಗಾರರ ಪ್ರೇಮ ಪ್ರಕರಣ, ಇಬ್ಬರು ಕವಿಗಳ ಪತ್ರ ಹಗರಣ ಮತ್ತು ಇದ್ದೊಬ್ಬ ಸುಂದರಿ ಸಹೋದ್ಯೋಗಿ ಹುಡುಗಿಯ ಮದುವೆ ಕೂಡ ಮುಗಿದು ಹೋಯಿತಾದರೂ ಜೋಸೆಫೀನ್‌ಳ ಪರಿಚಯ ನಗೆಗಿಂತ ಮುಂದಕ್ಕೆ ನೆಗೆಯಲೇ ಇಲ್ಲ. ಮತ್ತೆ ಏಸುವಿನ ಮೊರೆ ಹೋದೆ.

ಹೇ ಬೆತ್ಲೆಹ್ಯಾಮಿನ ಕರುಣೆಯೇ, ಅವಳ ಮೊಳಕಾಲ ನುಣುಪನ್ನು ನನ್ನ ಈ ನಿರುಪದ್ರವ ಕಾರಿ ತೋರು ಬೆರಳಿನ ಮೊನೆಗೆ ಒಮ್ಮೆಯಾದರೂ ತಾಕಿ ಆನಂದಿಸುವ ಭಾಗ್ಯ ಒದಗಿಸು. ಒಂದು ಮೊಳಕಾಲು ಸಾಕು. ಇನ್ನೊಂದನ್ನು ಅವಳೇ ಚಾಚಿಯಾಳು. (ಈ ಕರಾರು ಒಂದು ಕೆನ್ನೆಗೆ ಹೊಡೆದರೆ ಮತ್ತೊಂದು ಕೆನ್ನೆ ನೀಡೆಂಬ ನಿನ್ನ ಆಜ್ಞೆಗೆ ಪೂರಕವಾಗೇ ಇರುತ್ತದೆ) ಕೇವಲ ಸಿಂಧಿಗಳು, ಫಾರಸಿಗಳು ಮತ್ತು ಒಬ್ಬೇ ಒಬ್ಬ ಕ್ರೈಸ್ತಳು ಇರುವ ಈ ಅಪಾರ್ಟ್‌ಮೆಂಟಿನಲ್ಲಿ ಕನ್ನಡದ ಖ್ಯಾತ ಕತೆಗಾರನೊಬ್ಬ ಮನೆಯ ಮುಂದೆ ನೇಂ ಪ್ಲೇಟೂ ಹಾಕಿಕೊಳ್ಳದೆ ಶ್ರೀಲಂಕಾ ನಿರಾಶ್ರಿತನಂತೆ ಬದುಕುತ್ತಿರುವಾಗ ಆ ಬಾಲಕಿ ನನ್ನೊಡನೆ ನಾಲ್ಕು ಮಾತಾದರೂ ಆಡುವಂತಹ ಸೀಕ್ವೆನ್ಸು ಉಂಟು ಮಾಡು. ಆಮೆನ್!

ಈ ಬಾರಿಯೂ ಕೇಳಿಸಿಕೊಂಡ ಏಸು.

'ಹಲೋ!' ಅಂದಳು ಜೋಸೆಫೀನ್.

ಖಿಪ್ಪೋ ಎಂದು ಆನಂದ ತುಂಬಿಬಂದು ಕೆಮ್ಮಿಬಿಟ್ಟೆ.

'ನೀವು.... ನೀವೇನಾ?' ಅಂತ ಕೇಳಿದಳು.

'ನಾನೇ.....' ಅಂದೆ.

'ಕತೆ ಬರೀತೀರಂತೆ?' ಅಂದಳು.

'ಸುಮ್ನೆ....ಅಷ್ಟೆ....' ಎಂದು ಪೇಲವವಾಗಿ ನಕ್ಕು ಮತ್ತೆ ಕೆಮ್ಮಿದೆ...ಖಿಪ್ಪೋ...

'ನನ್ನ ಜೊತೆಗೆ ಕೆಲಸಮಾಡೋ ಹುಡುಗಿ ಹೇಳಿದಳು. ಚೆನ್ನಾಗಿ ಬರೀತೀರಂತೆ. ಪಾಪುಲರ್‌ರಾಗಿದೀರಿ ನೀವು. ಅವಳು ನಿಮ್ಮ ಫ್ಯಾನ್' ಅಂದುಬಿಟ್ಟಳು ಜೋಸೆಫೀನ್.

ಯಾರಿಗುಂಟು ಯಾರಿಗಿಲ್ಲ? ನಿವ್ವಾಳಿಸಿ ಒಗೆಯಬೇಕು ಮಹಾದೇವನಿಗೆ ಬಂದ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯನ್ನ. ಇಂಥ ಭಾಗ್ಯ ಯಾರಿಗಿದೆ? ನನ್ನ ಒಂದೇ ಒಂದು ಕತೆಯನ್ನೂ ಓದದ ಒಬ್ಬ ಸುಂದರ ಕ್ರೈಸ್ತ ಯುವತಿ, ತನ್ನ ಗೆಳತಿಯೊಬ್ಬಳು ನನ್ನ ಫ್ಯಾನು ಅಂದ ಮಾತ್ರಕ್ಕೆ ನೇರವಾಗಿ ನನ್ನ ಮನೆಯ ಬಾಗಿಲಿಗೇ ಬಂದು ಬಾಯಾರೆ (ಮನಸಾರೆ ಅಂದ ಹಾಗೆ) ಮಾತಾಡಿಸಿ ಹೋದದ್ದು ಇಡೀ ಕನ್ನಡ ಸಾಹಿತ್ಯ ಲೋಕದಲ್ಲೇ ಅಪೂರ್ವ ಘಟನೆ. ಅಲ್ವೆ? ಈ ಮಾತು ಹನುಮಂತಯ್ಯನಿಗೆ ಬರೆದಾಗ ಅವನು ನನ್ನ ಐಡಿಯಾಲಜಿ ಹಳಸುತ್ತಿರುವ ಅನುಮಾನ ವ್ಯಕ್ತಪಡಿಸಿ ವಿಷಾದವನ್ನೂ ಸೂಚಿಸಿದ್ದ!

ಇಷ್ಟಕ್ಕೂ ಅವಳಿಗೆ ನಾನ್ಯಾರೆಂಬುದು ಗೊತ್ತಾದದ್ದು ಪೋಸ್ಟ್‌ಮನ್ ನಾನಿಲ್ಲದಾಗ ಬಂದು ಬರೆದಿಟ್ಟು ಹೋದ ಚೀಟಿಯನ್ನು ನೋಡಿ - ಎಂದು ಮಾರನೆಯ ದಿನ ತಿಳಿಯಿತು.

'ಮಿಸ್ಟರ್ ಗೆರೆ....' ಅಂದಳು ಜೋಸೆಫೀನ್.

'ಬೆಳಗೆರೆ' ಅಂದೆ

'ಸರಿ ಸರಿ, ನಿಮ್ಮದ್ಯಾವುದಾದ್ರೂ ಹೊಸ ಕಾದಂಬರಿ ಬಂದಿದ್ರೆ ಕೊಡಬೇಕಂತೆ. ನನ್ ಫ್ರೆಂಡು, ಕೇಳ್ತಾ ಇದ್ಲು. ನಿಮ್ಮ ಫ್ಯಾನ್ ಅಂದಿದ್ನಲ್ಲಾ?' ಅಂದಳು ಜೋಸೆಫೀನ್.

'ಒಳಗೆ ಬನ್ನಿ' ಕರೆದೆ. ಬಂದೇ ಬಿಟ್ಟಳು. 'ಕೂಡಿ' ಅಂದೆ. ಕೂತೂ ಬಿಟ್ಟಳು. ಹಾಗೆ ಕುಳಿತಾಗ ಕಡುಗುಲಾಬಿ ಸ್ಕರ್ಟಿನ ಫ್ರಿಲ್ಲುಗಳು ಚೆಲ್ಲಾಪಿಲ್ಲಿಯಾಗಿ ಆ ಮೊಳಕಾಲುಗಳು ಅರುಂಧತೀ ನಕ್ಷತ್ರಗಳಂತೆ ಹೊಳೆಯುತ್ತಿದ್ದರೆ ನಾನು ಖಿಪ್ ಖಿಪ್ ಎಂದು ಕೆಮ್ಮುತ್ತ ಮನೆಯೆಲ್ಲ

**ಕವಿ**

*ಮೂಕಿಯ ಬಾಯಿ ಬಂದು ಮಾಡಿ*
*ಎದೆಗೆ ಯಾರು ಹಾಕಿದ್ದಾರೆ ಬೀಗ?*
*ಆಕೆಯ ಬಾಯಿಬಿಚ್ಚಿ ಎದೆಯ ಬೀಗತೆಗೆದು*
*ಮಾತಾಡಿಸುವ ಕವಿ ಬೇಕಾಗಿದ್ದಾನೆ ಈಗ*

*● ಚೆನ್ನಣ್ಣ ವಾಲೀಕಾರ*

ಓಡಾಡಿ ಬಿಟ್ಟೆ. ಕಾದಂಬರಿ ಪ್ರಿಂಟಿಗೆ ಹೋಗಿದೆ. ಬಂದ ತಕ್ಷಣ ಕೊಡ್ತೀನಿ ಅಂದೆ. ಕಾಫಿ ಮಾಡಿಕೊಡಲು ಹಾಲಿಲ್ಲ ಅಂದೆ. ಮತ್ತೇನೋ ಮಾತಾಡಲು ಸಿದ್ಧನಾಗುವಷ್ಟರಲ್ಲೇ ಹಾಲಿನ ಹುಡುಗ ಬಂದು ಬಿಟ್ಟ.

'ಲೆಟ್ಸ್ ಮೀಟ್' ಎದ್ದು ಹೋಗೇ ಬಿಟ್ಟಳು ಜೋಸೆಫೀನ್.

ಮತ್ತೆ ಬರಲೇ ಇಲ್ಲ. ಹಾಲಿಗೆ ಬಂದಾಗ ಮಾತ್ರ ಅದೇ ತಿಳಿನಗೆ. ಹಾಲಿಗೆ ಬಂದವಳು ಮನೆಗೆ ಬರಲಾರಳೇ? ಎಂಬ ನನ್ನ ಹಿಂದೂಗಾದೆ ಸುಳ್ಳಾಯಿತು. ಪ್ರಿಂಟಾಗಿ ಬಂದ ಕಾದಂಬರಿ ಒಯ್ದು ಕಾರಿಡಾರಿನಲ್ಲೇ ಕೊಟ್ಟೆ.

'ಓಹ್.... ಷಿ ಈಸ್ -ಟ್ರಾನ್ಸ್‌ಫರ್ಡ್! ನಂಗೆ ಕಾದಂಬರಿ ಓದೋಕೆ ಬರಲ್ಲ. ಪ್ಲೀಸ್ ಡೋಂಟ್ ವೇಸ್ಟ್ ಇಟ್ ಮಿ. ಗೆರೆ....' ಅಂದಳು.

'ಬೆಳಗೆರೆ!' ಅಂದೆ.

'ಸಾರಿ' ಅಂದು ಹೋಗಿಬಿಟ್ಟಳು.

ಪುಸ್ತಕದಲ್ಲಿ ಮಡಚಿಟ್ಟಿದ್ದ ಎಂಟು ಅಕ್ಷರಗಳ ಪ್ರೇಮಪತ್ರ ಅಲ್ಲೇ ಉಳಿಯಿತು. ಇದ್ದೊಬ್ಬೇ ಫ್ಯಾನ್‌ಗೂ ವರ್ಗಾ ಮಾಡಿಸಿ ನನ್ನ ದೌರ್ಭಾಗ್ಯದ ಅಳತೆ ಮಾಡಿದ ಪಾತಕಿ ಏಸುವನ್ನು ಬಯ್ದುಕೊಂಡು ಸುಮ್ಮನಾದೆ.

ನನ್ನ ಮುಂಜಾವುಗಳು ಮಂಕಾದವು. ಐದಕ್ಕೇ ಎದ್ದು ಕೂತು ಕಠೋಪನಿಷತ್ತು ಓದತೊಡಗಿದೆ. ಥೇಟ್ ಬ್ರಾಹ್ಮಣನಾಗ್ತಿದೀಯ ಅಂತ ದರ್ಗಾ ಗೇಲಿ ಮಾಡಿದ. ಖಿನ್ನನಾಗಿ ನಕ್ಕೆ. ಕೆಮ್ಮೂ ಬಾರದೆ ತೀರ ಒಬ್ಬಂಟಿಗನಾದೆ. ಆಗ ಬಂತು ಮಳೆಗಾಲ. ಆಕಾಶಕ್ಕೆ ಥಂಡಿ ಹತ್ತಿ ನೆಗಡಿಯೋ ನೆಗಡಿ. ನನಗೋ, ಮೋಡದ ತುಣುಕು ಕಂಡರೆ ಸಾಕು, ಮನಸ್ಸು ಬಾಣಂತಿಯಾಗಿಬಿಡುತ್ತದೆ. ಇಂಥದೇ ಒಂದು ಮಳೆಗಾಲದಲ್ಲಿ ಸತ್ತ ಅಮ್ಮನ ನೆನಪಾಗಿಬಿಟ್ಟು ಮಂಕಾಗುತ್ತೇನೆ. ಹಾಲು ತಡವಾದಾಗ ಜೋಸೆಫೀನ್ ತನ್ನ ಅಂತಸ್ತಿನಲ್ಲೇ ನಿಂತು ಅವನಿಗಾಗಿ ಕಾಯುತ್ತಾಳೆ. ಇಳಿದು ನನ್ನ ವರಾಂಡಕ್ಕೆ ಬರುವುದಿಲ್ಲ. ಏರುವ ಸೂರ್ಯನಿಗೆ ಮೋಡದ ಪರದೆ ಬಿದ್ದಿರುವಾಗ ನೋಡಲು ಅವಳಿಗಾದರೂ ಏನಿದೆ? ಮಾತಂತೂ ದೂರ ಉಳಿಯಿತು. ಅಪರೂಪಕ್ಕೊಂದು ಮುಗುಳ್ನಗೆ - ಅಷ್ಟೆ. .

ಹೀಗೆ ಒಂದು ಲಾವಣ್ಯವಂತವಾಗಬೇಕಿದ್ದ ನನ್ನ ಬದುಕು ಸಫೀನಾ ಅಪಾರ್ಟ್‌ಮೆಂಟಿನಲ್ಲಿ ಮುರುಟಿಕೊಳ್ಳುತ್ತಿದ್ದ ಆ ದುರ್ದಿನಗಳಲ್ಲಿ ಇದ್ದಕ್ಕಿದ್ದಂತೆ ಒಂದು ಘಟನೆ ನಡೆದು ಹೋಯಿತು. ಅದೊಂದು ಮಧ್ಯಾಹ್ನ ಆಫೀಸಿಗೆ ಫೋನು ಬಂತು. ಹಿಂದೆಯೇ ಬಂದವನು ಅಶೋಕ! ಬಹುಕಾಲದ ಮಿತ್ರ. ಆ ತಕ್ಷಣ ಎದ್ದು ತಬ್ಬಿಕೊಂಡು ಆನಂದ ಬಾಷ್ಪವುಂಟಾಗಿ ತಕ್ಷಣವೇ ಎಲ್ಲಾದರೂ ಹೋಗಿ ಅರವತ್ತು ಮಿಲಿಲೀಟರು ವಿಸ್ಕಿ ಕುಡಿಯಬೇಕೆಂಬಷ್ಟು ತೀವ್ರತೆಯುಂಟಾಗಿತ್ತು.

''ವಲ್ಲೆ! ಈಗ ಬ್ಯಾಡ. ಸಂಜೀ ಮುಂದ ಕೂಡೂಣು'' ಅಂದ ಅಶೋಕ. ಸರಿ ಅಂದೆ.

ಅಷ್ಟೇ ಅಂದು ಸುಮ್ಮನಾಗಿದ್ದರೆ ಸರಿಯಿತ್ತು. ಅದೇನು ತೋಚಿತೋ ಏನೋ ಫೋನೆತ್ತಿಕೊಂಡು ಯುರೇಕಾ ಫೋರ್ಬ್ಸ್‌ನ ನಂಬರು ತಿರುವಿ.

'ವಿಲ್‌ಯು ಪ್ಲೀಸ್ ಕಾಲ್ ಮಿಸ್ ಜೋಸೆಫೀನ್?' ಅಂದು ಬಿಟ್ಟೆ.

'ಸ್ಪೀಕಿಂಗ್!' ಅಂದಳು.

''ನಾನು ಬೆಳಗೆರೆ.... ಇವತ್ತು ರಾತ್ರಿ ನನ್ನ ಮನೇಲಿ ಒಂದು ಪಾರ್ಟಿ ಇಟ್ಕೊಂಡಿದೀನಿ. ನನ್ನ

ರೈಟರ್ ಫ್ರೆಂಡ್ ಬಂದಿದಾರೆ. ಅಶೋಕ್ ಅಂತ. ಗುಡ್ ಪೊಯೆಟ್. ನೀವು ನಮ್ಜೊತೆ ಜಾಯಿನ್ ಆದ್ರೆ, ತುಂಬ ಸಂತೋಷವಾಗುತ್ತೆ....'' ಎಷ್ಟೊಂದು ನಿರರ್ಗಳವಾಗಿ, ಧೈರ್ಯವಾಗಿ ಮಾತಾಡಿಬಿಟ್ಟೆ ಅಂದ್ರೆ....!

''ಓಹ್ ಸರ್ಟನ್ಲಿ ಮಿ. ಗೆರೆ ಖಂಡಿತ ಬರ್ತೀನಿ. ಊಟಕ್ಕೇನು ಮಾಡ್ತೀರಿ? ಬೇಕಾದ್ರೆ ನನ್ನ ಮನೇಲಿ ಅಡುಗೆ ಮಾಡಿಕೊಂಡು ಬರ್ತೀನಿ. ಲೆಟ್ಸ್ ಹ್ಯಾವ್ ಎ ನೈಸ್ ಟೈಂ.....'' ಅಂದಳು ಜೋಸೆಫೀನ್. ಛೆ, ನಾನು ಆನಂದದಿಂದ ಎದ್ದು ನಿಂತುಬಿಟ್ಟೆ.

ಎರಡೇ ನಿಮಿಷದಲ್ಲಿ ಎಲ್ಲ ಕುದುರಿ ಹೋಯಿತು.. ನಮ್ಮ ಪಾರ್ಟಿಗಾಗಿ ಅವಳು ಅರ್ಧ ದಿನ ರಜೆ ಹಾಕೋದು. ಈ ತಕ್ಷಣ ಕಾರಿನಲ್ಲಿ ನನ್ನ ಜವಾನನ ಕೈಲಿ ಅಡುಗೆಗೆ ಬೇಕಾದ ಸಮಸ್ತವನ್ನೂ ಕಳಿಸೋದು. ಸಂಜೆ ಏಳರ ಹೊತ್ತಿಗೆ ನಾನು, ಅಶೋಕ ಮನೆಸೇರಿದರೆ ಸಾಕು. 'ಐಡೋಂಟ್ ಮೈಂಡ್ ಎ ಪಿಂಟ್ ಆಫ್ ಬಿಯರ್!' ಅಂತ ಕೂಡಹೇಳಿದ್ದಳು ಜೋಸೆಫೀನ್. ವಿಪರೀತ ಉಲ್ಲಸಿತನಾಗಿ ಜವಾನನನ್ನು ಕರೆದು ನೂರರ ನಾಲ್ಕು ನೋಟು ಹಿರಿದು ಕೊಟ್ಟೆ, ಜೊತೆಗೆ ಸಲಹೆಗಳು. ಅಚ್ಚರಿಯಿಂದ ನೋಡುತ್ತಿದ್ದ ಅಶೋಕ,

''ಏನೋ ನಡಿಸೀಯಲಾ.... ಹಗ್ಗ ತಿನ್ನೂ ಬಾಳಿ....'' ಅಂದ.

''ಇಲ್ಲ ದೋಸ್ತ, ಪ್ಯೂರ್ಲಿ ಪ್ಲೆಟಾನಿಕ್!'' ಅಂದೆ. 'ಸಾಯಿ' ಎಂಬಂತೆ ತಲೆಯಾಡಿಸಿ ಸುಮ್ಮನಾದ. ನಾನು ಸಂಜೆಯಾಗುವುದಕ್ಕಾಗಿ ಕಾಯುವುದರ ಹೊರತು ಮತ್ತೇನೂ ಮಾಡುವಂತಿರಲಿಲ್ಲ. ಬದುಕಿನ ಭಾಗ್ಯ ಬಾಗಿಲಾಗಿ ತೆರೆದುಕೊಳ್ಳುವುದಿದೆ. ಈ ಕೆಲಸ ಎಂಟು ತಿಂಗಳ ಮೊದಲೇ ಮಾಡಬಾರದಿತ್ತೇನೋ ಮಿ. ಗೆರೆ ಎಂಬ ನಿರುಪದ್ರವಿ ಕನ್ನಡ ಕತೆಗಾರನೇ? ಎಂದು ಮನಸ್ಸು ಮೂದಲಿಸುತ್ತಿತ್ತು. ಅರ್ಧ ಪೆಗ್ ವಿಸ್ಕಿಯ ನಂತರ ಅವಳಿಗೆ ಹೇಳಿಬಿಡ್ತೇನೆ. ಅದೇ ಎಂಟಕ್ಷರಗಳ ಮಾತು...ಐ ಲವ್ ಯು! ಅವಳ ಮೊಳಕಾಲ ಮೇಲಾಣೆ. ಬೇಡವೆನ್ನಲು ಅವಳಿಗೆ ಕಾರಣವೇ ಇಲ್ಲ. ಅಶೋಕನನ್ನು ವಿನಂತಿಸಿಕೊಂಡರೆ, ಅಷ್ಟು ಮಾತ್ರದ ಪೈಪೆಸಿ ಒದಗಿಸಿಕೊಟ್ಟು ಬಾಲ್ಕನಿಯಲ್ಲಿ ಹೋಗಿ ನಿಲ್ಲುತ್ತಾನೆ. ಜೀವದ ಗೆಳೆಯನಲ್ವೆ.

ಸಂಜೆ ಆರೂ ನಲವತ್ತು.

ಇನ್ನೇನು ಕಾರು ಹತ್ತಬೇಕು. ಆಗ ಬಂತೊಂದು ಜಿಪ್ಸಿ! ರಕ್ತಗೆಂಪು ಜಿಪ್ಸಿಯಲ್ಲಿ ಕೂತವನು, ಬಗ್ಗಿ ನೋಡಿದವನು ಮತ್ತು ನನ್ನನ್ನು ಗುರುತಿಸಿದವನೇ,

'ಲೇ ರವ್ಯಾ....' ಎಂದು ಕೂಗಿದ್ದು ಅಜಯ್!

ಅಜಯ್ ಕುಮಾರ್ ಪಾಟೀಲ! ಬಾಲ್ಯದ ಮಿತ್ರ. ಖಾಸಾ ದೋಸ್ತ. ಬಳ್ಳಾರಿಯವನು ಅದರಲ್ಲೂ ಧಣಿ. ಭಾರೀ ರೊಕ್ಕಸ್ತ. ನಾಚಿಕೆ ಬಿಟ್ಟು ಹೇಳಬೇಕೂಂದ್ರೆ, ನನ್ನ ಕಾಲೇಜು ದಿನಗಳ ಖರ್ಚು ಕಳೆದು, ಫೀಸಿಗೂ ಅಷ್ಟಿಷ್ಟು ಕಾಸು ಕೊಡುತ್ತಿದ್ದ ಸ್ನೇಹಿತ. ಈಗ ನನಗೂ ಕಾರಿದೆ. ಹುದ್ದೆಯಿದೆ. ಜೇಬು ತುಂಬ ಹಣವಿದೆ. ಆದರೆ ಜೋಸೆಫೀನ್‌ಳೊಂದಿಗೆ ಎದೆಯೊಡೆಯುವಷ್ಟು ಮಾತಾಡಬೇಕೆಂದು ಹೊರಟ ಘಳಿಗೆಯಲ್ಲಿ, ಅಜಯ್‌ನನ್ನು ಆ ಕ್ಷಣದಲ್ಲಿ ಕಂಡು ನಿರ್ವಿಣ್ಣನಾಗಿ ಹೋದೆ. ತಪ್ಪಿಸಿಕೊಳ್ಳುವ ಮಾತೇ ಇಲ್ಲ.

ಕಾರಿಳಿದು ಬಂದವನೇ ತೆಕ್ಕೆ ಬಡಿದು ತುಂಬು ಪ್ರೀತಿಯಿಂದ ಕೇಳಿದ,

''ಎಂಗದೀಯಲೆ? ಬೇಸು ಕೆಂಪಗಾಗೀ ನೋಡು. ನಡಿ ನಡಿ, ಕುಡ್ಯಾನ!'' ಬಳ್ಳಾರಿಗರ ಮಾತಿನ ಆರಂಭವೇ ಕುಡಿತದಿಂದಾಗುತ್ತದೆ. ಅದು ನನಗೂ ರೂಢಿ. ಆದರೆ ಅವತ್ತು?

''ಇವರ್ಯಾರು?'' ಕೆನ್ನೆಗೆ ಹೊಡೆದವನಂತೆ ಕೇಳಿದ.

''ಅಶೋಕ ಅಂತ. ನನ್ನ ಫ್ರೆಂಡು'' ಅಂದೆ.

''ಏನ್ಮಾಡ್ತೀರಿ?'' ಅಶೋಕನನ್ನೇ ಕೇಳಿದ.

''ಕವಿಗಳು. ಚೆನ್ನಾಗಿ ಪದ್ಯ ಬರೀತಾರೆ''

## ರವಿ-ಕವಿ

*ರವಿ ಕಾಣದ್ದನ್ನು*
*ಕವಿ ಕಂಡಿರಬಹುದು*
*ಭಾವದಲ್ಲಿ*
*ಕಾಣದ ರವಿಯ*
*ಕವಿಯಾದವರುಂಟೆ*
*ಲೋಕದಲ್ಲಿ?*

● *ಹಾ. ಉ. ಸೊರಬ*

ನಾನು ಉತ್ತರಿಸಿದೆ.

''ಅದಾಯ್ತಲೇ... ಹೊಟ್ಟೆಗೆ?'' ಝಾಡಿಸಿ ಒದ್ದವನಂತೆ ಕೇಳಿಯೇ ಬಿಟ್ಟ. ಉತ್ತರ ಸಿಗುವುದರೊಳಗಾಗಿಯೇ, ''ನಡಿ ನಡಿ, ಷಿವ್ಯಾಸ್ ರೀಗಲ್ ತಂದೀನಿ. ಒಂದೂವರೆ ಸಾವ್ರ ಬಾಟ್ಲಿಗೆ. ಎಲ್ಲನ್ನ ಕುಂದ್ರಾಮು. ನೀವೂ ಬರ್ರೀ... ಕವಿ!'' ಅಂದು ಅವಸರಿಸತೊಡಗಿದ. ಖಂಡಿತವಾಗ್ಯೂ ಅಜಯ್‌ನ ಹುಂಬ ಮಾತು, ನಡವಳಿಕೆ ಅಶೋಕ ಸಹಿಸಲಾರ. ಇನ್ನು ಅವಳೇನು ಸಹಿಸಿಯಾಳು? ಆದರೆ ಈ ಪುಣ್ಯಾತ್ಮನಿಂದ ತಪ್ಪಿಸಿಕೊಳ್ಳುವಂತೆಯೂ ಇಲ್ಲ! ಪಾರ್ಟಿ ರದ್ದು ಮಾಡಿದರೆ ಮುಗಿದೇ ಹೋಯ್ತು. ಬೇರೆ ದಾರಿ ಕಾಣಲಿಲ್ಲ.

'ಅಜಯ್, ನನ್ ಕಾರು ಫಾಲೋ ಮಾಡು' ಅಂದವನೇ ಅಶೋಕನನ್ನು ಹತ್ತಿಸಿಕೊಂಡು ಹೊರಟು ಬಿಟ್ಟೆ. ಭಾರೀ ವಿಚಿತ್ರವಾಗಿದಾನೆ ನಿನ್ನ ಮಿತ್ರ. ಕೆಟ್ಟ ಹುಂಬ ಅನಿಸ್ತದೆ. ಆದ್ರೆ ಇಂಥೋರ ಮನಸ್ಸು ಒಳ್ಳೇದಿರುತ್ತದೆ... ಅಂತ ಅಶೋಕ ಮಾತನಾಡತೊಡಗಿದ್ದ. ನನಗೆ ಆ ಸಂಜೆ ನಡೆಯಬಹುದಾದ ಆಭಾಸಗಳ ಬಗ್ಗೆ ಭಯವು ಹದ್ದಾಗಿ ರೆಕ್ಕೆಗೆದರುತ್ತಿತ್ತು. ಅಜಯ್ ಲೀಟರುಗಟ್ಟಲೆ ಕುಡಿಯುತ್ತಾನೆ. ಬಾಯಿ ಬಿಟ್ಟರೆ ಬಳ್ಳಾರಿಯ ಸ್ಲಮ್ಮೇ ಮಾತಾಗಿ ಜಾರುತ್ತದೆ. ಜೋಸೆಫೀನ್‌ಳಂಥ ಸಭ್ಯ ಸುಂದರಿಯ ಮುಂದೆ.... ಏಸುವೇ ರಕ್ಷಿಸು! ಅಂದುಕೊಂಡೆ.

ನನ್ನ ಡಿಕ್ಕಿಯ ಹಿಂದೇ ಬಂದು ನಿಂತಿತು ಜಿಪ್ಸಿ. ಅದರೊಳಗಿನಿಂದಿಳಿದ ಅಜಯ್‌ನನ್ನು ದಿಟ್ಟಿಸಿದೆ. ಬಟ್ಟೆ ಮತ್ತು ಬೂಟುಗಳ ಹೊರತಾಗಿ ಮೈಮೇಲಿದ್ದುದೆಲ್ಲ ಬಂಗಾರವೇ! ಚೈನು, ಉಂಗುರಗಳು, ವಾಚಿನ ಪಟ್ಟಿ, ಲ್ಯಾಕೆಟ್ಟು, ಮುಂಗೈಗೊಂದು ಚೈನು....ಕಡೆಗೆ ಅಂಗಿಯ ಗುಂಡಿಗಳಿಗೂ ಹಳದಿ ಲೋಹ. ಅವನ ಕಂಗಳಲ್ಲಿ ನನ್ನೆಡೆಗಿನ ಅದಮ್ಯ ಹುಂಬ ಪ್ರೀತಿಯ ಆತ್ಮೀಯ ನಗೆ! ಪರಿಚಯವಾದ ಐದು ನಿಮಿಷಗಳ ನಂತರ ಯಾವ ಬಳ್ಳಾರಿಗನೂ ಯಾರೊಂದಿಗೂ ಬಹುವಚನದಲ್ಲಿ ಮಾತಾಡಲಾರ!

'ನೀನು ತಗಂಬ್ತಿಯಲ್ಲಪಾ ಕವೀ... ಡ್ರಿಂಕ್ಸು?' ಎಂದು ಅಶೋಕನ ಹೆಗಲಿಗೆ ಕೈ ಹಾಕಿ ಅಪಾರ್ಟ್‌ಮೆಂಟಿನ ಮೆಟ್ಟಿಲು ಕದಲುವಷ್ಟು ಜೋರಾಗಿ ಮಾತಾಡುತ್ತ, ನಗುತ್ತ ಹತ್ತಿ ಬಂದ ಅಜಯ್. ನಾನು ಕಳಿಸಿದ ಜವಾನನಿನ್ನೂ ಅಲ್ಲೇ ಇದ್ದ. ಎಲ್ಲ ವ್ಯವಸ್ಥೆ ಸರಿಯಾಗಿ ಮಾಡಿದ್ದೇನೆ ಅಂದ. ಅವನ ಕೈಗೆ ನೂರರ ನೋಟು ತುರುಕಿ 'ಇಟ್ಕಾ!' ಅಂದ ಅಜಯ್. ನಾನು ಪೆಚ್ಚಾದೆ. ನನ್ನ ಮನೆಯಲ್ಲಿ ಒಂದು ಸುತ್ತು ಓಡಾಡಿ ಬಂದವನೇ,

''ಬೇಸೈತೆ ಮನೆ. ಇವಾಗನ್ನ ಲಗ್ನ ಮಾಡಿಕ್ಯಳಲೇ ಮುದುಕಾಗೀದೀ....'' ಅಂದ. ನಕ್ಕೆ. ಅಶೋಕನೂ ನಕ್ಕ. ಆಗ ಬಂದಳು ಜೋಸೆಫೀನ್!

ರೆಕಾರ್ಡರಿನ ಬಾಯಿಗೆ ಮೈಕೆಲ್ ಜಾಕ್ಸನ್ ಕ್ಯಾಸೆಟ್ ತುರುಕಿದಳು. ಗೆಳೆಯರನ್ನು ಪರಿಚಯಿಸಿದೆ.

''ಇಂಗ್ಲೀಸಾ?'' ಕೇಳಿದ ಅಜಯ್.

''ಕನಡಾನೂ ಬರುತ್ತೆ'' ನಕ್ಕಳು ಜೋಸೆಫೀನ್.

ಮಾತು ಶುರುವಾದವು. ಜವಾನ ಎಲ್ಲ ಜೋಡಿಸಿಟ್ಟ. ಸುಧೆಯಾಗಿ ಹರಿಯಿತು ವಿಸ್ಕಿ. ಬಿಯರ್ ಸಾಕೆಂದಳು ಜೋಸೆಫೀನ್. ನಾನವಳ ಮೊಳಕಾಲನ್ನೇ ನೋಡುತ್ತ ಕೂತುಬಿಟ್ಟೆ.

**ಸಮುದ್ರ**

*ಕ್ಷಣಕ್ಷಣಕೆ ಸಮುದ್ರ ಗಾಳಿಯಿಂದ*
*ಮೇಲೆದ್ದು*
*ಬಂದು ದಡಕ್ಕೆ ಅಪ್ಪಳಿಸುವ ದೃಶ್ಯ*
*ಕಣ್ಣಿಗೂ ಸೊಗಸಾಗಿ ಕಾಣುವುದು*
*ಬಾಳಿಗೂ ಕಂಡಾಗ ಬದುಕು ಸಮೃದ್ಧಿ*
*ಯಾಗುವುದು*

● *ಚೆನ್ನಣ್ಣ ವಾಲೀಕಾರ*

ಅದೇಕೋ ಎರಡು ಪೆಗ್ ವಿಸ್ಕಿ ಬಿದ್ದರೂ ಆತ್ಮವು ಹಾಡಾಗಿ ಅರಳಲಿಲ್ಲ. ಜೋಸೆಫೀನ್‌ಳಲ್ಲಿ ಪ್ರೇಮ ಬಿಚ್ಚಿಕೊಂಡೇನೆಂಬ ಧೈರ್ಯ ಉಬುಕಿ ಹೊರಬೀಳಲಿಲ್ಲ. ಅಶೋಕ ಮೊದಲ ಸುತ್ತಿಗೇ ತೇಲತೊಡಗಿದ. ಅವನೂ ಅಂಥ ಮಾತಿನವನಲ್ಲ. ನಾನು ಹೇಳುವುದಕ್ಕೆ ಮೊದಲೇ ಗ್ಲಾಸು ಕೈಲಿ ಹಿಡಿದು ನಿಧಾನವಾಗಿ ನಡೆಯುತ್ತ ಹೋಗಿ ಬಾಲ್ಕನಿಯಲ್ಲಿ ನಿಂತ. ಅದೇನು ಒಳ್ಳೆಯ ಬುದ್ಧಿ ಬಂತೋ, ಅಜಯ್ ಕೂಡ ಹೋಗಿ ಅವನ ಪಕ್ಕಕ್ಕೆ ನಿಂತ. ಜೋಸೆಫೀನ್ ಕ್ಯಾಸೆಟ್ಟು ಬದಲಿಸಿದಳು.

''ನಿಮ್ಮನೇಲಿ ಮಿರ್ಜಾ ಗಾಲಿಬನ ಗಜಲುಗಳ ಒಳ್ಳೆ ಕಲೆಕ್ಷನ್ನಿದೆ. ಐ ಲವ್ ಟು ಲಿಸನ್'' ಅಂದವಳೇ ಗಜಲಿನ ಮೊರೆತಕ್ಕೆ ಕಿವಿದೆರೆದಳು.

ಇಲ್ಲ, ಎಂಟಕ್ಷರದ ಮಾತು ನನ್ನೊಳಗಿನಿಂದ ಹೊರಡಲೇ ಇಲ್ಲ. ಅವಳ ಮೊಳಕಾಲಿಗೆ ನನ್ನ ಕಿರುಬೆರಳು ನೀರೊಳಗಿನ ಕಮಲದ ಬಳ್ಳಿಯಂತೆ ಕದಲಿ ಬಂದು ತಾಕಲೇ ಇಲ್ಲ. ಹಜಾರೋ ಖಾಯಿಷೇ ಐಸೀ... ಕೆ ಹರ್ ಖಾಯಿಷ್ ಪೇ ದಮ್ ನಿಕಲೇ.... ಅಂತ ಜಗಜಿತ್ ದನಿಯೆತ್ತಿ ಹಾಡುತ್ತಿದ್ದರೂ ಅದು ನನ್ನ ಗಾಢ ಪ್ರೇಮದ ಅನಾವರಣವಾಗಲು ನೆರವಾಗಲೇ ಇಲ್ಲ.

''ಮಿಸ್ಟರ್ ಗೆರೆ.... ಯಾಕೆ ಮಂಕಾಗಿದೀರಿ. ನೀವೇನೋ ಹೇಳಬೇಕು ಅಂದ್ಕೋತಿದೀರಿ... ಆದ್ರೆ ಹೇಳ್ತಾ ಇಲ್ಲ... ಯಾಕೆ?'' ಅವಳಾಗೇ ಕೇಳಿ ಬಿಟ್ಟಳು ಜೋಸೆಫೀನ್. ಎದೆಯ ಕಂದರದೊಳಗಿಂದ ಎದ್ದು ಬಂದ ಕೆಮ್ಮು ಖವ್ ಎಂದು ಸದ್ದು ಮಾಡಿ ಸತ್ತು ಹೋಯಿತು. ಇಲ್ಲ, ಹೇಳಲಾಗಲಿಲ್ಲ.

ಆನಂತರ ನಡೆದದ್ದಕ್ಕೆ ದೇವರಲ್ಲ, ಸ್ವತಃ ನಾನೇ ಕ್ಷಮೆ ಕೊಟ್ಟುಕೊಳ್ಳಲಾರೆ. ಅಶೋಕ ಊಟ ಮಾಡಿ ಹೊರಟು ಹೋದ. ಗಜಲು ಒಂದಾದ ಮೇಲೊಂದು ಮೊರೆದವು. ಅಜಯ್ ವಿಸ್ಕಿಯ ಬಟ್ಟಲು ತುಂಬಿ ತುಂಬಿ ಕುಡಿದ. ಜೋಸೆಫೀನ್‌ಳ ಪಕ್ಕದಲ್ಲೇ ಕೂತು ಕೊರೆದ. ಬಾರದ ಇಂಗ್ಲಿಷು, ಒರಟು ಕನ್ನಡ ಎರಡೂ ಸೇರಿಸಿ ನಡುರಾತ್ರಿಯ ತನಕ ಮಾತೇ ಮಾತಾದ. ಹನ್ನೆರಡೂವರೆ ಸುಮಾರಿಗೆ ನಡೆಯಬಾರದ್ದು ನಡೆಯಿತು.

ಜೋಸೆಫೀನಳ ಅಮೃತಶಿಲೆಯ ತಿರುವಿನಂತಹ ಸುಂದರ, ನುಣುಪು ಮೊಳಕಾಲ ಮೇಲೆ ತನ್ನ ಒರಟಾದ ಅಂಗೈಯನ್ನು ಯಾವುದೇ ಮುಲಾಜಿಲ್ಲದೆ ಇರಿಸಿ,

''ಯು ಆರ್ ಬ್ಯುಟಿಫುಲ್!'' ಅಂದೇ ಬಿಟ್ಟ.

ನಾನು ಕುಳಿತಲ್ಲೇ ಕಲ್ಲಾಗಿದ್ದೆ. ನಿಷ್ಕ್ರಿಯನಾಗಿದ್ದೆ.

''ಮಿ. ಗೆರೆ... ವಿಲ್ ಯು ಆಸ್ಕ್ ಯುವರ್ ಗೆಸ್ಟ್ ಟು ಬಿಹೇವ್....'' ಅನ್ನುವಷ್ಟರಲ್ಲಿ ಜೋಸೆಫೀನ್‌ಳ ಕೊರಳಸೆರೆಯುಬ್ಬಿ ಬಂದಿದ್ದವು. ಗಜಲು ಗಪ್ಪನೆ ಸುಮ್ಮನಾಯಿತು. ಅಜಯ್ ತೂರಾಡುತ್ತ ಎದ್ದು ಬಚ್ಚಲಿಗೆ ಹೋದ.

''ಐಯಾಮ್ ಸಾರಿ ಮಿಸ್ ಜೋಸೆಫೀನ್. ಇದೆಲ್ಲಾ ಹೀಗಾಗಿದ್ದು ನಂಗೆ....'' ಅಂತ ಮಾತಾಡುವ ಮೊದಲೇ ಸರ್ರನೆ ಮೇಲೆದ್ದು ಅವಳು 'ಗುಡ್‌ನೈಟ್' ಎಂದುಸಿರಿ ಒಂದೇ ಕ್ಷಣದಲ್ಲಿ ಮೆಟ್ಟಿಲುಗಳ ಮೇಲೆ ಸದ್ದಾಗಿ, ಹೊರಟೇ ಹೋದಳು.

★

ಅಜಯ್ ಸುಮ್ಮನೆ ಕುಳಿತಿದ್ದ. ಎಷ್ಟು ಬೈದರೇನು? ಮುಗಿದುಹೋಯಿತು. ಅವಳನ್ನು ತಿರುಗಿಯೂ ನೋಡುವುದಿಲ್ಲ. ನಗೆ, ಮಾತು, ನೇತ್ರ

ನಗಳು ಹಾಗಿರಲಿ. ಥೆ, ಎಂಟು ತಿಂಗಳಿಂದ ನಾನು ಹುಚ್ಚನಂತೆ ಆರಾಧಿಸಿದ ಆ ಮೊಳಕಾಲುಗಳನ್ನು ಅದೆಷ್ಟು ನಿರ್ದಯವಾಗಿ, ಅನಾಗರಿಕವಾಗಿ ಅದುಮಿದ್ದ ಅಜಯ್!

''ನನಿಗೆ ಮೊದಲೇ ಏಳಬಾರ್ದಿತ್ತೇನು? ಲವ್ ಮಾಡ್ತೀನಿ ಅಂತ... ನನಿಗೇನು ಗೊತ್ತು.... ಕುಡಿದಿದ್ದೆ.... ಅಂಗ ಮಾಡ್ದೆ. ಅದಕ್ಯಾಕೆ ಬೇಜಾರು ಮಾಡಿಕ್ಯಂತೀ? ಬಿಡು!'' ಅಂದವನೇ ಮೇಲೆದ್ದ. ತೀರ ಅವನು ಜಿಪ್ಪಿ ಹತ್ತುವಾಗ,

''ಅಜಯ್.... ಇನ್ನೊಂದ್ಸಲ ಈ ಕಡೆ ಬರಬ್ಯಾಡ!'' ಅಂದು ಬಿಟ್ಟೆ.

ಮನಸ್ಸು ಖಿನ್ನವಾಗಿತ್ತು. ಪ್ರಾಯಶ್ಚಿತ್ತವೆಂಬಂತೆ ಮನೆಯಲ್ಲಿದ್ದ ವಿಸ್ಕಿಯ ಸೀಸೆಗಳನ್ನೆಲ್ಲ ರಟ್ಟಿನ ಡಬ್ಬಿಯೊಳಗೆ ಹಾಕಿ ಎತ್ತಿಟ್ಟು ಬಿಟ್ಟೆ. ಆದರೆ ಆ ಆರೂ ಹತ್ತರ ಸುಂದರ ಕ್ಷಣಗಳು ಮತ್ತೆ ನನಗೆ ದಕ್ಕಲೇ ಇಲ್ಲ. ಈಗ ಜೋಸೆಫೀನ್ ಇಳಿದು ಬಂದರೆ ನನ್ನ ಬಾಗಿಲತ್ತ ತಿರುಗಿಯೂ ನೋಡುವದಿಲ್ಲ. ಹಾಲು ತಡವಾದರೆ ಮೇಲೇ ನಿಲ್ಲುತ್ತಾಳೆ. ಆಕಸ್ಮಿಕವಾಗಿ ಎದುರಾದರೂ ನಗೆಯಿಲ್ಲ. ಮಾತಿಲ್ಲ. ದಾಕ್ಷಿಣ್ಯಕ್ಕೊಂದು 'ಹಲೋ' ಕೂಡ ಇಲ್ಲ.

ಎರಡು ತಿಂಗಳು ಕಳೆಯುವುದರೊಳಗಾಗಿ ಹುಚ್ಚನಂತಾದೆ. ಫೋನು ತಿರುಗಿಸಿ 'ಹಲೋ' ಅಂದೆ. 'ಯಾರು?' ಕೇಳಿದಳು. 'ನಾನು!' ಅಂದೆ.

ಫೋನಿಟ್ಟುಬಿಟ್ಟಳು, ಥೆ!

ಎದೆಯಲ್ಲೆಲ್ಲ ಬೆಂಕಿ ಆಕಳಿಸಿದಂತಾಯಿತು. ಕಡೆಗೊಂದು ದಿನ ಸಫೀನಾ ಅಪಾರ್ಟ್‌ಮೆಂಟೇ ಬಿಟ್ಟು ಹೋಗಿ ಬಿಡುವ ನಿರ್ಧಾರ ತೆಗೆದುಕೊಂಡೆ. ಜವಾನನಿಗೆ ಬೇರೆ ಮನೆ ಹುಡುಕಲು ಹೇಳಿದೆ. ಅದಾದ ಮರುದಿನ ಕಡೆಯ ಘಟನೆ ನಡೆಯಿತು.

ಹಾಲು ಬರಲಿಲ್ಲ!

ಹೇಗಿದ್ದರೂ ಮನೆ ಬಿಡುವವನು, ಜೋಸೆ

### ಹೃದಯ ಹುತ್ತ

*ನಲ್ಲೆ*
*ನಿನ್ನ*
*ಗಲ್ಲದ ಬೆಲ್ಲಕ್ಕೆ*
*ನನ್ನ*
*ಹೃದಯಹುತ್ತದ ಇರುವೆ*

● *ಬಿ. ಜಿ. ಬನ್ನಿಕೊಪ್ಪ*

ಫೀನ್‌ಳ ನಗೆ ಕರುಣೆಗಾಗಿ ಕಾಯುವ ಹಂಗೂ ಇಲ್ಲ. ಕಟ್ಟ ಕಡೆಯ ಪ್ರಯತ್ನ. ನೇರವಾಗಿ ಅವಳ ಮನೆಗೇ ಹೋದೆ. ಹಾಲು ಕಡ ಕೇಳುವ ನೆವ. ಬಾಗಿಲ ಪಕ್ಕಕ್ಕಿದ್ದ ಬಜರ್ ಒತ್ತಿದೆ. ಇನ್ನೇನುಳಿದಿದೆ ಮುಲಾಜನಂತಹುದು? ಬಾಗಿಲು ತೆರೆಯುತ್ತಾಳೆ ಜೋಸೆಫೀನ್. ಹಾಲಿದೆಯಾ? ಅಂತೀನಿ. ಬಾಗಿಲ ತನಕ ಬಂದವನನ್ನು ಒಳಕ್ಕೆ ಕರೆಯದೆ ಇರಲಾರಳು. ಮತ್ತೊಮ್ಮೆ ಕ್ಷಮೆ ಕೇಳಿಬಿಡೋದು. ಆ ನಿಮಿಷದ ಧೈರ್ಯ ಹೇಗೋ ಏನೋ.... ಒದಗಿ ಬಂತೆಂದಾದರೆ ಹೇಳಿಯೇ ಬಿಡೋದು - ಎಂಟಕ್ಷರಗಳ ಅದೇ ಮಾತು. ಒಂದು ವರ್ಷದ ಕುದಿ ಹೊರಬಿದ್ದು ಬಿಡಲಿ. ಕಡೆಯದಾಗಿ, ನೋಡಿ-ಮನೆಬಿಟ್ಟು ಹೋಗ್ತಿದೀನಿ, ಅಂತೀನಿ. ಅವಳ ಕಣ್ಣಲ್ಲಿ ಸ್ನೇಹದ ಸಣ್ಣ ನಗೆಯಾದರೂ ಕಂಡರೆ - ಇವತ್ತಿಗೆ, ಈ ಜನ್ಮಕ್ಕೆ ಅಷ್ಟೇ ಸಾಕು.

ಬಜರ್ ಮತ್ತೆ ಒತ್ತಿದೆ.

ಬಾಗಿಲು ತೆರೆದುಕೊಂಡಿತು.

ಅಜಯ್ ಕುಮಾರ್ ಪಾಟೀಲ - ನಿಂತಿದ್ದ.

ಅವನ ಬೆನ್ನಿಗಾನಿಕೊಂಡು ಜೋಸೆಫೀನ್.

ಕಣ್ಣ ಬಣ್ಣದ ಸ್ಕರ್ಟು ಮೊಳಕಾಲು ಮುಚ್ಚಿತ್ತು.

ಕಣ್ಣಲ್ಲಿ ಬಣ್ಣಗಳೇ ಇರಲಿಲ್ಲ.

ದಡದಡನೆ ಮೆಟ್ಟಲಿಳಿದು ಬಂದು ಕಿಟಕಿ ಕೂಡ ಮುಚ್ಚಿ ಕುಳಿತು ಈ ಕತೆ ಬರೆದು ಮುಗಿಸಿದೆ. ನಾಳೆ ಮನೆ ಬಿಡಬೇಕು. ●

# ಗೂಡು ಕಟ್ಟುವ ಇಲಿಗಳು

● *ಬಿ. ವಾಸುದೇವ ವರ್ಣ*

ನೆಲದಲ್ಲಿ ಬಿಲ ತೋಡುವ ಇಲಿಗಳ ವಿಷಯ ಸಾಮಾನ್ಯವಾಗಿ ಎಲ್ಲರಿಗೂ ತಿಳಿದಿದೆ. ಮರದಲ್ಲಿ ಗೂಡುಕಟ್ಟಿ ವಾಸಿಸುವ ಇಲಿಗಳ ಬಗ್ಗೆ ಹೆಚ್ಚಿನವರು ತಿಳಿದಿರಲಾರರು. ಈ ಸಂಗತಿ ವಿಚಿತ್ರವಾದರೂ ಸತ್ಯ.

ಗೂಡು ಕಟ್ಟುವ ಈ ಇಲಿಗಳನ್ನು ''ವೃಕ್ಷ ಮೂಷಕ'' ಎಂದು ಕರೆಯುತ್ತಾರೆ. ಇದು ಇಲಿಗಳ ಜಾತಿಯಲ್ಲೇ ವಿಚಿತ್ರ ವರ್ಗದ್ದಾಗಿದೆ. ಇದು ಕಾಡಿನಲ್ಲಿ ಮರಗಳ ಮೇಲೆ ಗೂಡು ಕಟ್ಟಿ ವಾಸಿಸುತ್ತದೆ. ವೈಜ್ಞಾನಿಕ ಭಾಷೆಯಲ್ಲಿ ಇದರ ಹೆಸರು ''ವೆಂಡೀಲೂರಿಯಾ ಓಲೇರಿಸಿಯಾ'' ಆಗಿದೆ.

ಮಳೆಗಾಲ ಆರಂಭವಾದ ಕೂಡಲೆ ಹೆಣ್ಣು ಗೀಜಗ ಪಕ್ಷಿ ಮರಿಗಳನ್ನಿಡಲು ಗೂಡನ್ನು ತಯಾರಿಸುತ್ತದೆ. ಮಳೆಗಾಲದ ಅನಂತರ ಅದು ತನ್ನ ಮರಿಗಳನ್ನು ಎಲ್ಲಿಗೋ ಎತ್ತಿಕೊಂಡು ಹೋಗುತ್ತದೆ. ಅದೇ ಹೊತ್ತಿಗೆ ''ವೃಕ್ಷಮೂಷಕ''ವು ಗೂಡನ್ನು ಕಟ್ಟಲು ಹೊರಡುತ್ತದೆ. ಇದಕ್ಕೆ ಗೀಜಗ ಪಕ್ಷಿಯ ಖಾಲಿ ಗೂಡು ಕಾಣಸಿಗುತ್ತದೆ. ಆ ಗೂಡಿಗೆ ಎಲೆಗಳನ್ನು ಜೋಡಿಸಿ, ಶಿಥಿಲ ಗೂಡನ್ನು ಬಲಿಷ್ಠಗೊಳಿಸಿ ಅಲ್ಲಿಯೇ ವಾಸಿಸುತ್ತದೆ.

ವೃಕ್ಷಮೂಷಕಗಳ ಉದ್ದ, ಬಾಲಸಹಿತ 10 ರಿಂದ 22 ಸೆ.ಮೀ.ತನಕ ಇರುತ್ತದೆ. ಇವುಗಳ ಶರೀರ ಚಿಕ್ಕದು. ದೇಹಕ್ಕಿಂತ ಬಾಲ ಉದ್ದ. ಶರೀರ ಕೇವಲ 5ರಿಂದ 9 ಸೆ.ಮೀ.ವರೆಗೆ ಉದ್ದವಿದೆ. ಆದರೆ ಬಾಲ, ದೇಹಕ್ಕಿಂತ ಒಂದೂಕಾಲು ಅಥವಾ ಒಂದೂವರೆ ಪಾಲಿನಷ್ಟು ದೊಡ್ಡದಾಗಿ ಕಂಡು ಬರುತ್ತದೆ.

ಇವನ್ನು 'ವೃಕ್ಷಮೂಷಕ' ಎಂದು ಕರೆಯಲು ಕಾರಣವಿದೆ. ಇವುಗಳ ದೇಹರಚನೆ ಮರಗಿಡಗಳಲ್ಲಿರಲು ಮತ್ತು ಅವನ್ನೇರಲು ಅನುಕೂಲವಾಗಿರುತ್ತದೆ. ಸಾಮಾನ್ಯವಾಗಿ ಇಲಿಗಳ ಕಾಲುಗಳಲ್ಲಿ ಪಂಜಾ ಇರುತ್ತದೆ. ಅದರಿಂದಾಗಿ ಅವು ಅತಿ ವೇಗವಾಗಿ ಓಡಲು ಶಕ್ತವಾಗುತ್ತವೆ. ಆದರೆ ಅವು ಮರವನ್ನೇರಲಾರವು. ವೃಕ್ಷಮೂಷಕ

ಗಳಿಗೆ ಪಂಜದ ಬದಲು ಬೆರಳುಗಳಲ್ಲಿ ಉಗುರುಗಳಿರುತ್ತವೆ. ಇದರಿಂದ ಇವುಗಳಿಗೆ ನುಣುಪಾದ ಮರಗಳನ್ನು ಏರಲು ಸುಲಭಸಾಧ್ಯವಾಗುತ್ತದೆ. ಈ ವಿಭಿನ್ನತೆಯಿಂದ ಬಿಲಗಳಲ್ಲಿರುವ ಇಲಿಗಳು ಮರಗಳನ್ನೇರಲಾರವು. ಬಿಲತೋಡಲು ಸಮರ್ಥವಾಗುತ್ತವೆ. ಅಂತೆಯೇ ವೃಕ್ಷಮೂಷಕಗಳು ಮರವೇರಬಲ್ಲುವು, ಬಿಲತೋಡಲಾರವು.

ಸಂಪೂರ್ಣವಿಕಾಸವಾಗುವ ತನಕ ಈ ಇಲಿಗಳ ಮರಿಗಳಿಗೆ ತಾಯಿಯ ಹಾಲೇ ಆಹಾರ ಮತ್ತು ಆಧಾರ. ಹೆಣ್ಣು ವೃಕ್ಷಮೂಷಕವು ಚಳಿಗಾಲದಲ್ಲಿಯೇ ಮೂರರಿಂದ ಆರರತನಕ ಮರಿಗಳನ್ನಿಡುತ್ತದೆ. ಚಳಿಗಾಲದ ಅಂತ್ಯಕ್ಕೆ ಈ ಮರಿಗಳು ಓಡಾಡಲು ಶಕ್ತವಾಗುತ್ತವೆ.

ಇವುಗಳಲ್ಲಿ ಇನ್ನೂ ಒಂದೆರಡು ವಿಶೇಷತೆಯಿದೆ. ಇದು ವಾಸಮಾಡುತ್ತಿರುವ ಗೀಜಗನ ಗೂಡುಗಳಲ್ಲಿ ತನ್ನ ಅಧಿಕಾರವನ್ನು ಸ್ಥಾಪಿಸುವುದಿಲ್ಲ. ಕೇವಲ ಅನಾಥವಾದ ಖಾಲಿಗೂಡುಗಳನ್ನು ಮಾತ್ರ ಪುನರ್ನಿರ್ಮಾಣ ಮಾಡುತ್ತದೆ. ಮಾತ್ರವಲ್ಲದೆ ಹೆಣ್ಣುಗಂಡು ಮರ ಇಲಿಗಳು ತಮಗೆಂದು ಬೇರೆ ಬೇರೆ ಗೂಡುಗಳನ್ನು ರಚಿಸಿ ವಾಸಿಸುತ್ತವೆ. ●




ಅನುಕ್ರಮಣ

# ಅರ್ಥಪೂರ್ಣ ಬದುಕು...

ಮೂಲ : ಅರ್ನಾಲ್ಡ್ ಬೆನೆಟ್
ಸಂಗ್ರಹಾನುವಾದ : ಚಂದ್ರಕಾಂತ ವಡ್ಡು

## ಅನುಕ್ಷಣವೂ ಅರ್ಥಪೂರ್ಣ ಬದುಕು...

**ಇಪ್ಪತ್ತನೇ ಶತಮಾನದ ಕಾದಂಬರಿಕಾರರಲ್ಲಿ ಅಗ್ರಗಣ್ಯನಾದ ಅರ್ನಾಲ್ಡ್ ಬೆನೆಟ್ ನಾಟಕಕಾರ, ವಿಮರ್ಶಕನಾಗಿಯೂ ತನ್ನ ಪ್ರತಿಭೆಯನ್ನು ಬೆಳಗಿದ್ದಾನೆ. 1907ರಲ್ಲಿ ಈತನ ಲೇಖನಿಯಿಂದ ಹರಿದುಬಂದ How to Live on 24 Hours a Day ಕೃತಿ ಲಕ್ಷಾಂತರ ಓದುಗರ ಬದುಕಿನ ಗತಿಯನ್ನೇ ಬದಲಿಸಿತು. ಮನುಷ್ಯನ ದೈನಂದಿನ ನಡವಳಿಕೆಗೆ ಮೂಲಭೂತವೆನ್ನಿಸುವ ಮಾರ್ಗಸೂತ್ರಗಳನ್ನು ಈ ಗ್ರಂಥ ಸಾದರಪಡಿಸುತ್ತದೆ. ಇಂಗ್ಲಿಷ್ ಲೇಖಕ ಬೆನೆಟ್‌ನ ಈ ಕೃತಿಯ ಸಂಕ್ಷಿಪ್ತ ರೂಪವಿಲ್ಲಿದೆ. ಇದು ನಿಮ್ಮ ಬದುಕಿಗೂ ತಿರುವು ನೀಡೀತು.......**



'ವೇಳೆ ಹಣವಿದ್ದಂತೆ' ಎಂಬ ಗಾದೆ ಸಮಯವನ್ನು ಪೂರ್ಣವಾಗೇನೂ ವರ್ಣಿಸುವುದಿಲ್ಲ. ಪ್ರತಿಯೊಂದಕ್ಕೂ ಬಳಸಲ್ಪಡುವ ವರ್ಣನಾತೀತ ಕಚ್ಚಾವಸ್ತು ಈ ವೇಳೆ. ವೇಳೆಯನ್ನು ಹೊರಗಿಟ್ಟರೆ ಏನೊಂದೂ ಸಾಧ್ಯವಾಗದು. ನಿರಂತರವಾದ ವೇಳೆಯ ಸರಬರಾಜಂತೂ ನಿಜಕ್ಕೂ ದೈನಂದಿನ ಪವಾಡವೇ ಸರಿ. ನೀವು ಬೆಳಗಿನಜಾವ ಎಚ್ಚರಗೊಳ್ಳುತ್ತೀರಿ. ಆಗ ನಿಮಗರಿವಿಲ್ಲದಂತೆಯೇ ಅಮೂಲ್ಯವಾದ ಇಪ್ಪತ್ನಾಲ್ಕು ತಾಸುಗಳು ಚಮತ್ಕಾರಿಕವಾಗಿ ನಿಮ್ಮ ಕಿಸೆ ತುಂಬಿರುತ್ತವೆ. ಅವು ನಿಮ್ಮ ಬಳಕೆಗೆಂದೇ ಇರುವಂಥವು.

ಈ ಘಂಟೆಗಳನ್ನು ಯಾರೊಬ್ಬರೂ ನಿಮ್ಮಿಂದ ಕಿತ್ತುಕೊಳ್ಳಲಾರರು; ಕದಿಯಲಾರರು. ಅಲ್ಲದೆ ಯಾರಿಗೂ ನಿಮಗೆ ಸಿಕ್ಕಿದ್ದಕ್ಕಿಂತ ಹೆಚ್ಚಾಗಲಿ ಕಡಿಮೆಯಾಗಲಿ ವೇಳೆ ಲಭಿಸದು. ಶ್ರೀಮಂತಿಕೆಯಾಗಲಿ ಪ್ರತಿಭಾವಂತಿಕೆಯಾಗಲಿ ದಿನವೊಂದಕ್ಕೆ ಒಂದೇ ಒಂದು ತಾಸನ್ನೂ ಹೆಚ್ಚಿಗೆ ಪಡೆಯಲು ಶಕ್ಯವಿಲ್ಲ. ಅಮೂಲ್ಯ ವಸ್ತುವಾದ ಸಮಯವನ್ನು ನೀವು ಮನಸೋ ಇಚ್ಛೆ ವ್ಯಯಿಸಬಹುದು; ಅಪವ್ಯಯಕ್ಕೂ ಎಡೆಯುಂಟು. ಅದಕ್ಕಾಗಿ ನಿಮಗೇನೂ ಶಿಕ್ಷೆ ವಿಧಿಸಲ್ಪಡುವುದಿಲ್ಲ. ಅಷ್ಟೇ ಅಲ್ಲ, ಇದರಿಂದ ನಿಮ್ಮ ಸಮಯದ ಸರಬರಾಜಿನಲ್ಲೇನೂ ಖೋತಾ ಉಂಟಾಗದು.

ನೀವು ನಿಮಗೆ ಒದಗಿ ಬರುವ ಈ ಇಪ್ಪತ್ನಾಲ್ಕು ಗಂಟೆಗಳಲ್ಲಿ ದೈನಂದಿನ ಬದುಕನ್ನು

ನಡೆಸುತ್ತೀರಿ. ಆರೋಗ್ಯ, ಹಣ, ಸಂತಸ, ಸಂತೃಪ್ತಿ, ಗೌರವ, ಆತ್ಮವಿಶ್ವಾಸ ಇತ್ಯಾದಿಗಳನ್ನೆಲ್ಲ ನಿಮಗೆ ಕೊಡಲ್ಪಟ್ಟ ಈ ಅವಧಿಯೊಳಗೆಯೇ ನೇಯಬೇಕಾಗುತ್ತದೆ. ಒಬ್ಬ ವ್ಯಕ್ತಿಯ ಆದಾಯದ ಮಿತಿಯೊಳಗೆ ಬದುಕಿನ ಚಕ್ರ ತಿರುಗದಿದ್ದರೆ ತನ್ನ ದುಡಿಮೆಯನ್ನು ಹೆಚ್ಚಿಸಿಕೊಂಡು ಆಯವ್ಯಯವನ್ನು ಸರಿದೂಗಿಸಿಕೊಳ್ಳಬಹುದು. ಆದರೆ ನಿತ್ಯದ ಇಪ್ಪತ್ನಾಲ್ಕು ಗಂಟೆಗಳ 'ಆದಾಯ'ವು ದೈನಂದಿನ ಬೇಡಿಕೆಗೆ ಸಾಕಾಗದಿದ್ದರೆ ಅಂಥವರು ಜೀವನಪೂರ್ತಿ ಸಂದಿಗ್ಧದಲ್ಲಿ ತೊಳಲಾಡದೆ ಅನ್ಯಮಾರ್ಗವಿಲ್ಲ.

''ಇನ್ನೊಂಚೂರು ಹೆಚ್ಚು ಸಮಯ ಸಿಕ್ಕಿದ್ದರೆ ಅದನ್ನು ಹಾಗೆ ಮಾಡಬಹುದಿತ್ತು; ಇದನ್ನು ಹೀಗೆ ಬದಲಿಸಬಹುದಿತ್ತು...'' ಸಾಮಾನ್ಯವಾಗಿ ನಾವೆಲ್ಲ ಹೀಗೆ ಕರುಬುತ್ತ ಜೀವನವಿಡೀ ಕೊರಗುತ್ತೇವೆ. ಬೊಗಸೆಯ ನೀರಿನಂತೆ ವರ್ಷಗಳು ಸೋರಿಹೋಗುತ್ತಿವೆ; ಬದುಕು ನಾವಂದುಕೊಂಡಂತೆ ರೂಪುಗೊಳ್ಳುತ್ತಿಲ್ಲ ಎಂದು ಹಲುಬದವರುಂಟೆ?

ಈ ಇಂಥ ಪ್ರಮುಖ ನಿರ್ಲಕ್ಷಿತ ಸತ್ಯ ಮನವರಿಕೆಯಾದ ನಂತರವೇ ನನಗೆ ದೈನಂದಿನ ಬದುಕಿನ 'ಸಮಯ ವ್ಯಯ'ದ ಕುರಿತು ಸೂಕ್ಷ್ಮವಾಗಿ, ಪ್ರಾಯೋಗಿಕವಾಗಿ ಪರೀಕ್ಷಿಸುವ ಅಪೇಕ್ಷೆಯುಂಟಾಯಿತು.

### ಕಾಲಮಿತಿ

ಲಭ್ಯವಿರುವ ಇಪ್ಪತ್ನಾಲ್ಕು ತಾಸುಗಳಲ್ಲಿ ಪೂರ್ಣವಾಗಿ, ನೆಮ್ಮದಿಯಾಗಿ ಜೀವಿಸುವಂತೆ ಬದುಕನ್ನು ಪಳಗಿಸಿಕೊಳ್ಳಬೇಕೆನ್ನುವವರು ನೆನಪಿಡಬೇಕಾದ ಮೂಲಭೂತ ಅಂಶವೊಂದಿದೆ. ನೀರು ಕುಡಿದಷ್ಟು ಸರಳವಲ್ಲದ ಈ ಧ್ಯೇಯ ಸಾಧನೆಗೆ ತ್ಯಾಗ ಮತ್ತು ಅವಿರತ ಪ್ರಯತ್ನ ಅತ್ಯಗತ್ಯ. ನೀವು ಇದನ್ನು ಸಾಧಿಸಲೇಬೇಕೆಂದು ನಾನು ಒತ್ತಾಯಪಡಿಸಲಾರೆ. ನೀವೊಂದು ವೇಳೆ ಸೋಲಲು ಸಿದ್ಧರಾಗಿಲ್ಲದಿದ್ದರೆ, ಅಧಿಕ ಪ್ರಯತ್ನದಿಂದ ದೊರಕುವ ಅಲ್ಪ ಫಲಿತಾಂಶದಲ್ಲಿ ತೃಪ್ತಿ ಹೊಂದದಿದ್ದರೆ ಈ ಪ್ರಯೋಗವನ್ನು ಆರಂಭಿಸಲೇಬೇಡಿ.

ನನ್ನ ನೇರ ನುಡಿಯಿಂದ ನಿಮಗೆ ನಿರಾಶೆಯೆನ್ನಿಸುತ್ತದಲ್ಲವೆ? ಯಾವುದೇ ಮಹತ್ವದ ಕಾರ್ಯವನ್ನು ಸಾಧಿಸಬೇಕಾದರೆ ಹೀಗೆ ಮನಸ್ಸನ್ನು ಹುರಿಗೊಳಿಸುವುದು ಅವಶ್ಯಕ.

ನೀವೀಗ ಕೇಳಬಹುದು:

''ಸರಿ, ನಾನೀಗ ಅಖಾಡಕ್ಕೆ ಜಗಿಯಲು ಸಿದ್ಧನಾಗಿದ್ದೇನೆಂದು ಊಹಿಸು. ಆದರೆ ಆರಂಭಿಸುವುದೆಂತು?''

ಮಹಾಶಯರೇ, ನೀವು ಸುಮ್ಮನೆ ಪ್ರಾರಂಭ ಮಾಡಿ ಸಾಕು. ಈಜುಕೊಳದಲ್ಲಿ ಹಾರಲು ಸಜ್ಜಾಗಿ ನಿಂತವನೊಬ್ಬ, 'ಹೇಗೆ ಜಗಿಯಲಿ?' ಎಂದು ಅನುಮಾನಿಸಿದರೆ, 'ಮೈ ಬಿಗಿಹಿಡಿದು ಸುಮ್ಮನೆ ನೀರೊಳಗೆ ಧುಮುಕು' ಎಂದು ಹೇಳಬಹುದಷ್ಟೆ.

ನಿರಂತರವಾಗಿ ಸರಬರಾಜಾಗುವ ಸಮಯದ ವೈಶಿಷ್ಟ್ಯವೆಂದರೆ ಅದನ್ನು ಮುಂಗಡವಾಗಿ ವ್ಯಯಿಸಲಾಗದು. ನಿಮ್ಮ ಬದುಕಿನಲ್ಲಿ ನೀವೆಂದೂ ಒಂದೇ ಒಂದು ಕ್ಷಣವನ್ನೂ ಅಪವ್ಯಯ ಮಾಡಿಲ್ಲವೆಂಬಂತೆ ಮರುದಿನ, ಮರುಕ್ಷಣಗಳು ಪರಿಶುದ್ಧವಾಗಿ, ಪರಿಪೂರ್ಣವಾಗಿ ಬಿಚ್ಚಿಕೊಳ್ಳಲು ಸಿದ್ಧವಾಗಿ ನಿಂತಿರುತ್ತವೆ. ಆದುದರಿಂದ ಮರುದಿನಕ್ಕೆ ಮುಂದಿನವಾರಕ್ಕೆ ಎಂದು ಮುಂದೂಡುವುದರ ಮೂಲಕ ಏನನ್ನೂ ಸಾಧಿಸದಂತಾಗದು.

ಪ್ರಾರಂಭಿಸುವುದಕ್ಕೆ ಮುನ್ನ ನೀವು ತೋರಬಹುದಾದ ಅತ್ಯುತ್ಸಾಹದ ಬಗ್ಗೆ ನಿಮ್ಮನ್ನು ಎಚ್ಚರಿಸಬಯಸುತ್ತೇನೆ. ಗುಡ್ಡ ಬೆಟ್ಟಗಳನ್ನು ಪಲ್ಲಟಿಸುವ, ನದಿ ಪಾತ್ರವನ್ನು ಬದಲಿಸುವ ಉತ್ಸಾಹವನ್ನು ತಣಿಸುವುದು ಅಸಾಧ್ಯ. ಅನೇಕ ಸಾರೆ ಇಂತಹ ಉಮೇದು ಇದ್ದಕ್ಕಿದ್ದಂತೆ ಟುಸ್ಸೆಂದು ಸತ್ತುಹೋಗುವ ಅಪಾಯವಿರುತ್ತದೆ.



# ಅನುಕ್ಷಣವೂ ಅರ್ಥಪೂರ್ಣ ಬದುಕು

ಆರಂಭದಲ್ಲಿಯೇ ಅಗಾಧವಾದುದನ್ನು ಆಲಂಗಿಸಲು ಹೋಗಬೇಡಿ; ಆಕಸ್ಮಿಕಗಳಿಗೆ ಅವಕಾಶವಿರಲಿ. ಮನುಷ್ಯ ಸ್ವಭಾವವನ್ನು - ಅದರಲ್ಲೂ ನಿಮ್ಮ ಸ್ವಭಾವವನ್ನು - ಕಡೆಗಣಿಸುವುದು ಬೇಡ. ವೈಭವಯುತ ಸೋಲು ನಿಮ್ಮನ್ನು ಯಾವ ಎತ್ತರಕ್ಕೂ ಏರಿಸದು; ಆದರೆ ಪುಟ್ಟ ಯಶಸ್ಸು ತೆರೆಯುವ ಜಯದ ಬಾಗಿಲು ಸಣ್ಣದೇನಲ್ಲ.

ಆದುದರಿಂದ ನಿತ್ಯದ ಕೇವಲ ಇಪ್ಪತ್ನಾಲ್ಕು ಗಂಟೆಗಳ ಕಾಲಮಿತಿಯೊಳಗೆಯೇ ಪರಿಪೂರ್ಣ ಬದುಕನ್ನು ರೂಪಿಸಿಕೊಳ್ಳಲೋಸ್ಕರ ಯಾವುದೇ ಬೆಲೆ ತೆತ್ತಾದರೂ ಆರಂಭಿಕ ಸೋಲಿನ ಅಪಾಯವನ್ನು ದೂರವಿರಿಸುವುದೊಳ್ಳೆಯದು.

ಈಗ ಒಂದು ದಿನದಲ್ಲಿ ಸಿಗುವ ಸಮಯದ ಆಯವ್ಯಯವನ್ನಿಷ್ಟು ಅವಲೋಕಿಸೋಣ. ನಿಮ್ಮ ದಿನ ಈಗಾಗಲೇ ಕೋಡಿಬೀಳುವಷ್ಟು ಭರ್ತಿಯಾಗಿದೆಯೆಂದು ನೀವು ಭಾವಿಸಿರಬಹುದು. ಅದ್ಹೇಗೆ?

ಹೊಟ್ಟೆಪಾಡಿನ ದುಡಿಮೆಗಾಗಿ ನೀವು ಖರ್ಚು ಮಾಡುವ ಸಮಯವೆಷ್ಟು? ಸರಾಸರಿ ಏಳು ತಾಸುಗಳು ತಾನೆ? ನಿದ್ರೆಗಾಗಿ ವ್ಯಯವಾಗುವ ವೇಳೆ ಏಳು ತಾಸು. ಆಯ್ತು, ನಾನು ನಿಮಗೆ ಇನ್ನೆರಡು ತಾಸುಗಳನ್ನು ಉದಾರವಾಗಿ ದಯಪಾಲಿಸುತ್ತೇನೆ. ಆದರೆ ನೀವು ಇನ್ನುಳಿದ ಎಂಟು ತಾಸುಗಳನ್ನು ಹೇಗೆ ಖರ್ಚು ಮಾಡುವಿರೆಂಬುದರ ಲೆಕ್ಕವನ್ನು ಈ ಕ್ಷಣವೇ ನನಗೊಪ್ಪಿಸಬೇಕು.

ವ್ಯಾಪಾರಿ ಸಂಸ್ಥೆಯೊಂದರ ಉದ್ಯೋಗಿಯ ಪ್ರಕರಣವನ್ನು ತೆಗೆದುಕೊಂಡು ವಿವರಿಸಿದರೆ ಈ ಬಗ್ಗೆ ನಿಮಗೆ ಮನವರಿಕೆಯಾದೀತೆಂದು ಭಾವಿಸುತ್ತೇನೆ. ಈತನ ಬಹುದೊಡ್ಡ ಬಲಹೀನತೆ ಇರುವುದು ಈತ ತನ್ನ ದಿನದ ಬಗ್ಗೆ ಬೆಳೆಸಿಕೊಂಡಿರುವ ಸಾಮಾನ್ಯ ಮನೋಭಾವನೆಯಲ್ಲಿ. ವ್ಯಾಪಾರದ ಕುರಿತಾಗಿ ತೋರುವ ನಿರಾಸಕ್ತಿಯೇ ಈತನ ಮೂರನೇ ಎರಡರಷ್ಟು ಶಕ್ತಿ ಮತ್ತು ಹಿತಾಸಕ್ತಿಯನ್ನು ತಿಂದು ಹಾಕುತ್ತದೆ. ಈ ವ್ಯಕ್ತಿ ವ್ಯಾಪಾರಿ ಚಟುವಟಿಕೆಯನ್ನು ಸಾಧ್ಯವಾದಷ್ಟೂ ತಡವಾಗಿ ನಿರಾಸಕ್ತಿಯಿಂದ ಆರಂಭಿಸುತ್ತಾನೆ. ಆದರೆ ಅವಸರದ ಮುಕ್ತಾಯದಲ್ಲಿ ಮಾತ್ರ ಸಂತೋಷ ತೋರಿಸುತ್ತಾನೆ. ಆದಾಗ್ಯೂ ಈತನಿಗೆ ಒಂಬತ್ತರಿಂದ ಐದರವರೆಗಿನ ಅವಧಿಯೇ 'ಒಂದು ದಿನ'ವೆನ್ನಿಸುತ್ತದೆ; ಮುಂಚಿನ ಹತ್ತು ತಾಸು ಹಾಗೂ ಅನಂತರದ ಆರು ತಾಸು ಕೇವಲ ಮುನ್ನುಡಿ-ಬೆನ್ನುಡಿಗಳಿದ್ದಂತೆ. ಆತನ ಇಂಥ ಮನೋಭಾವನೆಯಿಂದಾಗಿ ಉಳಿದ ಹದಿನಾರು ತಾಸುಗಳು ಸುಮ್ಮನೆ ಉರುಳಿಹೋಗುತ್ತವೆ. ಆತ ಈ ಸಮಯವನ್ನು ಅಪವ್ಯಯ ಮಾಡದಿರಬಹುದು. ಆದರೆ ಅದು ಗಣಿಸಲ್ಪಡುವುದಿಲ್ಲವಲ್ಲ! ಈ ಅವಧಿಯನ್ನು ಆತ ಕೇವಲ 'ಮಾರ್ಜಿನ್' ಎಂದು ಪರಿಗಣಿಸಿಬಿಡುತ್ತಾನೆ.

ತನ್ನ ಅಸ್ತಿತ್ವದ ಎರಡನೇ ಒಂದು ಭಾಗವನ್ನು ಉಳಿದ ಮೂರನೇ ಒಂದು ಭಾಗದ (ಇದರಲ್ಲಿ ಕೂಡ ಆಸಕ್ತಿ ಅಷ್ಟಕಷ್ಟೆ!) ಸೇವೆಗೆ ಮುಡುಪಾ

ಗಿರಿಸುವ ವ್ಯಕ್ತಿಯೊಬ್ಬ ಪೂರ್ಣಪ್ರಮಾಣದ ಬದುಕನ್ನು ಹೇಗೆ ತಾನೆ ಕನಸಿಯಾನು? ಅದು ತಿರುಕನ ಕನಸೇ ಸರಿ.

ಪೂರ್ತಿಯಾಗಿ, ಪರಿಪೂರ್ಣವಾಗಿ ಬದುಕಬಯಸುವವರು ತಮ್ಮ 'ಒಂದು ದಿನ'ವನ್ನು 'ಒಂದು ದಿನ'ದೊಳಗೆಯೇ ಅಡಕಗೊಳಿಸಿಕೊಳ್ಳಬೇಕಾಗುತ್ತದೆ. ಒಂದರೊಳಗೊಂದು ಸೇರಿಸಿದ ಚೀನೀ ಪೆಟ್ಟಿಗೆಗಳನ್ನು ಊಹಿಸಿ. ಈ ಒಳಗಿನ ದಿನ ಸಂಜೆ ಐದಕ್ಕೆ ಆರಂಭವಾಗಿ ಬೆಳಗಿನ ಒಂಬತ್ತಕ್ಕೆ ಮುಗಿಯುತ್ತದೆ. ಹದಿನಾರು ಗಂಟೆಗಳ ಈ ಅವಧಿಯಲ್ಲಿ ವ್ಯಕ್ತಿ ತನ್ನ ದೇಹ, ಮನಸ್ಸು, ಸಹವರ್ತಿಗಳೆಡೆ ಗಮನವೀಯುವುದನ್ನು ಹೊರತು ಪಡಿಸಿದರೆ ಬೇರೇನೂ ಮಾಡಲಿಕ್ಕಿಲ್ಲ. ಈ ಅವಧಿಯಲ್ಲಿ ಆತ ಪರಿಪೂರ್ಣ ಸ್ವತಂತ್ರ. ಆತ ಯಾರ ಜೀತದಾಳೂ ಅಲ್ಲ; ಖಾಸಗಿ ಆದಾಯ ಮೂಲ ಹೊಂದಿರುವವನಂತಿರುತ್ತಾನೆ. ಇದೇ ಆತನ ಮನೋಭಾವನೆಯಾಗಿರಬೇಕು. ಜೀವನದ ಯಶಸ್ಸು ಈ ಮನೋಭಾವನೆಯನ್ನೇ ಅವಲಂಬಿಸಿರುತ್ತದೆ.

ಸ್ವಂತದ ಈ ಹದಿನಾರು ತಾಸುಗಳನ್ನು ಈ ಮಾದರಿ ಮನುಷ್ಯ ಹೇಗೆ ಬಳಸುತ್ತಾನೆ ಎಂಬುದನ್ನು ಪರಿಶೀಲಿಸುವ ಮೂಲಕ ನಾನು ಆತ ಮಾಡಬಾರದ ಆದರೆ ಮಾಡುತ್ತಿರುವ ಸಂಗತಿಗಳನ್ನಷ್ಟೇ ಸೂಚಿಸುತ್ತಿದ್ದೇನೆ. ನನ್ನ ಸಲಹೆಗಳನ್ನು ಸದ್ಯಕ್ಕೆ ಮುಂದೂಡುವೆ.

ನ್ಯಾಯವಾಗಿ ಹೇಳಬೇಕೆಂದರೆ ನಮ್ಮ ಈ ಮಾದರಿ ವ್ಯಕ್ತಿ ಬೆಳಗ್ಗೆ ಮನೆಯಿಂದ ಹೊರಡುವುದಕ್ಕೆ ಮುಂಚೆ ವ್ಯರ್ಥ ಮಾಡುವ ವೇಳೆ ಅತ್ಯಲ್ಪ. ಬೆಳಗ್ಗೆ ಎದ್ದು ತಿಂಡಿ ತಿಂದು ಹೊರಬೀಳುತ್ತಾನಷ್ಟೆ. ತಲಬಾಗಿಲನ್ನು ಸಶಬ್ದವಾಗಿ ಮುಚ್ಚಿದ ತಕ್ಷಣವೇ ಆತನ ಶ್ರಮಹೀನ ಮನಸ್ಸಿನ ಮೂಲೆಗಳು ನಿಷ್ಕ್ರಿಯಗೊಳ್ಳುತ್ತವೆ. ಹೀಗೆ ಈ ಮಹಾಶಯನ ಸವಾರಿ ಕಚೇರಿಯನ್ನು ತಲುಪುವುದು ಒಂದು ಬಗೆಯ ಮಾನಸಿಕ ಮೂರ್ಛಾವಸ್ಥೆಯಲ್ಲೇ. ಇಂಥವರಿಂದಾಗಿ ಪ್ರತಿನಿತ್ಯ ಲಕ್ಷಾಂತರ ತಾಸುಗಳು ಕಳೆದುಹೋಗುತ್ತವೆ. ಏಕೆಂದರೆ ನಮ್ಮ ಈ 'ಮಾದರಿ ಮನುಷ್ಯ'ನಿಗೆ ಸೋರಿ ಹೋಗುವ ವೇಳೆಯ ಬಗ್ಗೆ ಮುನ್ನೆಚ್ಚರಿಕೆ ವಹಿಸಲು, ಚಿಂತಿಸಲು ವೇಳೆ ಇರುವುದಿಲ್ಲ!

ಪ್ರತಿನಿತ್ಯ ಖರ್ಚು ಮಾಡಲು ಈತನ ಬಳಿ ವೇಳೆಯ ಒಂದು ಗಟ್ಟಿ ನಾಣ್ಯವಿದೆ. ಈ ನಾಣ್ಯಕ್ಕೆ ಆತ ಚಿಲ್ಲರೆ ಪಡೆಯಬೇಕು. ಚಿಲ್ಲರೆ ಪಡೆಯುವಾಗಲೇ ಈತ ಬಹಳಷ್ಟನ್ನು ಕಳೆದುಕೊಳ್ಳಲು ಸಿದ್ಧನಾಗುತ್ತಾನೆ. ತಾನು ಕೆಲಸ ಮಾಡುವ ಕಂಪನಿ ದಿನಕ್ಕೆರಡು ಬಾರಿ ಐದು ನಿಮಿಷಗಳನ್ನು ಕೊಳ್ಳೆ ಹೊಡೆದಾಗ ಈತ ಮಾಡುವುದು ಇದನ್ನೇ.... ಇದೇನು ನಿಮಿಷಗಳನ್ನು ಲೆಕ್ಕ ಹಾಕತೊಡಗಿದಿರಿ ಎನ್ನುವಿರಾ? ಹೌದು. ಆ ಬಗ್ಗೆ ಮುಂದೆ ಸಮರ್ಥನೆ ನೀಡುತ್ತೇನೆ.

### ಅಮೂಲ್ಯ ಘಳಿಗೆಗಳು

ಈಗ ನೀವು ವೃತ್ತ ಪತ್ರಿಕೆಯೊಂದನ್ನು ಖರೀದಿಸಿ ರೈಲು ಹತ್ತುತ್ತೀರಾ?

ಬೆಳಗಿನ ರೈಲು ಹತ್ತಿದ ನೀವು ಉಲ್ಲಾಸಕರವಾಗಿ ವೃತ್ತ ಪತ್ರಿಕೆಯೊಳಗೆ ಹುದುಗುತ್ತೀರಿ. ವಿರಾಮದ ಲಹರಿ ಹರಡುತ್ತದೆ. ದಿನಕ್ಕೆ ಇಪ್ಪತ್ನಾಲ್ಕು ಗಂಟೆಗಳ ಬದಲು ನೂರ ಇಪ್ಪತ್ನಾಲ್ಕು ತಾಸುಗಳಿರುವ ಅನ್ಯಗ್ರಹದವನೆಂಬಂತಹ ಮೂಡಿನಲ್ಲಿ ನಿಮಗೆ 'ಸಮೃದ್ಧ ಸಮಯ' ಗೋಚರಿಸುತ್ತದೆ. ವೃತ್ತ ಪತ್ರಿಕೆಗಳನ್ನು ಓದುವ ಬಗ್ಗೆ ನನಗೆ ಅತ್ಯುತ್ಸಾಹವಿಲ್ಲ. ಹಾಗೆಂದು ಅವಸರದಲ್ಲಿ ಸಿದ್ಧಗೊಳಿಸಿದ ಅವುಗಳನ್ನು ಅವಸರದಲ್ಲೇ ಓದಿ ಮುಗಿಸಬೇಕೆಂದು ನಾನು ಅಭಿಪ್ರಾಯಪಟ್ಟರೆ ಅದು ಪೂರ್ವಾಗ್ರಹಪೀಡಿತವೆಂದು ಭಾವಿಸಬೇಡಿ. ನನ್ನ ದೈನಂದಿನ ಕಾರ್ಯಕ್ರಮ ಪಟ್ಟಿಯಲ್ಲಿ ವೃತ್ತ ಪತ್ರಿಕೆಗಳಿಗೆ ಸ್ಥಾನವಿಲ್ಲ. ಬಿಡಿ ಸಮಯದಲ್ಲಿ ಮಾತ್ರ ನಾನು ಅವುಗಳನ್ನು ಓದುತ್ತೇನೆ. 30-40 ನಿಮಿಷಗಳನ್ನು ಇದಕ್ಕಾಗಿ ಮೀಸಲಿರಿಸುವ ಮೂಲಕ ನೀವು ಸಮಯದ



## ಅನುಕ್ಷಣವೂ ಅರ್ಥಪೂರ್ಣ ಬದುಕು

ಅಮೂಲ್ಯ ರತ್ನಗಳನ್ನು ಚೆಲ್ಲಾಪಿಲ್ಲಿಯಾಗಿಸುವುದನ್ನು ನಾನು ಒಪ್ಪಲಾರೆ. ನೀವೇನೂ ಸಮಯದ ಸಮ್ರಾಟರಲ್ಲ. ನನಗಿಂತ ನಿಮಗೆ ಹೆಚ್ಚೇನೂ ಸಮಯವಿಲ್ಲವೆಂಬುದನ್ನು ಗೌರವಪೂರ್ವಕವಾಗಿಯೇ ಜ್ಞಾಪಿಸಬಯಸುತ್ತೇನೆ. ಅಂತೆಯೇ ರೈಲಿನಲ್ಲಿ ವೃತ್ತ ಪತ್ರಿಕೆ ಬಿಚ್ಚುವುದನ್ನು ಬಿಟ್ಟು ಬಿಡಿ!

ನಾನೀಗಾಗಲೇ ಸುಮಾರು ಮೂವತ್ತು ನಿಮಿಷಗಳನ್ನು ಬಳಕೆಗಾಗಿ ತೆಗೆದಿರಿಸಿದ್ದೇನೆ.

ಈಗ ನೀವು ನಿಮ್ಮ ಕಚೇರಿ ತಲುಪುತ್ತೀರಿ. ಸಂಜೆ ಐದರವರೆಗೂ ನಿಮ್ಮನ್ನು ಅಲ್ಲಿ ಕೂಡಿಹಾಕುತ್ತೇನೆ. ನಿಮಗೆ ಮಧ್ಯಾಹ್ನ ಒಂದು ಗಂಟೆಯ ಭೋಜನ ವಿರಾಮ ಸಿಕ್ಕುತ್ತದೆಂಬುದನ್ನು ನಾನು ಬಲ್ಲೆ. ಅದರಲ್ಲಿ ಊಟಕ್ಕೆ ವ್ಯಯವಾಗುವುದು ಅರ್ಧ ತಾಸಿಗಿಂತಲೂ ಕಡಿಮೆ ಕಾಲ. ಆದರೆ ಈ ಸಮಯವನ್ನು ನಿಮಗಿಚ್ಛೆ ಬಂದಂತೆ ಬಳಸಲು ಬಿಟ್ಟುಬಿಡುತ್ತೇನೆ. ಬೇಕಿದ್ದರೆ ಆಗ ವೃತ್ತ ಪತ್ರಿಕೆಯನ್ನು ಓದಿ.

ನೀವು ಆಫೀಸಿನಿಂದ ಹೊರಗೆ ಬರುತ್ತಲೇ ನಾನು ನಿಮ್ಮನ್ನು ಕಾಣುತ್ತೇನೆ. ಮ್ಲಾನವದನರಾದ ನೀವು ತುಂಬಾ ಬಳಲಿದ್ದೀರಿ; ಕಳೆಗುಂದಿರುವುದನ್ನು ನಿಮ್ಮ ಹೆಂಡತಿಯೂ ಗುರುತಿಸುತ್ತಾಳೆ. ಮನೆಗೆ ತಲುಪಿದ ತಕ್ಷಣವೇ ನೀವು ಉಪಾಹಾರ ಸೇವಿಸುವುದಿಲ್ಲ. ಒಂದು ಗಂಟೆ ಜಾರುವಷ್ಟರಲ್ಲಿ ಒಂದಷ್ಟು ತಿಂಡಿ ತಿನ್ನಬೇಕೆಂಬ ಅಭಿಲಾಷೆಯುಂಟಾಗುತ್ತದೆ. ಊಟದ ತರುವಾಯ ಸ್ನೇಹಿತರನ್ನು ಕಾಣುತ್ತೀರಿ; ಅದು-ಇದು ಎಂದು ಅತ್ತಿತ್ತ ಓಡಾಡುವಿರಿ; ಇಸ್ಪೀಟು ಕಾರ್ಡುಗಳು ಕೈಗೆ ಬರುತ್ತವೆ; ಪುಸ್ತಕದ ಪುಟಗಳಲ್ಲಿ ಕಣ್ಣಾಡಿಸಬಹುದು; ಹಾರ್ಮೋನಿಯಂ ಪೆಟ್ಟಿಗೆಯ ಮೇಲೆ ಬೆರಳಾಡುತ್ತವೆ.... ಹ್ಞಂ... ಈಗಾಗಲೇ ಹತ್ತೂಕಾಲು ಹೊಡೆಯಿತು! ಇದು ಹಾಸಿಗೆ ಸೇರುವ ಬಗ್ಗೆ ಯೋಚಿಸುವ ಸಮಯ! ಈ ಯೋಚನೆಯಲ್ಲೇ ನಲವತ್ತು ನಿಮಿಷಗಳನ್ನು ಸೋರಿಸಿ ಕೊನೆಗೆ ಹಾಸಿಗೆ ಸೇರಿದಾಗ ದಿನದ ಕಾರ್ಯಬಾಹುಳ್ಯದಿಂದ ನೀವು ಹೈರಾಣಾಗಿರುತ್ತೀರಿ. ನೀವು ಆಫೀಸು ಬಿಟ್ಟಾಗಿನಿಂದ ಕನಸಿನಂತೆಯೋ ಮಾಯೆಯಂತೆಯೋ ಅಂತೂ ಆರು ತಾಸುಗಳು ಲೆಕ್ಕಕ್ಕೆ ಬಾರದಂತೆ ಸರಿದುಹೋದವು!

ಇದೊಂದು ಅತ್ಯುತ್ತಮ ಉದಾಹರಣೆಯ ಪ್ರಸಂಗ. ಆದರೆ ನೀವು ಹೇಳಬಹುದು: ''ಮಾತನಾಡಲು ಎಲ್ಲ ಸರಿಯಾಗಿ ಕಾಣಿಸುತ್ತದೆ. ಆತ ಬಳಲಿದ್ದಾನೆ; ಸ್ನೇಹಿತರನ್ನು ನೋಡಲೇಬೇಕಾಗುತ್ತದೆ. ಆತ ಸದಾ ಒತ್ತಡದಲ್ಲಿ ಇರಲಾರ....'' ಇತ್ಯಾದಿಯಾಗಿ ನೀವು ವಾದಿಸುತ್ತೀರಿ.

ಒಂದು ವೇಳೆ ನೀವು ಸಿನಿಮಾ ನೋಡಬೇಕೆಂದು (ಅದೂ ಒಬ್ಬ ಮನದನ್ನೆಯೊಂದಿಗೆ) ಬಯಸಿದರೆ ಇದೇ ಸಂಜೆಯ ಸಮಯವನ್ನು ಹೇಗೆ ಕಳೆಯುವಿರಿ?

ಎಷ್ಟೇ ಶ್ರಮವಾದರೂ ಉತ್ತಮ ಉಡುಪು ಧರಿಸಲು ಮರೆಯುವುದಿಲ್ಲ; ಮತ್ತೆ ಪಟ್ಟಣಕ್ಕೆ ಹಿಂದಿರುಗುತ್ತೀರಿ; ಸತತ ನಾಲ್ಕು ಗಂಟೆಗಳ

ಚಟುವಟಿಕೆಗೆ ಒಡ್ಡಿಕೊಳ್ಳಬಲ್ಲಿರಿ; ಅನಂತರ ಆಕೆಯನ್ನು ಮನೆಗೆ ತಲುಪಿಸಿಯೇ ನೀವು ನಿಮ್ಮ ಮನೆ ಸೇರುವುದು. ಈಗ ನೀವು ಮಲಗುವ ಬಗೆಗೆ ಮುಕ್ಕಾಲು ತಾಸು ಯೋಚಿಸದೆ ನೇರವಾಗಿ ಹಾಸಿಗೆ ಸೇರುತ್ತೀರಿ: ಈ ನಡುವೆ ಬಳಲಿಕೆಯ ಜೊತೆಗೆ ಗೆಳೆಯರೂ ಮರೆತು ಹೋಗಿರುತ್ತಾರೆ. ಅಲ್ಲದೆ ಅಂದಿನ ಸಂಜೆ ಅತಿ ದೀರ್ಘವೆಂದು ಭಾಸವಾಗದಿರದು (ವಾಸ್ತವದಲ್ಲಿ ಅದು ಅತ್ಯಂತ ಚಿಕ್ಕದು!)

ನಿಮ್ಮೆಲ್ಲ ಸಾಮರ್ಥ್ಯವನ್ನು ಸಮರ್ಪಿಸಬೇಕಾದ ಸಂಜೆಯನ್ನು ನೀವು ತೀವ್ರ ಕಾತರದಿಂದ ನಿರೀಕ್ಷಿಸಿದ್ದು ನೆನಪಿದೆಯೇ? ಆ ಸಂಜೆಯ ವಿಶಿಷ್ಟ ಕಾರ್ಯದ ಯೋಚನೆಯೇ ಅವತ್ತಿನ ದಿನಕ್ಕೆ ಒಂದು ಬಗೆಯ ತೀವ್ರತೆಯನ್ನು ನೀಡಬಲ್ಲದು.

ನನ್ನ ಸಲಹೆಯೆಂದರೆ, ಸಂಜೆ ಐದರ ಹೊತ್ತಿನಲ್ಲಿ ನಿಂತಾಗ ವಸ್ತುಸ್ಥಿತಿಯನ್ನು ಅದರ ನಿಜ ಸ್ವರೂಪದಲ್ಲೇ ಕಂಡು ನೀವು ಸುಸ್ತಾಗಿಲ್ಲವೆಂಬುದನ್ನು ಒಪ್ಪಿಕೊಳ್ಳಿ. (ಏಕೆಂದರೆ ನೀವು ಬಳಲಿಲ್ಲವೆಂದು ನಿಮಗೆ ಗೊತ್ತು). ಅನಂತರ ನಿಮ್ಮ ಸಂಜೆಯ ಕಾರ್ಯಕ್ರಮವನ್ನು ಹೇಗೆ ಸಂಯೋಜಿಸಬೇಕೆಂದರೆ ಅದು ಆಹಾರ ಸೇವನೆಗೆಂದು ಮಧ್ಯದಲ್ಲಿ ನಿಲುಗಡೆಯಾಗಕೂಡದು. ಸಮಯದ ಅರ್ಥಪೂರ್ಣ ಬಳಕೆಗೆ ನಾಂದಿಯಾಗಿ ಪ್ರತಿ ವಾರನೇ ಸಂಜೆಯ ಒಂದೂವರೆ ಗಂಟೆಯನ್ನು ಮನಸ್ಸಿನ ಪ್ರಮುಖ ಸಂಸ್ಕಾರಕ್ಕಾಗಿ ಬಳಸಬಹುದು.

ಯಾವುದಾದರೊಂದು ಗಟ್ಟಿ ಪ್ರಯತ್ನದಲ್ಲಿ ತೊಡಗಿಸಿಕೊಳ್ಳಲೋಸ್ಕರ ನೀವು ನಾಲ್ಕಾರು ಸಾಯಂಕಾಲಗಳನ್ನು ತೆಗೆದಿರಿಸಬೇಕೆಂದುಕೊಳ್ಳಿ. ಆಗ ರಾತ್ರಿಯ (10.15ರ ಸಮಯ) ನಿಮ್ಮ 'ಶಯನ ಸಿದ್ಧತೆ'ಯ ಹವ್ಯಾಸ ತಂತಾನೇ ದೂರ ಸರಿಯುತ್ತದೆ. ಮಲಗುವ ಕೋಣೆಯ ಬಾಗಿಲು ತೆರೆಯುವುದಕ್ಕಿಂತ ನಲವತ್ತು ನಿಮಿಷ ಮೊದಲೇ ಶಯನ ಸಿದ್ಧತೆ ನಡೆಸುವಾತ ತುಂಬಾ ಬೇಸರ ಹೊಂದಿರುತ್ತಾನೆ.

ವಾರದಲ್ಲಿ ಮೂರು ಬಾರಿ ಸಿಗುವ ನಿಮ್ಮ ಈ ಕ್ರಿಯಾಶೀಲ 90 ನಿಮಿಷಗಳು ಇಡೀ ವಾರದ 10,080 ನಿಮಿಷಗಳಲ್ಲಿ ಬಹುಮುಖ್ಯವಾದವು ಎಂಬುದು ನಿಮ್ಮ ನೆನಪಿನ ಭಿತ್ತಿಯಲ್ಲಿ ಅಚ್ಚಾಗಿರಲಿ. ಇವು ಅತ್ಯಂತ ಪವಿತ್ರವಾದ ಘಳಿಗೆಗಳು. ಈ ಸಮಯದಲ್ಲಿ ಬೇರೆ ಯಾವುದೇ ಆಕರ್ಷಣೆ ಸೆಳೆದರೂ, ''ಸಾರಿ, ನಾನು ಚೆಸ್ ಆಡಬೇಕಿದೆ'' ಎಂದು ಹೇಳುವ ಬದಲು ''ಇಲ್ಲ.... ನನಗೆ ಕೆಲಸವಿದೆ'' ಎಂದು ಹೇಳಬೇಕು. ಇದು ತುಂಬಾ ಕಠಿಣತಮ ನಿಲುವೆಂಬುದನ್ನು ನಾನು ಒಪ್ಪುತ್ತೇನೆ.

### ಸಿದ್ಧಜಾಡಿನಲ್ಲಿ ಮಾರ್ಪಾಡು

ಸಾಮಾನ್ಯ ಸಂದರ್ಭದಲ್ಲಿ ನಾನು ಹೇಳ ಬಯಸುವುದೇನೆಂದರೆ:

ತಮ್ಮ ಎಂದಿನ ವಾರದಲ್ಲಿ ಆರು ದಿನಗಳ ಕಾರ್ಯಕ್ರಮಕ್ಕೆ ಬದ್ಧರಾಗಿರಿ. ನಿಮಗಿದನ್ನು ಹಿಗ್ಗಿಸಲೇಬೇಕೆನ್ನಿಸಿದರೆ ಹಿಗ್ಗಿಸಿ. ಆದರೆ ಈ ಹೆಚ್ಚಿನ ಕಾಲಾವಧಿಯನ್ನು ನಿಯಮಿತ ಆದಾಯವೆಂದು ಭಾವಿಸದೆ ಆಕಸ್ಮಿಕವಾಗಿ ಸಿಕ್ಕ ಅವಕಾಶವೆಂದು ಪರಿಗಣಿಸಬೇಕು. ಏಕೆಂದರೆ ಈ ಅಧಿಕ ವೇಳೆಯ ಅಲಭ್ಯತೆಯಲ್ಲಿ ಮುಂಚಿನ ಆರು ದಿನಗಳ ವಾರಕ್ಕೇ ಹೊಂದಿಕೊಳ್ಳುವುದು ಅಗತ್ಯ.

ಈಗ ವೇಳೆಯ ಅರ್ಥಪೂರ್ಣ ಬಳಕೆಯ ಹಾದಿಯಲ್ಲಿ ಎಷ್ಟು ದೂರ ಬಂದಿದ್ದೇವೆಂಬುದನ್ನು ಅವಲೋಕಿಸೋಣ. ಪ್ರತಿ ಬೆಳಗಿನಲ್ಲಿ ಅನುಪಯುಕ್ತವಾಗಿ ಕಳೆದು ಹೋಗುತ್ತಿದ್ದ ಅರ್ಧಗಂಟೆಯನ್ನು ಗುರುತಿಸಿದ್ದೇವೆ. ಇದರಿಂದ ಆರು ದಿನಗಳಲ್ಲಿ ಮೂರು ತಾಸು ದಕ್ಕಿತು. ಒಂದು ಸಂಜೆಗೆ ಒಂದೂವರೆ ಗಂಟೆಗಳಂತೆ ಮೂರು ಸಂಜೆಗಳಲ್ಲಿ ನಾಲ್ಕೂವರೆ ತಾಸುಗಳು ನಮ್ಮ ಉಳಿತಾಯ ಖಾತೆ ಸೇರಿವೆ. ಅಂದರೆ ಒಂದು ವಾರದಲ್ಲಿ ಒಟ್ಟು ಏಳೂವರೆ ತಾಸು



## ಅನುಕ್ಷಣವೂ ಅರ್ಥಪೂರ್ಣ ಬದುಕು

ಸಿಕ್ಕಂತಾಯ್ತು.

''ಅರೆ! ಅನುಕ್ಷಣವೂ ಅರ್ಥಪೂರ್ಣವಾಗಿ ಹೇಗೆ ಬದುಕಬೇಕೆಂದು ತೋರಿಸುವುದಾಗಿ ಹುಸಿ ಭರವಸೆ ನೀಡಿದ ನೀವು 168 ಗಂಟೆಗಳಲ್ಲಿ ಕೇವಲ ಏಳೂವರೆ ತಾಸುಗಳ ಬಗ್ಗೆಯಷ್ಟೇ ಮಾತನಾಡುತ್ತಿರುವಿರಿ. ಈ ಏಳೂವರೆ ತಾಸುಗಳಲ್ಲಿ ನೀವೇನು ಪವಾಡ ಮಾಡಿ ತೋರಿಸಲಿರುವಿರೇನು?'' ಹೀಗೆಂದು ನೀವು ಮನದಲ್ಲೇ ಮೂದಲಿಸತೊಡಗಿದ್ದೀರೆಂದು ನನಗೆ ಗೊತ್ತು.

ಹೌದು. ನೀವು ನನಗೊಂಚೂರು ಅವಕಾಶ ನೀಯುವಿರಾದರೆ ಖಂಡಿತ ಅದನ್ನು ಮಾಡಿ ತೋರಿಸಬಲ್ಲೆ. ಇರಲಿ, ವಿಷಯಾಂತರಿಸುವುದು ಬೇಡ.

ಕ್ಷುಲ್ಲಕವಾಗಿ ತೋರುವ ಈ ತಾಸುಗಳ ಸಂಪೂರ್ಣ ಸದ್ಬಳಕೆಯಿಂದ ವಾರದುದ್ದದ ಬದುಕಿಗೆ ಚಾಲನೆ, ಲವಲವಿಕೆ ಪ್ರಾಪ್ತವಾಗಿ ಅತ್ಯಂತ ಶುಷ್ಕ ನೌಕರಿಯಲ್ಲೂ ಆಸಕ್ತಿ ಮೊಳೆಯುತ್ತದೆಂಬುದು ನನ್ನ ಪ್ರತಿಪಾದನೆ.

ದಟ್ಟ ಅಡವಿಯಲ್ಲಿ ಕೇವಲ ಏಳೂವರೆ ತಾಸುಗಳಷ್ಟು ಜಾಗೆ ದೊರಕಿಸಿಕೊಳ್ಳುವುದನ್ನು ವ್ಯರ್ಥ ಪ್ರಯತ್ನವೆಂದು ಭಾವಿಸಬೇಕಾಗಿಲ್ಲ. ವ್ಯಕ್ತಿಯೊಬ್ಬ ತನ್ನ ವೇಳೆಯನ್ನು ವಿವೇಕಶೂನ್ಯವಾಗಿ ವ್ಯಯಿಸಿರಬಹುದು. ಆದರೆ ಈಗಾಗಲೇ ಸಮಯ ಖರ್ಚಾಗಿದೆ ಎಂಬುದನ್ನು ಮರೆಯಬಾರದು. ಹೊಸತೇನನ್ನಾದರೂ ಮಾಡುವುದೆಂದರೆ ಹವ್ಯಾಸಗಳನ್ನು ಬದಲಿಸಿಕೊಳ್ಳುವುದೆಂದೇ ಅರ್ಥ. ಬದಲಾವಣೆಯ ಗುಟ್ಟಿರುವುದೇ ಹವ್ಯಾಸಗಳ ಮೊಟ್ಟೆಯಲ್ಲಿ! ಇದಕ್ಕೆ ತ್ಯಾಗ ಹಾಗೂ ಕಾರ್ಯರೂಪಕ್ಕಿಳಿಸುವ ತೀವ್ರ, ತುಡಿತ ಅತ್ಯಗತ್ಯ. ಬೂಟಾಟಿಕೆಯನ್ನು ಬದಿಗೊತ್ತಿ ನೀವು ಸುಮ್ಮನೆ ಪ್ರಾರಂಭಿಸಿ, ಸಾಕು.

ಮೇಲ್ಕಾಣಸಿದ ಸಮಯವನ್ನು ಬಳಸುವ ವಿಧಾನಕ್ಕೆ ಬರುವ ಮುಂಚೆ ನಿಮಗೆ ಕೊನೆಯ ಸಲಹೆಯೊಂದನ್ನು ನೀಡುತ್ತಿದ್ದೇನೆ: ಒಂದೂವರೆ ಗಂಟೆಯ ಕೆಲಸಕ್ಕೆ ಅದಕ್ಕಿಂತ ತುಸು ಹೆಚ್ಚು ವೇಳೆಯನ್ನು ತೆಗೆದಿರಿಸಿರಿ. ಆಕಸ್ಮಿಕಗಳ ಸಾಧ್ಯತೆ, ಮನುಷ್ಯ ಸ್ವಭಾವ ನಿಮ್ಮ ಗಮನದಲ್ಲಿರಲಿ. ತೊಂಬತ್ತು ನಿಮಿಷಗಳ ನಿಮ್ಮ ಕಾರ್ಯಕ್ಕೆ 9ರಿಂದ 11-30ರ ವರೆಗೆ ತೊಡಗಿಸಿಕೊಂಡರೆ ಸರಿಹೋಗುತ್ತದೆ.

### ಮನಸ್ಸಿನ ನಿಗ್ರಹ

ಕೆಲವರು ಚಿಂತನೆಗಳ ಮೇಲೆ ನಿಯಂತ್ರಣ ಅಸಾಧ್ಯವೆಂದು ಭಾವಿಸುತ್ತಾರೆ. ಆದರೆ ಇದು ನಿಜವಲ್ಲ; ಚಿಂತನೆಯ ಯಂತ್ರದ ಮೇಲೆ ನಿಯಂತ್ರಣ ಹೊಂದಲು ಸಾಧ್ಯವಿದೆ. ಮಿದುಳಿಗೆ ಅದರ ಕರ್ತವ್ಯಗಳ ಬಗ್ಗೆ ಆದೇಶ ನೀಡಿ ವಿಧೇಯತೆಯನ್ನು ಕಲಿಸದಿದ್ದರೆ (ಏಕಾಗ್ರತೆಯ ಶಕ್ತಿ ಸಿದ್ಧಿಸದಿದ್ದರೆ) ನಿಜವಾದ ಜೀವನವೇ ಸಾಧ್ಯವಾಗದು. ಅಂತೆಯೇ ಮಿದುಳನ್ನು ಸರಿದಾರಿಯಲ್ಲಿ ಹರಿಯಬಿಡುವುದು ದಿನದ ಮೊದಲ ಆದ್ಯತೆಯಾಗಬೇಕೆಂಬುದು ನನ್ನ ಅನ್ನಿಸಿಕೆ. ಅದಕ್ಕೆಂದೇ ನೀವು ಹೊಸಿಲು ದಾಟಿದ ಘಳಿಗೆಯಿಂದ ಹಿಡಿದು ಮತ್ತೆ ಮನೆಯ ಕರೆಗಂಟೆ ಬಾರಿಸುವವರೆಗಿನ

ಅವಧಿಯನ್ನು ಇದಕ್ಕಾಗಿ ಮೀಸಲಿರಿಸಿದ್ದೇನೆ.

''ಹ್ಞಾಂ...ಏನೆಂದಿರಿ? ಬೀದಿಯಲ್ಲಿ, ರೈಲಿನಲ್ಲಿ ನಾನು ನನ್ನ ಮನಸ್ಸನ್ನು ಪಳಗಿಸಬೇಕೆ?'' ನನಗೆ ಗೊತ್ತು. ನೀವು ಹೀಗೇ ಕೇಳುತ್ತೀರೆಂದು.

ಹೌದು ಸ್ವಾಮಿ, ನೀವು ಹೇಳಿದ್ದು ನಿಜ. ಹಾಗೆ ಮಾಡಬೇಕಾಗುತ್ತದೆ. ಇದಕ್ಕಾಗಿ ನಿಮಗೆ ಪುಸ್ತಕವನ್ನೊಳಗೊಂಡು ಯಾವ ಸಲಕರಣೆಯೂ ಬೇಕಿಲ್ಲ. ಆದಾಗ್ಯೂ ಸಂಗತಿ ಸುಲಭವಲ್ಲವೆಂಬುದೇನೋ ಸರಿ (ಯಾವುದೂ ಸರಳವಾಗಿ ಸರಿದುಬರದು).

ನೀವು ಮನೆಯಿಂದ ಹೊರಬಿದ್ದ ತಕ್ಷಣ ನಿಮ್ಮ ಮನಸ್ಸನ್ನು ಯಾವುದಾದರೊಂದು ವಿಷಯದ ಮೇಲೆ (ಆರಂಭಕ್ಕೆ ಯಾವ ವಿಷಯವಾದರೂ ಆದೀತು) ಕೇಂದ್ರೀಕರಿಸಿರಿ. ನೀವು ಹತ್ತಾರು ಹೆಜ್ಜೆ ಸಾಗುವಷ್ಟರಲ್ಲಿ ನಿಮ್ಮ ಮನಸ್ಸು ನಿಮ್ಮ ಕಣ್ಗಾವಲನ್ನು ವಂಚಿಸಿ ಬೇರೊಂದು ವಿಷಯದ ಸುತ್ತ ಗಿರಿಕಿ ಹೊಡೆಯತೊಡಗುತ್ತದಲ್ಲವೆ? ಮನಸ್ಸಿನ ಕಾಲರ್‌ಪಟ್ಟಿಯನ್ನು ಹಿಡಿದು ಮತ್ತೆ ಮೊದಲಿನ ಸ್ಥಾನಕ್ಕೆ ಎಳೆದುತನ್ನಿ. ನೀವು ರೈಲು ನಿಲ್ದಾಣ ತಲುಪುವಷ್ಟರಲ್ಲಿ ಸುಮಾರು ನಲವತ್ತುಬಾರಿ ಹೀಗೆ ಹಿಡಿದುತರಬೇಕಾಗಬಹುದು. ಹಾಗೆಂದು ನಿರಾಶೆಯ ನಿಟ್ಟುಸಿರು ಜಾರಿಸಬೇಡಿ. ನೀವು ಪ್ರಯತ್ನಶೀಲರಾಗಿರುವವರೆಗೆ ಸೋಲು ನಿಮ್ಮ ಬಳಿ ಸುಳಿಯಲಾರದು. ನಿಮ್ಮ ಮನಸ್ಸು ಏಕಾಗ್ರತೆಗೆ ಒಗ್ಗದೆಂದು ಬಗೆಯುವುದು ಶೋಂಬೇರಿತನದ ಲಕ್ಷಣ.

ಒಂದು ಮುಂಜಾನೆ ನಿಮಗೆ ಒಂದು ಪತ್ರ ತಲುಪಿ ಮನಸ್ಸನ್ನು ಕದಡುತ್ತದೆಂದುಕೊಳ್ಳಿ. ಅತ್ಯಂತ ಮುತುವರ್ಜಿಯಿಂದ ಬರೆದ ಉತ್ತರವನ್ನು ಆ ಪತ್ರ ಅಪೇಕ್ಷಿಸುತ್ತದೆ. ನೀವು ಅಂದು ಕಚೇರಿ ಮುಟ್ಟುವವರಗೆ ಅದೇ ವಿಷಯದ ಕುರಿತಾಗಿ ಯೋಚಿಸಿ ಉತ್ತರ ಬರೆಯುವ ಸಿದ್ಧತೆಯನ್ನು ನಡೆಸುತ್ತೀರಿ. ಕಚೇರಿಗೆ ಬಂದ ಕೂಡಲೇ ಕೂತು ಉತ್ತರ ಬರೆಯುವಷ್ಟು ಚಿಂತನೆಯನ್ನು ನಿಮ್ಮ ಮನಸ್ಸು ಹಾದಿಯಲ್ಲಿಯೇ ಮಾಡಿರುತ್ತದೆ. ಇದು ಹೇಗೆ ಸಾಧ್ಯವಾಯ್ತು? ಸಾಂದರ್ಭಿಕ ಒತ್ತಡವು ನೀವು ನಿಮ್ಮ ಮನಸ್ಸಿನ ಮೇಲೆ ಸರ್ವಾಧಿಕಾರ ಸ್ಥಾಪಿಸುವಂತೆ ಪ್ರಚೋದಿಸಿದ್ದೇ ಇದಕ್ಕೆ ಕಾರಣ. ನೀವು ಈ ಕೆಲಸ ಆಗಲೇಬೇಕೆಂದು ಕಟ್ಟಪ್ಪಣೆ ಮಾಡಿದಿರಿ. ಅದು ಆಯ್ತು.

ಏಕಾಗ್ರತೆಯ ನಿರಂತರ ತಾಲೀಮಿನಿಂದ ನೀವು ಯಾವ ಸ್ಥಳದಲ್ಲಿದ್ದರೂ ಯಾವ ವೇಳೆಯಲ್ಲಾದರೂ ಮನಸ್ಸಿನ ಮೇಲೆ ಸವಾರಿ ಮಾಡಬಹುದಾಗಿದೆ.

ಈಗ ನೀವು ನಿಮ್ಮೊಳಗೆಯೇ ಹೀಗೆ ಅಂದುಕೊಳ್ಳುತ್ತಿರಬಹುದು:

''ಈ ಮನುಷ್ಯ ಆರಂಭದಲ್ಲಿ ನನ್ನ ಬಗ್ಗೆಯೇ ಆಸಕ್ತಿ ತೋರಿಸಿದ. ಆದರೆ ರೈಲಿನಲ್ಲಿ ಯೋಚಿಸುವುದು, ಏಕಾಗ್ರತೆ ಸಾಧಿಸುವುದು ಮುಂತಾಗಿ ಈತ ಹೇಳುವುದೆಲ್ಲ ನನಗೆ ಅನ್ವಯಿಸುವುದೇ ಇಲ್ಲ. ಕೆಲವು ಸಾಮಾನ್ಯ ಜನರಿಗೆ ಸರಿಹೊಂದಬಹುದಾದ ಈ ಮಾತುಗಳು ನನಗೆ ಸಂಬಂಧಪಡುವುದಿಲ್ಲ.''

ಮತ್ತೊಮ್ಮೆ ಅಂತರಾಳದಿಂದ ಹೇಳುತ್ತಿದ್ದೇನೆ: ಇದೆಲ್ಲ ನಿನಗಾಗಿಯೇ. ನಿಜಕ್ಕೂ ನಾನು ದೃಷ್ಟಿಯಲ್ಲಿರಿಸಿಕೊಂಡಿರುವ ವ್ಯಕ್ತಿ ನೀನೆ.

ನಿಮ್ಮ ತಲೆಯೊಳಗೆ ಇದುವರೆಗೂ ತುಂಬಿತುಳುಕಿಸಿರುವ 'ಅಮೂಲ್ಯ ಸಲಹೆ'ಗಳನ್ನೆಲ್ಲ ತೆಗೆದು ಬೀಸಾಡಿಬಿಡಿ. ಹಾಗೆ ಮಾಡಲು ಪ್ರಯತ್ನಿಸಿ. ಮನಸ್ಸನ್ನು ಮುಷ್ಟಿಯಲ್ಲಿರಿಸಿಕೊಳ್ಳುವ ಮೂಲಕ ಬದುಕಿನ ಅರ್ಧದಷ್ಟು ವ್ಯಾಧಿಗಳನ್ನು (ವಿಶೇಷವಾಗಿ ಚಿಂತೆ ಎಂಬ ಭಯಾನಕ ಕಾಯಿಲೆಯನ್ನು) ಗುಣಪಡಿಸಬಹುದು.

### ತನ್ನತನದ ಅರಿವು

ಮನಸ್ಸನ್ನು ಏಕಾಗ್ರಗೊಳಿಸುವುದು ತೀರಾ ಆರಂಭದ ಹೆಜ್ಜೆ ಮಾತ್ರ - ಭಾಷೆಯಲ್ಲಿ ಮೂಲಾಕ್ಷರಗಳಿದ್ದಂತೆ. ಅತಿ ಅವಿಧೇಯ



## ಅನುಕ್ಷಣವೂ ಅರ್ಥಪೂರ್ಣ ಬದುಕು

ಭಾಗದ ಮೇಲೆ ಸಂಪೂರ್ಣ ಹಿಡಿತ ಸಾಧಿಸಿದ ತರುವಾಯ ಅದರ ಹೆಗಲಿಗೆ ಕ್ರಿಯಾಶೀಲತೆಯ ನೊಗ ಕಟ್ಟಬೇಕಾಗುತ್ತದೆ. ಇದನ್ನು ಪ್ರಾಥಮಿಕ ಅಧ್ಯಯನವೊಂದು ಸೂಚಿಸುತ್ತದೆ.

ಈಗ ಈ ಪ್ರಾಥಮಿಕ ಅಧ್ಯಯನವೆಂಥದು ಎಂಬ ಪ್ರಶ್ನೆಯನ್ನೆತ್ತಿಕೊಳ್ಳುವುದು ಬೇಡ. ಇದು ತನ್ನ ಕುರಿತು ತಾನೇ ಮಾಡಿದ ಅಧ್ಯಯನ. ವಿಪರೀತ ಬಳಕೆಯಿಂದ ಈ ಮಾತುಗಳು ಎಷ್ಟೊಂದು ಹಳಸಲಾಗಿವೆಯೆಂದರೆ ನನಗೆ ಮತ್ತೆ ಬರೆಯಲು ಹಿಂಜರಿಕೆಯುಂಟಾಗುತ್ತಿದೆ. ಆದರೂ ಇವನ್ನು ಕ್ರಿಯೆಗಿಳಿಸಲು ಅತಿಯಾವ ಜಾಣ್ಮೆ ಏಕೆ ಬೇಕೆಂದು ನನಗೆ ತಿಳಿಯುತ್ತಿಲ್ಲ. ಸದುದ್ದೇಶದ ಸಾಮಾನ್ಯ ಮನುಷ್ಯನ ಬದುಕಿನಲ್ಲಿ ಇವತ್ತಿನ ಬಹುಮುಖ್ಯ ಕೊರತೆಯೆಂದರೆ ಚಿಂತನಶೀಲ ಮೂಡು ಎಂಬುದು ಮಾತ್ರ ನನಗೆ ಮನವರಿಕೆಯಾಗಿದೆ.

ನಾವು ಚಿಂತಿಸುವುದೇ ಇಲ್ಲ. ಅಂದರೆ ನಾವು ನಿಜಕ್ಕೂ ಮುಖ್ಯವಾದ ಸಂಗತಿಗಳ ಬಗ್ಗೆ; ಸಂತಸ ಕದಡುವ ಸಮಸ್ಯೆಗಳ ಬಗ್ಗೆ; ಬದುಕು ಚಲಿಸುತ್ತಿರುವ ದಿಕ್ಕಿನ ಕುರಿತು; ಜೀವನ ನಮಗೆ ಕೊಡುತ್ತಿರುವುದೇನೆಂದು; ನಮ್ಮ ಕ್ರಿಯೆಯನ್ನು ನಿರ್ಧರಿಸುವ ಅಥವಾ ನಿರ್ಧರಿಸದಿರುವ ಕಾರಣಗಳ ಬಗ್ಗೆ; ನಮ್ಮ ತತ್ವ ಹಾಗೂ ನಡತೆಯ ಸಂಬಂಧದ ಬಗ್ಗೆ ಚಿಂತಿಸುತ್ತಿಲ್ಲ. ದೈಹಿಕ ಅಥವಾ ಮಾನಸಿಕ ಸಂತೃಪ್ತಿಯಿಂದ ಸಂತೋಷ ಚಿಮ್ಮುತ್ತದೆಂಬುದು ಸುಳ್ಳು. ಸಂತೋಷ ಸಾಕಾರಗೊಳ್ಳುವುದು ತಾರ್ಕಿಕ ಶಕ್ತಿಯ ಬೆಳವಣಿಗೆ ಹಾಗೂ ತತ್ವಗಳೊಂದಿಗಿನ ನಡತೆಯ ಹೊಂದಾಣಿಕೆಯಿಂದ.

ಕೆಲವು ನಿರ್ದಿಷ್ಟ ಸಿದ್ಧಾಂತಗಳನ್ನು ನಿಮ್ಮೊಳಗೆ ತುಂಬುತ್ತಿದ್ದೇನೆಂದು ಭಯಪಡಬೇಡಿ. ನಾನು ನಿಮಗೆ ಮನಗಾಣಿಸಲಿಚ್ಛಿಸುವುದಿಷ್ಟೆ. ನಂಬಿದ ತತ್ವಗಳೊಂದಿಗೆ ನಡತೆಯ ಸಹಯೋಗ ಇಲ್ಲದಿದ್ದರೆ ಅದು ನೀಚ ಬದುಕೆನ್ನಿಸಿಕೊಳ್ಳುತ್ತದೆ. ಅಲ್ಲದೆ ದಿನನಿತ್ಯದ ಪರಿಶೀಲನೆ, ಚಿಂತನೆ ಮತ್ತು ಗಟ್ಟಿ ನಿರ್ಧಾರಗಳಿಂದ ಮಾತ್ರ ತತ್ವ-ನಡತೆಗಳ ಒಡಂಬಡಿಕೆ ಸಾಧಿಸಲು ಸಾಧ್ಯ. ಚಿಂತನೆ ಎಷ್ಟು ಕ್ಷೀಣವಾಗಿರುತ್ತದೋ ಅಷ್ಟೇ ತರ್ಕಹೀನರಾಗಿರುತ್ತೇವೆ ನಾವು.

ಹೊಟೇಲ್‌ನಲ್ಲಿ ತರಿಸಿದ ತಿಂಡಿ ಹಸಿಬಿಸಿ ಬೆಂದಿದ್ದರೆ ನೀವು ಏನು ಮಾಡುತ್ತೀರಿ? ತಿಂಡಿಯ ತಟ್ಟೆಗಳನ್ನು ತಂದಿಟ್ಟ ಮಾಣಿಯೊಂದಿಗೆ ಜಗಳ ಕಾಯುವಿರಿ ತಾನೆ? ಹಾಗೆ ಮಾಡುವ ಬದಲು ನಿಮ್ಮೊಳಗಿನ 'ತರ್ಕ'ಳನ್ನು 'ಮನಸ್ಸಿ'ನ ಕೋಣೆಗೆ ಕಳುಹಿಸಿ ಆಕೆಯ ಸಲಹೆಯನ್ನು ಕೇಳಿರಿ. ಆಕೆ ಉತ್ತರಿಸುತ್ತಾಳೆ: ತಿಂಡಿಯನ್ನು ತಯಾರಿಸಿದವನು ಮಾಣಿಯಲ್ಲ. ಅಲ್ಲದೆ ಆತನಿಗೆ ತಿಂಡಿಯ ತಯಾರಿಕೆಯ ಮೇಲೆ ಯಾವ ನಿಯಂತ್ರಣವೂ ಇರುವುದಿಲ್ಲ. ಅಷ್ಟಕ್ಕೂ ನೀವು ಅವನನ್ನೇ ನಿಂದನೆಗೆ ಗುರಿಯಾಗಿಸಬಯಸಿದರೆ ಅದರಿಂದ ನೀವೇನೂ ಸಾಧಿಸಿದಂತಾಗದು. ಬದಲಿಗೆ ನಿಮ್ಮ ಘನತೆಗೆ ಕುಂದು ಬರುತ್ತದೆ.

ಹೀಗೆ ನೀವು ತರ್ಕದೊಂದಿಗೆ ಸಾಧಿಸಿದ ಸಂಪರ್ಕದ (ಇದಕ್ಕೆ ಆಕೆ ಯಾವ ಶುಲ್ಕವನ್ನೂ

ವಿಧಿಸುವುದಿಲ್ಲ) ಪರಿಣಾಮವೆಂದರೆ, ಇನ್ನೊಮ್ಮೆ ಇಂಥ ಸಂದರ್ಭದಲ್ಲಿ ನೀವು ಮಾಣಿಯನ್ನು ವಿಶ್ವಾಸಕ್ಕೆ ತೆಗೆದುಕೊಂಡು ಸಂಯಮದಿಂದ ವರ್ತಿಸಿ ಬೇರೆ ತಿಂಡಿ ತರಲು ಆದೇಶಿಸುತ್ತೀರಿ. ಹೀಗೆ ಮಾಡಿದಾಗ ಖಂಡಿತವಾಗಿಯೂ ಉತ್ತಮ ಫಲ ಲಭಿಸುತ್ತದೆ.

ಬದುಕಿನ ಧೋರಣೆಯನ್ನು ರೂಪಿಸಿಕೊಳ್ಳಲು, ನಡತೆಯನ್ನು ರೂಢಿಸಿಕೊಳ್ಳಲು ಗ್ರಂಥಗಳಿಂದ ಬಹಳಷ್ಟು ಪ್ರಯೋಜನ ಪಡೆಯಬಹುದು. ಆದಾಗ್ಯೂ ವ್ಯಕ್ತಿಯೊಬ್ಬ ತಾನು ನಿನ್ನೆ ಏನು ಮಾಡಿದೆ, ಇಂದು-ನಾಳೆಯ ನಡೆಯೆತ್ತ ಮುಂತಾಗಿ ವಸ್ತುನಿಷ್ಠ ಸ್ವವಿಮರ್ಶೆ ಬೆಳೆಸಿಕೊಂಡು ಈ ಬಗ್ಗೆ ನಿತ್ಯವೂ ಮುಕ್ತವಾಗಿ ಪ್ರಾಮಾಣಿಕವಾಗಿ ಅವಲೋಕಿಸುವುದಕ್ಕೆ ಯಾವ ಪುಸ್ತಕವೂ ಸರಿಸಾಟಿಯಾಗಲಾರದು.

ಇಂಥ ಪ್ರಮುಖ ಸಂಗತಿಗಾಗಿ ಯಾವ ಸಮಯವನ್ನು ನಿಗದಿಪಡಿಸುವುದು? ಸಂಜೆ ಒಬ್ಬೊಂಟಿಯಾಗಿ ಮನೆಯ ಕಡೆ ಪಯಣಿಸುವ ಸಂದರ್ಭವೇ ಇದಕ್ಕೆ ಸೂಕ್ತವೆನ್ನಿಸುತ್ತದೆ. ದೈನಂದಿನ ದುಡಿಮೆಯನ್ನು ಮುಗಿಸಿದ ನಂತರ ಸಹಜವಾಗಿಯೇ ಚಿಂತನಶೀಲ ಮೂಡು ಉಂಟಾಗಿರುತ್ತದೆ. ಒಂದು ವೇಳೆ ನೀವು ಇಂಥ ಮೂಲಭೂತ ಅಗತ್ಯದೆಡೆ ಲಕ್ಷ್ಯವಹಿಸುವ ಬದಲು ವೃತ್ತಪತ್ರಿಕೆ ಓದುವುದನ್ನೇ ಆಯ್ದುಕೊಳ್ಳುವುದಾದರೆ (ಪತ್ರಿಕೆಯನ್ನು ರಾತ್ರಿ ಊಟಕ್ಕೆ ಕುಳಿತಾಗ ಓದಬಹುದು) ನಾನೇನೂ ಹೇಳಲಿಚ್ಛಿಸುವುದಿಲ್ಲ. ಆದರೆ ಈ ಬಗ್ಗೆ ದಿನದ ಯಾವುದಾದರೊಂದು ಸಮಯದಲ್ಲಿ ಲಕ್ಷ್ಯವಹಿಸುವುದಂತೂ ಅತ್ಯಗತ್ಯ. ಈಗ ಸಂಜೆಯ ವೇಳೆಯ ಸದುಪಯೋಗದತ್ತ ಬರೋಣ.

### ಕಾರ್ಯದ ಆಯ್ಕೆ

ಅನೇಕ ಜನ ಸಂಜೆಯ ಸಮಯದಲ್ಲಿ ನಿಷ್ಕ್ರಿಯರಾಗಿರಲು ಕಾರಣವೇನೆಂದರೆ ತಮ್ಮ ಅಭಿರುಚಿಗೆ ಸರಿಹೊಂದದ ಸಾಹಿತ್ಯವನ್ನು ಓದುವುದರ ಹೊರತಾಗಿ ಆಗ ತೊಡಗಿಸಿಕೊಳ್ಳಲು ಬೇರೇನೂ ಇಲ್ಲವೆಂದೇ ಅವರು ಭಾವಿಸುವುದು. ಇದೊಂದು ದೊಡ್ಡ ತಪ್ಪುಕಲ್ಪನೆ. ರೂಢಿಸಿಕೊಳ್ಳಬಯಸುವವರಿಗೆ ಅದ್ಭುತ ಫಲಿತಾಂಶ ನೀಡಬಲ್ಲ ಅಸಂಖ್ಯ ಜ್ಞಾನಶಾಖೆಗಳು (ಸಾಹಿತ್ಯದ ಹೊರತಾಗಿಯೂ) ಸಿಗುತ್ತವೆ. ಉದಾಹರಣೆಗೆ ಸಂಗೀತವನ್ನು ಆಸ್ವಾದಿಸಬಹುದು. ನಿಮಗೆ ಪಿಯಾನೋ ಅಥವಾ ಪಿಟೀಲು ಬಾರಿಸಲು ಬರುವುದಿಲ್ಲವೆಂದು ಯೋಚಿಸಬೇಕಿಲ್ಲ. ಏಕೆಂದರೆ ನಿಮಗೆ ವಾದ್ಯ ನುಡಿಸಲು ಬಾರದಿರುವುದು ನಿಮ್ಮ ಸಂಗೀತಾಸಕ್ತಿಯನ್ನು ಉಡುಗಿಸಲಾರದು.

ಹಲವಾರು ವಿಜಾತಿ ವಾದ್ಯಗಳ ಸಂಗಮದಿಂದ ಹೊರಡುವ ಗೊಂದಲವೇ 'ಆರ್ಕೆಸ್ಟ್ರಾ' ಎಂದು ನಿಮಗನ್ನಿಸಬಹುದು. ಅಂತೆಯೇ ಸಂಗೀತವನ್ನು ವಿವರವಾಗಿ ಸೂಕ್ಷ್ಮವಾಗಿ ಆಲಿಸುವ ಗೋಜಿಗೆ ನೀವು ಹೋಗುವುದಿಲ್ಲ. ಏಕೆಂದರೆ ನಿಮ್ಮ ಶ್ರವಣಾಂಗಗಳಿಗೆ ನೀವೆಂದೂ ಸೂಕ್ಷ್ಮ ಆಲಿಸುವಿಕೆಯ ತರಬೇತಿ ನೀಡಿರುವುದಿಲ್ಲ. ನಿಮಗೆ ಯಾವುದೋ ಒಂದು ಹಾಡು ಬಹುವಾಗಿ ಇಷ್ಟವಾಗಿದೆಯೆಂದುಕೊಳ್ಳಿ. ಆದರೆ ಆ ಹಾಡಿನೊಂದಿಗೆ ಬಳಸಿದ ವಾದ್ಯಗಳಾವುವೆಂದು ಕೇಳಿದರೆ ನಿಮಗೆ ಉತ್ತರಿಸಲಾಗದು; ಆ ಹಾಡು 'ಇಂಪಾಗಿದೆ' ಎಂದಷ್ಟೇ ನೀವು ಉತ್ತರಿಸಬಹುದು.

ನೀವೊಂದು ವೇಳೆ 'ಸಂಗೀತವನ್ನು ಆಲಿಸುವ ವಿಧಾನ'ದ ಬಗೆಗಿನ ಹಲವು ಪುಸ್ತಕಗಳನ್ನು ಅಭ್ಯಾಸ ಮಾಡಿದರೆ ನಿಮ್ಮ ಸಂಗೀತಾಸಕ್ತಿ ತೀಕ್ಷ್ಣಗೊಳ್ಳುತ್ತಾ ಸಾಗುತ್ತದೆ. ಆಗ ಆರ್ಕೆಸ್ಟ್ರಾ 'ಗೊಂದಲದ ಮೊತ್ತ'ವಾಗಿ ತೋರದೆ, ಪ್ರತಿಯೊಂದೂ ಅದರದೇ ಆದ ವೈಶಿಷ್ಟ್ಯವನ್ನು ಹೊಂದಿದ ಹಲವಾರು ವಾದ್ಯಗಳ ಸುಶ್ರಾವ್ಯ ಮಿಶ್ರಣವೆಂಬುದರ ಅರಿವಾಗುತ್ತದೆ. ಹೀಗಾದಾಗ ನೀವೇ ವಾದ್ಯಗಳ ಬೆನ್ನತ್ತಿ ಹೋಗಿ ಅವುಗಳಿಗೆ ಕಿವಿಗೊಡುತ್ತೀರಿ; ವಾದ್ಯಗಳಲ್ಲಿಯ



## ಅನುಕ್ಷಣವೂ ಅರ್ಥಪೂರ್ಣ ಬದುಕು

ವ್ಯತ್ಯಾಸ, ವೈವಿಧ್ಯ, ವೈಶಿಷ್ಟ್ಯಗಳು ನಿಮ್ಮ ಅರಿವಿನ ಪರಿಧಿ ಸೇರುತ್ತವೆ. ಈ ಬಾರಿ ಸಂಗೀತಗೋಷ್ಠಿಗೆ ಹೋದಾಗ ನೀವು ಮುಂಚಿನಂತೆ ನಿರ್ಲಿಪ್ತವಾಗಿ ಕೂಡದೆ ಸಜೀವವಾಗಿ ಸ್ಪಂದಿಸುತ್ತೀರಿ.

ಇಷ್ಟಾಗಿಯೂ ನೀವು, ''ನಾನು ಅಪ್ಪಟ ಸಂಗೀತ ದ್ವೇಷಿ'' ಎಂದು ಹೇಳಬಹುದು. ಹಾಗೆಂದು ನಾನು ನಿಮ್ಮನ್ನು ಕಡೆಗಾಣಿಸಲಾರೆ.

ಸಂಗೀತಕ್ಕೆ ಯಾವುದು ಅನ್ವಯಿಸುವುದೋ ಅದು ಇತರ ಕಲಾಪ್ರಕಾರಗಳಿಗೂ ಅನ್ವಯಿಸುತ್ತದೆ. ಉಳಿದ ಕಲಾ ಪ್ರಕಾರಗಳ ಜ್ಞಾನವನ್ನು ವ್ಯವಸ್ಥಿತವಾಗಿ ಹಿಗ್ಗಿಸಿಕೊಳ್ಳಲೋಸ್ಕರ 'ಚಿತ್ರಗಳನ್ನು ನೋಡುವ ಬಗೆ', 'ವಾಸ್ತುಶಿಲ್ಪಗಳ ಅವಲೋಕನ' ಮುಂತಾದ ಪುಸ್ತಕಗಳನ್ನು ಹೆಸರಿಸಬಹುದು. ಇವೆಲ್ಲ ಆರಂಭಕ್ಕೆ ಮಾತ್ರ ಎಂಬುದನ್ನು ಮರೆಯಬೇಡಿ.

''ನಾನು ಎಲ್ಲ ಕಲಾ ಪ್ರಕಾರಗಳನ್ನೂ ದ್ವೇಷಿಸುತ್ತೇನೆ'' - ನೀವು ಹೀಗೂ ಅಭಿಪ್ರಾಯಿಸಬಹುದು. ಪ್ರಿಯರೇ, ನಿಮ್ಮನ್ನು ನಾನು ಇನ್ನೂ ಹೆಚ್ಚೆಚ್ಚು ಗೌರವಿಸುತ್ತೇನೆ. ಇರಲಿ, ನಿಮ್ಮ ಪ್ರಕರಣವನ್ನು ಅನಂತರ - ಸಾಹಿತ್ಯಕ್ಕೆ ಬರುವ ಮುಂಚೆ - ಕೈಗೆತ್ತಿಕೊಳ್ಳುವೆ.

### ನಿರಂತರ ಬದಲಾವಣೆ

ಕಲೆ ಉನ್ನತವಾದುದೇನೋ ನಿಜ; ಆದರೆ ಅದು ಎಲ್ಲಕ್ಕಿಂತಲೂ ಮಿಗಿಲಾದುದೇನಲ್ಲ. ತಿಳಿವಳಿಕೆಗಳಲ್ಲಿಯೇ ಅತ್ಯಂತ ಪ್ರಮುಖವಾದುದೆಂದರೆ ನಿರಂತರವಾದ ಕಾರ್ಯಕಾರಣದ ಗ್ರಹಿಕೆ.

ಕಳ್ಳತನಕ್ಕೆ ಎಳಸುವ ಮನಸ್ಸಿನ ಹಿನ್ನೆಲೆಯಲ್ಲಿ ಆತನ ಪರಿಸರ ಹಾಗೂ ವಂಶಾವಳಿ ಕೆಲಸ ಮಾಡಿರುತ್ತದೆಂದು ಯೋಚಿಸುವುದೇನೋ ಸರಿ. ಅದಕ್ಕೆ ವೈಜ್ಞಾನಿಕ ವಿವರಣೆಯೂ ಸಿಗುತ್ತದೆ. ಆದರೆ ನಮ್ಮದೇ ವಸ್ತುವನ್ನು ಕಳೆದುಕೊಳ್ಳುವುದು ಎಷ್ಟೊಂದು ನೋವಿನ ಸಂಗತಿಯಲ್ಲವೆ? ಮನಸ್ಸನ್ನು ಹುಳಿಯಾಗಿಸಿಕೊಳ್ಳುವುದು ತರವಲ್ಲವೆಂಬ ವೇದಾಂತಕ್ಕೆ ಅಂಟಿಕೊಂಡು ಕಳೆದುಕೊಂಡ ವಸ್ತುವನ್ನು ಮನಸ್ಸಿಲ್ಲದ ಮನಸ್ಸಿನಿಂದಲೇ ಖರೀದಿಸುತ್ತೇವೆ. ಬದುಕಿನ ವೈಚಿತ್ರ್ಯದಿಂದ ಆಘಾತಕ್ಕೊಳಗಾಗಿ ಅನೇಕರು ಸೃಷ್ಟಿಸಿಕೊಳ್ಳುವ ಅಸಂಗತತೆ ಕಾರ್ಯಕಾರಣದ ಅಭ್ಯಾಸದಿಂದ ನಶಿಸುತ್ತದೆ. ಮನುಷ್ಯ ಸ್ವಭಾವವೆನ್ನುವುದು ಅನ್ಯದೇಶವೆಂಬ ಭಾವನೆಯಿಂದಲೇ ಅಲ್ಲಿ ಬಾಳುವವರಿದ್ದಾರೆ. ಆದರೆ ಪ್ರಬುದ್ಧತೆಯ ಸ್ತರ ತಲುಪುತ್ತಿದ್ದಂತೆ ಇಂಥ ಭಾವನೆಯ ಬಗ್ಗೆ ನಾಚಿಕೆಯುಂಟಾಗದಿರದು.

ಕಾರ್ಯಕಾರಣದ ಅಧ್ಯಯನ ಬದುಕಿನ ನೋವಿನಂಶವನ್ನು ತಗ್ಗಿಸಿ ಅದರ ಸೌಂದರ್ಯವನ್ನು ತೆರೆದುತೋರುತ್ತದೆ. ವಿಕಾಸವನ್ನು ಕೇವಲ ಒಂದು ಶಬ್ದವನ್ನಾಗಿ ಪರಿಗಣಿಸಿದಾತನಿಗೆ ಸಮುದ್ರ ಸಹ ಭವ್ಯವಾದ ಏಕತಾನದ ದೃಶ್ಯವಾಗಿ ಕಾಣಿಸೀತು. ಆದರೆ ಕಾರ್ಯಕಾರಣದ ಬಗ್ಗೆ ದೃಢಸಂಚಿಕೆಯುಳ್ಳವನಿಗೆ ಸಮುದ್ರ ಗೋಚರಿಸುವ ಬಗೆಯೇ ಬೇರೆ. ಈತನ ಕಾಣ್ಕೆಯ ಪ್ರಕಾರ, ಭೂಗರ್ಭಶಾಸ್ತ್ರದನ್ವಯ ಮೊನ್ನೆ ನೀರಾವಿಯಾಗಿದ್ದ ಸಮುದ್ರ ನಿನ್ನೆ ಕುದಿ

ಯುತ್ತಿತ್ತು; ನಾಳೆ ಖಂಡಿತವಾಗಿಯೂ ಬರ್ಛಿನ ರೂಪು ಧರಿಸುತ್ತದೆ. ಅದ್ಭುತವಾದ, ಬದಲಾವಣೆಗೆ ಬದ್ಧವಾದ ಸುಂದರ ಬದುಕಿನ ಕುರಿತಾದ ಒಲವು ಕಟ್ಟಿಕೊಡುವ ಸಂತೃಪ್ತಿ ಬೇರಾವುದರಿಂದರಲೂ ಲಭಿಸದು.

ವಾಲ್ಟರ್ ಬೇಗ್‌ಹಾಟ್‌ನ 'ಲೋಂಬಾರ್ಡ್ ಸ್ಟ್ರೀಟ್' ಕೃತಿಯನ್ನು ನೀವು ಓದಿರುವಿರಾ? ಗೆಳೆಯರೇ, ನೀವೊಂದು ವೇಳೆ ಪ್ರತಿ ಮಾರನೇ ದಿನದ ತೊಂಬತ್ತು ನಿಮಿಷಗಳನ್ನು ಇದಕ್ಕಾಗಿ ತೆಗೆದಿರಿಸುವಿರಾದರೆ (ಆರಂಭದ ಹಂತವಾಗಿ) ನಿಮ್ಮ ನೌಕರಿಯ ಬಗ್ಗೆ ನಿಮಗೆ ಹೆಮ್ಮೆ ಮೂಳೆತು ಮನುಷ್ಯ ಸ್ವಭಾವ ಹೆಚ್ಚು ನಿಚ್ಚಳವಾಗಿ ಅರ್ಥವಾಗಲು ಸಾಧ್ಯವಾಗುತ್ತದೆ.

ವನ್ಯಜೀವಿಗಳ ವೀಕ್ಷಣೆ ಹಾಗೂ ನಿಸರ್ಗದೊಡಲಿನ ವಿಹಾರದಲ್ಲಿ ನಿಮಗೆ ಅತ್ಯಾಸಕ್ತಿಯಿದೆ. ಅದು ಮನೋಲ್ಲಾಸಕರ ಕವಲೆಂಬುದೂ ನಿಜ. ಆದರೆ ನೀವು ನಗರವೆಂಬ ಕಾರಾಗೃಹದಲ್ಲಿ ಬಂದಿಯಾಗಿಬಿಟ್ಟಿದ್ದೀರಿ. ಪಾತರಗಿತ್ತಿ ಹಿಡಿಯುವ ಬಲೆಯನ್ನು ತೆಗೆದುಕೊಂಡು ನೀವು ನಿಮ್ಮ ಓಣಿಯಲ್ಲೇ ಒಂದಷ್ಟು ದೂರ ನಡೆಯಬಾರದೇಕೆ? ಹೀಗೆ ನೀವು ಹೊರ ಬಂದರೆ ಕೆಲವು ಸಾಮಾನ್ಯ ಚಿಟ್ಟೆಗಳನ್ನೂ ಹಲವು ಅಪರೂಪದ ಪತಂಗಗಳನ್ನೂ ವೀಕ್ಷಿಸಲು ಸಾಧ್ಯವಾಗುತ್ತದೆ. ಸತತ ವೀಕ್ಷಣೆಯಿಂದ ಲಭ್ಯವಾಗುವ ಜ್ಞಾನವನ್ನು ಸಂಯೋಜಿಸಿ ಅದಕ್ಕೊಂದು ರೂಪವನ್ನೂ ಕೊಡಬಹುದು. ಅಂತಿಮವಾಗಿ ಕೆಲ



## ಅನುಕ್ಷಣವೂ ಅರ್ಥಪೂರ್ಣ ಬದುಕು

ವೊಂದರ ಬಗ್ಗೆ ಕೆಲವಷ್ಟನ್ನಾದರೂ ತಿಳಿದಂತಾಗುತ್ತದೆ.

ತುಂಬು ಬದುಕನ್ನು ಸಾಗಿಸಲು ನೀವು ಕಲೆ ಅಥವಾ ಸಾಹಿತ್ಯಕ್ಕೇ ಗಂಟುಬೀಳಬೇಕೆಂದೇನಿಲ್ಲ. ದೈನಂದಿನ ಹವ್ಯಾಸ ಮತ್ತು ಘಟನೆಗಳನ್ನೊಳಗೊಂಡ ವಿಶಾಲ ಕ್ಷೇತ್ರವು ಬದುಕಿನ ಕುತೂಹಲವನ್ನು ತಣಿಸಲು ಕಾಯುತ್ತಿರುತ್ತದೆ. ಇದರ ತಣಿಸುವಿಕೆಯೆಂದರೆ ಹೃದಯವನ್ನು ಅರ್ಥಮಾಡಿಕೊಳ್ಳುವುದೆಂದೇ ಅರ್ಥ.

ನಾನೀಗ 'ಓದುವುದರೆಡೆ ಒಲವುಳ್ಳ' ಸಾಮಾನ್ಯ ಮನುಷ್ಯನ ಪ್ರಕರಣಕ್ಕೆ ಬರುತ್ತೇನೆ.

### ಸ್ಪಂದಿಸುವ ಸಾಹಿತ್ಯ

ಒಂದು ವಾರದಲ್ಲಿ ಮೂರು ಬಾರಿ ಸಿಗುವ ತೊಂಬತ್ತು ನಿಮಿಷಗಳನ್ನು 'ಗಂಭೀರ ಓದಿಗೆ' ವ್ಯಯಿಸುವಂತಿಲ್ಲ. ಏಕೆಂದರೆ, ಕೆಟ್ಟ ಕಾದಂಬರಿಗಳನ್ನು ಓದುವ ಅಗತ್ಯವಿಲ್ಲ ಮತ್ತು ಒಳ್ಳೆಯ ಕಾದಂಬರಿಗಳು ಓದುಗನ ವಿಶೇಷ ಬೌದ್ಧಿಕ ಶ್ರಮವನ್ನು ಬೇಡುವುದಿಲ್ಲ. ಉತ್ತಮ ಕಾದಂಬರಿಗಳು ನಿಮ್ಮನ್ನು ಸುನಾಯಾಸವಾಗಿ ಮುನ್ನುಗ್ಗಿಸಿಕೊಂಡು ಹೋಗಿ ಅಂತ್ಯ ತಲುಪುತ್ತವೆ. ಅತ್ಯುತ್ತಮ ಕಾದಂಬರಿಗಳನ್ನು ಓದಲು ಅತ್ಯಲ್ಪ ಪರಿಶ್ರಮ ಸಾಕು.

ಯೋಜಿತ ಕಾರ್ಯದಲ್ಲಿ ಶ್ರಮ-ಕಾಠಿಣ್ಯದ ಅನುಭವ ಉಂಟಾಗುವುದು ಮಾನಸಿಕ ಸಂಸ್ಕಾರದ ದೃಷ್ಟಿಯಿಂದ ಅತ್ಯಗತ್ಯ. (ಇಂಥದೊಂದು ಗುರಿ ತಲುಪಲು ನಿಮ್ಮೊಳಗಿನ ಒಂದು ಭಾಗ ಉತ್ಸುಕವಾಗಿದ್ದರೆ ಮತ್ತೊಂದು ಪಲಾಯನಕ್ಕೆ ಸಿದ್ಧವಾಗಿರುತ್ತದೆ.) ಈ ಭಾವನೆಯ ಅನುಭವ ಕಾದಂಬರಿಯ ಓದಿನಲ್ಲಿ ಸಾಧ್ಯವಾಗದು.

ಕಲ್ಪನೆಯ ಮೂಸೆಯಿಂದೆದ್ದು ಬರುವ ಕಾವ್ಯ ಸಾಹಿತ್ಯದ ಬೇರೆಲ್ಲ ಪ್ರಕಾರಗಳಿಗಿಂತಲೂ ತೀವ್ರ ಶ್ರಮವನ್ನು ಉಂಟು ಮಾಡುತ್ತದೆ. ಇದೇ ಸಾಹಿತ್ಯದ ಅತ್ಯುನ್ನತ ಪ್ರಕಾರ. ಅತೀವ ದುಃಖದಿಂದ ಹೇಳಬೇಕಾದ ಸಂಗತಿಯೆಂದರೆ ಕಾವ್ಯವನ್ನು ಬಹುಪಾಲು ಜನ ಓದುವುದೇ ಇಲ್ಲ.

ಕಾವ್ಯ ನಿಮಗೆ ಕಬ್ಬಿಣದ ಕಡಲೆ ಎನ್ನಿಸುತ್ತದೆಯೇ? ಹಾಗಾದರೆ ನೀವು ಕಾವ್ಯದ ಸ್ವರೂಪವನ್ನು ವಿವರಿಸುವ ಹ್ಯಾಜ್‌ಲಿಟ್‌ನ ಜನಪ್ರಿಯ ಪ್ರಬಂಧವನ್ನು (Poetry in general) ಓದುವುದರ ಮೂಲಕ ಅಡಿ ಇಡಿ. ಊಟವನ್ನು ಕಡೆಗಣಿಸಿಯಾದರೂ ತಕ್ಷಣವೇ ಯಾವುದಾದರೊಂದು ಕವನವನ್ನು ವಾಚಿಸಬೇಕೆಂಬ ವಾಂಛೆ ಈ ಪ್ರಬಂಧವನ್ನು ಓದಿದಾತನಿಗೆ ಉಂಟಾಗದಿದ್ದರೆ ಆತನ ಮಾನಸಿಕ ಸ್ಥಿತಿಯನ್ನು ಊಹಿಸುವುದು ಕಠಿಣ!

ನೀವು ಕಾವ್ಯಕ್ಕೆ ಬದ್ಧ ವೈರಿಯಾಗಿದ್ದರೆ ನಿಮ್ಮ ಸಹಾಯಕ್ಕೆ ಚರಿತ್ರೆ ಅಥವಾ ತತ್ವಶಾಸ್ತ್ರ ಬರುತ್ತವೆ. ಉದಾಹರಣೆಗಾಗಿ ಹರ್ಬರ್ಟ್ ಸ್ಪೆನ್ಸರನ First principles ತೆಗೆದುಕೊಳ್ಳಿ. ಇದು ಕಾವ್ಯದ ಹೆಗ್ಗಳಿಕೆಗಳೆಡೆ ನಾಜೂಕಿನ ನಗೆ ಬೀರುತ್ತದೆಯೇ ಹೊರತು ಸ್ವೀಕರಿಸಲೊಪ್ಪುವುದಿಲ್ಲ. ಆದರೆ ಇದು ಮನುಷ್ಯನ ಮಿದುಳು ಸೃಜಿಸಬಹುದಾದ ಮಹೋನ್ನತ ಮಾದರಿ ಎಂಬುದು ಸುಳ್ಳಲ್ಲ. ಆರಂಭದ ಹಂತದಲ್ಲಿ ಈ ಕೃತಿ ಸರಿ ಹೊಂದುತ್ತ

ದೆಂದು ನಾನು ಸಲಹೆ ಮಾಡಲಾರೆ. ಆದಾಗ್ಯೂ ಸಾಮಾನ್ಯ ಬುದ್ಧಿವಂತಿಕೆಯುಳ್ಳ ವ್ಯಕ್ತಿಯೊಬ್ಬ ಒಂದು ವರ್ಷದ ಸತತ ಅಭ್ಯಾಸದ ತರುವಾಯ ಚರಿತ್ರೆ ಅಥವಾ ತತ್ವಶಾಸ್ತ್ರದ ಉತ್ಕೃಷ್ಟ ಕೃತಿಗಳನ್ನು ಅರಗಿಸಿಕೊಳ್ಳಲೇಕೆ ಸಾಧ್ಯವಾಗುವುದಿಲ್ಲವೆಂಬುದು ನನಗೆ ಗೊತ್ತಾಗುತ್ತಿಲ್ಲ. ಮಹತ್ತರವಾದ ಕೃತಿಗಳ ಅತಿದೊಡ್ಡ ಅನುಕೂಲವೆಂದರೆ ಅವುಗಳು ಆಶ್ಚರ್ಯಕರ ರೀತಿಯಲ್ಲಿ ಸುಲಭ ಗ್ರಾಹ್ಯವಾಗಿರುವುದು.

ಓದಿನ ಮೂಲಕ ಸ್ವಯಂ ವಿಕಾಸ ಹೊಂದಲು ನಾನು ಎರಡು ಸಾಮಾನ್ಯ ಸಲಹೆಗಳನ್ನು ನೀಡಬಯಸುತ್ತೇನೆ. ಮೊದಲನೆಯದು, ನಿಮ್ಮ ಪ್ರಯತ್ನಗಳ ದಿಕ್ಕು ಹಾಗೂ ವ್ಯಾಪ್ತಿಯನ್ನು ವ್ಯಾಖ್ಯಾನಿಸುವುದು. ನಿಯಮಿತವಾದ ಅವಧಿ ಅಥವಾ ನಿಯಮಿತವಾದ ವಿಷಯ ಅಥವಾ ಒಬ್ಬನೇ ಲೇಖಕನನ್ನು ಆಯ್ದುಕೊಳ್ಳಬೇಕು. ನೀಡಿದ ಅವಧಿಯಲ್ಲಿ ನಿಮ್ಮ ಆಯ್ಕೆಯೊಂದಿಗೆ ನಿಮ್ಮನ್ನು ನೀವೇ ನಿರ್ಬಂಧಿಸಿಕೊಳ್ಳಿ, ಯಾವುದಾದರೊಂದು ವಿಷಯದಲ್ಲಿ ಸಾಧಿಸುವ ಪ್ರಾವೀಣ್ಯ ಸಂತಸದ ಬುಗ್ಗೆಯನ್ನೇ ಚಿಮ್ಮಿಸಬಲ್ಲದು.

ಓದುತ್ತಲೇ ಚಿಂತಿಸಬೇಕೆನ್ನುವುದು ನನ್ನ ಎರಡನೇ ಸಲಹೆ. ತೌಡು ಕುಟ್ಟಿದಂತೆ ಓದುತ್ತಲೇ ಇರುವ ಅನೇಕರನ್ನು ನಾನು ಬಲ್ಲೆ. ಇಂಥವರು ಸಾಹಿತ್ಯದ ಅಕ್ಷರಗಳ ಮೇಲೆ ಕುಳಿತು ವೇಗವಾಗಿ ಸವಾರಿ ಮಾಡುತ್ತಾರೆ. ಅವರ ಒಟ್ಟಾರೆ ಗುರಿಯೆಂದರೆ ಚಲನೆ! ತಾವೆಷ್ಟು ಪುಸ್ತಕಗಳನ್ನು ಓದಿ ಒಟ್ಟಿದ್ದೇವೆಂದು ಲೆಕ್ಕಕೊಡುತ್ತ ಹಿಗ್ಗುತ್ತಾರೆ ಈ ಜನ.

ಕನಿಷ್ಠ 45 ನಿಮಿಷಗಳ ಕಾಲ ನೀವು ಓದುತ್ತಿರುವುದರ ಬಗ್ಗೆ ಎಚ್ಚರಿಕೆಯಿಂದ, ಶ್ರಮಪೂರ್ಣವಾಗಿ ಚಿಂತಿಸದಿದ್ದರೆ ನಿಮ್ಮ ರಾತ್ರಿಯ 90 ನಿಮಿಷಗಳು ವ್ಯರ್ಥಗೊಂಡಂತೆ. ಇದರರ್ಥ ನಿಮ್ಮ ನಡಿಗೆ ನಿಧಾನವಾಗಿರಬೇಕೆಂಬುದು. ನಿಮ್ಮ ಗುರಿಯನ್ನು ಮರೆತುಬಿಡಿ; ಸುತ್ತಲಿನ ಪರಿಸರದ ಬಗ್ಗೆ ಮಾತ್ರ ಯೋಚಿಸಿ; ಕಾಲಕಾಲದ ನಂತರ ನೀವು ಅನಿರೀಕ್ಷಿತವಾಗಿ ಬೆಟ್ಟದ ಮೇಲಿನ ಸುಂದರ ಪಟ್ಟಣದಲ್ಲಿರುವುದನ್ನು ಗಮನಿಸುತ್ತೀರಿ.

### ಅನಿರೀಕ್ಷಿತ ಅಪಾಯದ ಅರಿವು

ಕತ್ತಲ ಮೂಲೆಯಲ್ಲಿ ಕಾದು ಕೂತ ಕೆಲವು ಅಪಾಯಗಳ ಬಗ್ಗೆ ಹೇಳದೆ ಸಮಯದ ಬಳಕೆಯ ಈ ಸೂಚನೆಗಳನ್ನು ಮುಗಿಸಲಾರೆ. ಮೊದಲನೆಯ ಅಪಾಯವೆಂದರೆ ಕೂಪಮಂಡೂಕನಾಗುವುದು. ಇಂಥ ವ್ಯಕ್ತಿ ಅಪಾಥಘಟಿತ ನದ ಮೂರ್ಖನಿದ್ದಂತೆ. ಈತ ತನ್ನ ಪೋಷಾಕಿನ ಬಹುಮುಖ್ಯ ಭಾಗವನ್ನೇ (ಹಾಸ್ಯಪ್ರಜ್ಞೆಯನ್ನು) ಮರೆತು ಸಮಾರಂಭಕ್ಕೆ ಹಾಜರಾಗುತ್ತಾನೆ. ಆತನ ಆಲೋಚನೆ, ಕ್ರಿಯೆಗಳೆಲ್ಲವೂ ತನ್ನ ಮೂಗಿನ ನೇರಕ್ಕೇ ಇರುತ್ತವೆ.

ಆದುದರಿಂದ ಸಮಯದ ಸಂಪೂರ್ಣ ಬಳಕೆಗೆ ಮುಂದಾಗುವವರು ತಮ್ಮ ಖರ್ಚಿಗಿರುವ ವೇಳೆ ಇಡೀಯಾಗಿ ತಮ್ಮದೇ ಹೊರತು ಬೇರೆಯವರದಲ್ಲವೆಂಬುದನ್ನು ನೆನಪಿನಲ್ಲಿಡಬೇಕು. ಅಲ್ಲದೆ ತಾವು ವೇಳೆಯ ಆಯವ್ಯಯಕ್ಕೆ ಬದ್ಧರಾಗುವುದರ ಪೂರ್ವದಲ್ಲಿಯೂ ಹಗಲು-ರಾತ್ರಿಗಳು ನಿರಾತಂಕವಾಗಿ ಘಟಿಸುತ್ತಿದ್ದವೆಂಬುದನ್ನು ಮರೆಯಬಾರದು.

ಮತ್ತೊಂದು ಅಪಾಯವೆಂದರೆ, ಕಾರ್ಯಕ್ರಮವೊಂದಕ್ಕೆ ಗುಲಾಮನಂತೆ ಜೋತುಬೀಳುವುದು. ಕೆಲವರ ಜೀವನ ತಮಗೂ ತಮ್ಮ ಬಂಧುಮಿತ್ರರಿಗೂ ಹೊರೆಯಾಗಿರುತ್ತದೆ. ಇಂಥವರು ಕರ್ತವ್ಯದ ಬಗ್ಗೆ ಗೌರವ ಹೊಂದಿರುವುದೆಂದರೆ ಅದನ್ನು ಪೂಜಿಸುವುದೆಂದು ಭಾವಿಸುವುದೇ ಇದಕ್ಕೆ ಕಾರಣ. ಇನ್ನೊಂದೆಡೆ ಕಾರ್ಯಕ್ರಮವನ್ನು ಅದರ ಪ್ರಾಮುಖ್ಯದೊಂದಿಗೇ ಪರಿಗಣಿಸದಿದ್ದರೆ ತೀರಾ ಸರಳೀಕರಿಸಿದಂತಾಗಿ ಕೊನೆಗೆ ಹಾಸ್ಯಾಸ್ಪದವಾಗಲೂಬಹುದು.

ಅವಸರದ ಪ್ರವೃತ್ತಿ ಬೆಳೆಸಿಕೊಳ್ಳುವುದು

ಕೂಡ ಅಪಾಯಕಾರಿ. ಇದರಿಂದಾಗಿ ಮುಂದೇನು ಮುಂದೇನು ಎಂಬ ಗೀಳು ಅಂಟಿಕೊಳ್ಳಬಹುದು. ಇದಕ್ಕಿರುವ ಒಂದೇ ಒಂದು ಪರಿಹಾರೋಪಾಯವೆಂದರೆ ಕಾರ್ಯಕ್ರಮವನ್ನು ಪುನರ್ ಸಂಘಟಿಸಿ ನಿಧಾನವಾಗಿ ಪೂರೈಸುವುದು; ಅಥವಾ ಕಾರ್ಯಕ್ರಮದ ಒಂದು ಹಂತದಿಂದ ಮತ್ತೊಂದು ಹಂತಕ್ಕೆ ಸಾಗುವ ಮೂಲಕ ಅವಸರದ ಅಪಾಯವನ್ನು ತುಸುಮಟ್ಟಿಗೆ ತಗ್ಗಿಸಬಹುದು. ಇದರರ್ಥ ಐದು ನಿಮಿಷಗಳನ್ನು ವ್ಯರ್ಥ ಮಾಡುವಾಗ ಅದನ್ನು ಪ್ರಜ್ಞಾಪೂರ್ವಕವಾಗಿಯೇ ಮಾಡುವುದು.

ಆರಂಭದಲ್ಲಿ ಸಂಭವಿಸಬಹುದಾದ ಸೋಲು ಸಹಾ ಮುಖ್ಯವಾದ ಅಪಾಯವೇ. ಇದು ಸಂಪೂರ್ಣ ತೀವ್ರತೆಯೆಡೆಗಿನ ಸ್ಪಂದನವನ್ನು ಜನನ ಹಂತದಲ್ಲೇ ಕೊಂದುಬಿಡುತ್ತದೆ. ಅಂತೆಯೇ ಇದನ್ನು ದೂರವಿಡುವ ಬಗ್ಗೆ ಮುನ್ನೆಚ್ಚರಿಕೆ ವಹಿಸುವುದು ಅಗತ್ಯ ಆರಂಭದ ಹೆಜ್ಜೆಗಳು ನಿಧಾನವಾದರೂ ಪರವಾಗಿಲ್ಲ; ಆದಷ್ಟು ನಿಯಮಿತವಾಗಿರಲಿ. ಒಮ್ಮೆ ಒಂದು ಕಾರ್ಯವನ್ನು ಪೂರೈಸಬೇಕೆಂದು ತೀರ್ಮಾನಿಸಿದ ಮೇಲೆ ಅದೆಷ್ಟೇ ತ್ರಾಸದಾಯಕವಾಗಿದ್ದರೂ, ನಿಮ್ಮ ಮನಕ್ಕೊಗ್ಗದಿದ್ದರೂ ಮುಗಿಸಿಬಿಡಿ. ಒಂದು ಕಠಿಣತಮ ಕಾರ್ಯದ ಪೂರೈಕೆಯೊಂದಿಗೆ ಲಭಿಸುವ ಆತ್ಮವಿಶ್ವಾಸ ಎಲ್ಲಕ್ಕಿಂತ ಮಿಗಿಲಾದುದು.

**ಕೊನೆಯ ಮಾತು:**

ಸಂಜೆಯ ಸಮಯವನ್ನು ಬಳಸಿಕೊಳ್ಳುವಾಗ ನಿಮ್ಮ ಅಭಿರುಚಿ ಮತ್ತು ಸ್ವಭಾವಜನ್ಯ ಒಲವಿನ ಹೊರತಾಗಿ ಮತ್ಯಾವುದರಿಂದಲೂ ಪ್ರಭಾವಿತರಾಗಬೇಡಿ. ತತ್ವಶಾಸ್ತ್ರದ ನಡೆದಾಡುವ ವಿಶ್ವಕೋಶವಾಗುವುದು ತುಂಬಾ ಒಳ್ಳೆಯದು. ಆದರೆ ತತ್ವಶಾಸ್ತ್ರದೆಡೆ ನಿಮ್ಮ ಮೂಲಭೂತ ಒಲವೇ ಇಲ್ಲದಿದ್ದಾಗ ಅದನ್ನು ಅದರ ಪಾಡಿಗೆ ಬಿಟ್ಟು ನಿಮಗೆ ಆಸಕ್ತಿ ಇರುವ ವಿಷಯವನ್ನೇ ಆಯ್ದುಕೊಳ್ಳಿ.

---

# ನೀವು ವ್ಯಂಗ್ಯಚಿತ್ರಕಾರರೆ ?

'ಕಸ್ತೂರಿ'ಯಲ್ಲಿ ಪ್ರಕಟಣೆ ಕೋರಿ ದಿನವೂ ನಮ್ಮ ಕೈಸೇರುವ ವ್ಯಂಗ್ಯಚಿತ್ರಗಳು ಅಸಂಖ್ಯ. ಇದಕ್ಕಾಗಿ ವ್ಯಂಗ್ಯಚಿತ್ರಕಾರರಿಗೆ 'ಕಸ್ತೂರಿ' ಕೃತಜ್ಞ.

ಆದರೆ, ಕೆಲವು ಅಂಶಗಳತ್ತ ನಮ್ಮ ವ್ಯಂಗ್ಯಚಿತ್ರಕಾರ ಮಿತ್ರರು ಗಮನಹರಿಸುವುದೊಳಿತು. ನೀವು ಕಳಿಸುವ ಚಿತ್ರದ ಆಕಾರದ ಬಗ್ಗೆ ಖಚಿತತೆ ಇರಲಿ. ನಮ್ಮ ಕಾಲಮ್ಮುಗಳ ಅಳತೆಗೆ ಮೀರುವ ವ್ಯಂಗ್ಯಚಿತ್ರಗಳು ಕೆಲವಾದರೆ, ಅದರ ಅಡಿಟಿಪ್ಪಣಿಯನ್ನು ಬರೆಯುವಾಗ ಭಾಷೆ, ವ್ಯಾಕರಣಗಳ ಸ್ಖಾಲಿತ್ಯಗಳೂ ಕೆಲವದರಲ್ಲಿ ಕಂಡುಬರುತ್ತವೆ. ಇನ್ನು ವ್ಯಂಗ್ಯ ಚಿತ್ರಕಾರರನೇಕರು ತಮ್ಮ ಹೆಸರು ಢಾಳಾಗಿ ಕಾಣುವಂತೆ ಬರೆಯುತ್ತಾರೆ. ಚಿತ್ರಕ್ಕಿಂತ ಹೆಸರೇ ಮುಖ್ಯವಾಗಿಬಿಡುವುದು ಸರಿಯಲ್ಲ, ಅಲ್ಲವೆ ?

ಹೀಗೆ ಮಾಡಿ: ಒಂದು ಡೆಮಿ ಆಕಾರದ ಡ್ರಾಯಿಂಗ್ ಪೇಪರಿನಲ್ಲಿ ಸರಿಯಾಗಿ ೩೨ ಭಾಗಮಾಡಿಕೊಳ್ಳಿ. ಒಂದೊಂದು ಭಾಗವೂ ನಮ್ಮ ಪೋಸ್ಟ್‌ಕಾರ್ಡ್ ಸೈಜಿನದಾಗುತ್ತದೆ. ಇಂಥದೊಂದು ಭಾಗದಲ್ಲಿ ಸ್ಫುಟವಾಗಿ ಬಿಡಿಸಿದ ವ್ಯಂಗ್ಯಚಿತ್ರ ನಮ್ಮ ಎರಡು ಕಾಲಂ ಅಳತೆಗೆ ಸರಿಹೊಂದುತ್ತದೆ. ಒಂದು ಕಾಲಂ ಚಿತ್ರ ಬಿಡಿಸಬಯಸುವಿರೋ-ಆ ಭಾಗದಲ್ಲಿ ಎರಡು ಚಿತ್ರ ಬಿಡಿಸಿ ಸಾಕು. ಹಾಂ, ಎಲ್ಲೂ ತಿದ್ದುಪಡಿಗಳು ಬೇಡ. ಅಡಿಟಿಪ್ಪಣಿಯನ್ನು ಬೇಕಾದರೆ ಹಿಂಭಾಗದಲ್ಲಿ ಬರೆಯಬಹುದು. ಚಿತ್ರ ಬಿಡಿಸಲು ಇಂಡಿಯನ್ ಇಂಕನ್ನೇ ಬಳಸಿ.

ಇಂಥ ಪರಿಪೂರ್ಣ ವ್ಯಂಗ್ಯಚಿತ್ರಗಳಾದರೆ ಶೀಘ್ರ ನಿರ್ಧಾರಕ್ಕೆ ಅನುಕೂಲ. ಗಮನಿಸುವಿರಲ್ಲವೆ ?

-ಸಂಪಾದಕ



# ನವಕರ್ನಾಟಕ ಪ್ರಕಾಶನದ



# ಬಳಕೆ ಯಂತ್ರ ಕೈಪಿಡಿಗಳು










## ಮೋಟಾರ್ ಕಾರ್ ಮೆಕಾನಿಸಮ್ *(107 ಚಿತ್ರಗಳ ಸಹಿತ)*

3ನೇ ಮುದ್ರಣ. ಪುಟ 144. ಬೆಲೆ ರೂ 22.

## ಮೋಟಾರ್ ಸೈಕಲ್, ಸ್ಕೂಟರ್, ಮೋಪೆಡ್ ಮೆಕಾನಿಸಮ್ ಮತ್ತು ದುರಸ್ತಿ

*(233 ಚಿತ್ರಗಳ ಸಹಿತ)* ಪರಿಷ್ಕೃತ
2ನೇ ಮುದ್ರಣ. ಪುಟ 276. ಬೆಲೆ ರೂ 45.



## ಪಂಪ್ ಸೆಟ್ಟುಗಳು ಮೆಕಾನಿಸಮ್ ಮತ್ತು ದುರಸ್ತಿ

*(107 ಚಿತ್ರಗಳ ಸಹಿತ)* ಮೊದಲನೆ ಮುದ್ರಣ.
ಪುಟ 144. ಬೆಲೆ ರೂ. 20.

ಲೇಖಕ.
ಎಸ್. ಶ್ರೀನಿವಾಸನ್
ಅನು:
ಕೆ.ಪಿ. ಸ್ವಾಮಿ

ನೀವು ಕಾರು ಮಾಲೀಕರೋ? ಸ್ಕೂಟರ್, ಮೋಟಾರ್ ಸೈಕಲ್ ಅಥವಾ ಮೋಪೆಡ್ ಓಡಿಸುತ್ತೀರೋ? ನಿಮ್ಮ ಗದ್ದೆಗೋ, ತೋಟಕ್ಕೋ ನೀರು ಹಾಯಿಸಲು ಪಂಪು ಹಾಕಿದ್ದೀರೋ? ಈ ಯಂತ್ರಗಳು ಕೈಕೊಟ್ಟಾಗ ಮೆಕಾನಿಕ್‌ಗಾಗಿ ಕಾಯುತ್ತ ಕುಳಿತುಕೊಳ್ಳುವ ಅಗತ್ಯವಿಲ್ಲ. ಅವುಗಳ ಮೆಕಾನಿಸಮನ್ನು ನೀವೇ ತಿಳಿದುಕೊಳ್ಳಿ. ಇದಕ್ಕಾಗಿಯೇ ಸಿದ್ಧವಾಗಿರುವ ಸಚಿತ್ರ ಕೈಪಿಡಿಗಳು.

ಈ ಮೂರು ಪುಸ್ತಕಗಳನ್ನು ಒಂದೇ ಬಾರಿಗೆ ತರಿಸಿಕೊಳ್ಳುವವರಿಗೆ **ಅಂಚೆ ವೆಚ್ಚ ಉಚಿತ.** ಒಂದೊಂದು ಪುಸ್ತಕ ತರಿಸಿಕೊಳ್ಳುವವರು ಪುಸ್ತಕದ ಬೆಲೆಯ ಜತೆಗೆ ಅಂಚೆ ವೆಚ್ಚ ರೂ. 8/- ಸೇರಿಸಿ ಮನಿಯಾರ್ಡರ್ ಮಾಡಬೇಕು.

**ನಮ್ಮ ಇತ್ತೀಚಿನ ಪ್ರಕಟಣೆ: ಕ್ಯಾಲೆಂಡರ್ ಕಥೆ:**
ಲೇ: ಡಾ।। ಮಹೀಧರ ನಳಿನಿ ಮೋಹನ್
ಅನು. ಎಚ್. ಗಾಯತ್ರಿ ದೇವಿ ಬೆಲೆ ರೂ 28.

ಪ್ರತಿಗಳಿಗೆ ಬರೆಯಿರಿ:



**ನವಕರ್ನಾಟಕ ಪಬ್ಲಿಕೇಷನ್ಸ್ (ಪ್ರೈ) ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ 5159,
ಬೆಂಗಳೂರು: 560 001

# ಚೀನೀ ಲಘುಕತೆಗಳು ಮತ್ತು ಝೆನ್ ಪ್ರಸಂಗಗಳು

● ಬಿ. ಜನಾರ್ದನ ಭಟ್

## ಪೆಟ್ಟು ಪೆಟ್ಟಲ್ಲ

ಶಾನ್ ಎಂಬ ಪ್ರಸಿದ್ಧ ಭಿಕ್ಷುವಿದ್ದ. ಅವನು ಎಲ್ಲ ಅಧಿಕಾರಿಗಳ ಜತೆ ಸಂಪರ್ಕವಿರಿಸಿಕೊಂಡಿದ್ದ. ಒಮ್ಮೆ ಕ್ಸಿಯು ಜುನ್ ಎಂಬ ಕಿರಿಯ ಅಧಿಕಾರಿಯೊಬ್ಬ ಅವನ ಮಠಕ್ಕೆ ಬಂದ. ಶಾನ್ ಅವನನ್ನು ಕಂಡೂ ಕಣ್ಣೆತ್ತಿ ನೋಡಿ ಮಾತಾಡಿಸದೆ ಬಿಂಕದಿಂದ ಸುಮ್ಮನೆ ಕುಳಿತಿದ್ದ.

ಸ್ವಲ್ಪ ಹೊತ್ತಿನ ನಂತರ ಉನ್ನತಾಧಿಕಾರಿಯೊಬ್ಬನ ಮಗ ಮಠಕ್ಕೆ ಭೇಟಿ ನೀಡಿದ. ಶಾನ್ ಗಡಬಡಿಸಿ ಎದ್ದು, ಸೊಂಟ ಬಗ್ಗಿಸಿ ವಂದಿಸಿ ಅವನನ್ನು ಎದುರ್ಗೊಂಡ. ಅಧಿಕಾರಿಯ ಮಗ ಹೋದ ಬಳಿಕ ಜುನ್ ಕೇಳಿದ: ''ನೀವು ಯಾಕೆ ನಿಮ್ಮ ಸಂದರ್ಶಕರನ್ನು ತರತಮವಾಗಿ ನಡೆಸಿಕೊಳ್ಳುತ್ತೀರಿ?''

ಭಿಕ್ಷು ಒಂದು ಬೌದ್ಧ ಸೂಕ್ತಿಯ ಭಾಷೆಯಲ್ಲಿ ಉತ್ತರಿಸಿದ: ''ಎದುರ್ಗೊಳ್ಳುವುದು ಅಂದರೆ ಎದುರ್ಗೊಳ್ಳುವುದಲ್ಲ. ಎದುರ್ಗೊಳ್ಳದಿರುವುದೆಂದರೆ ಎದುರ್ಗೊಳ್ಳುವುದು.''

ಇದನ್ನು ಕೇಳಿ ಜುನ್ ದೊಣ್ಣೆಯೆತ್ತಿ ಭಿಕ್ಷುವಿನ ತಲೆಗೆ ಒಂದು ಬಡಿದ. ಮತ್ತೆ ಬೀಳಬಹುದಾದ ಪೆಟ್ಟಿನಿಂದ ತಪ್ಪಿಸಿಕೊಳ್ಳುತ್ತಾ ಭಿಕ್ಷು ಗಾಬರಿಯಿಂದ ಕೇಳಿದ: ''ಏನಿದು! ಏನಿದು! ಬೌದ್ಧ ಮತಾನುಯಾಯಿಯಾಗಿ ನೀನು ಹೀಗೆ ಮಾಡಬಹುದಾ?''

ಕ್ಸಿಯು ಜುನ್ ಹೇಳಿದ: ''ನನ್ನ ಲೆಕ್ಕದಲ್ಲಿ ಪೆಟ್ಟು ಅಂದರೆ ಪೆಟ್ಟಲ್ಲ. ಪೆಟ್ಟು ಕೊಡದಿದ್ದರೆ ಅದು ಪೆಟ್ಟು ಕೊಟ್ಟ ಹಾಗೆ.''

●

## ಹಿಂದಲೆ ಚಿತ್ರ

ಒಬ್ಬ ಜಿಪುಣ ತನ್ನ ಚಿತ್ರ ಬಿಡಿಸಲು ಚಿತ್ರಕಾರನೊಬ್ಬನಿಗೆ ಹೇಳಿದ. ಕಾಗದ, ಬಣ್ಣ ಮತ್ತು ಕಲಾವಿದನ ಮಜೂರಿಗಳಿಗಾಗಿ ಒಟ್ಟು ಮೂರು ನಾಣ್ಯಗಳನ್ನು ಕೊಡುವುದಾಗಿ ಹೇಳಿದ. ಕಲಾವಿದ ಅದಕ್ಕೆ ಒಪ್ಪಿ, ದೊರಗು ಕಾಗದದ ಮೇಲೆ ಜಿಪುಣನ ತಲೆಯ ಹಿಂಭಾಗದ ಚಿತ್ರ ಬರೆದು ಕೊಟ್ಟ. ಜಿಪುಣನಿಗೆ ಆಶ್ಚರ್ಯವಾಗಿ ಕೇಳಿದ: ''ಭಾವಚಿತ್ರವೆಂದರೆ ಮುಖವನ್ನು ತೋರಿಸಬೇಕು. ಇದೇನು ಹೀಗೆ?''

ಕಲಾವಿದ ಹೇಳಿದ: ''ನಿನ್ನಂಥ ಜಿಪುಣನ ಮುಖಭಾವ ಪ್ರದರ್ಶಿಸದಿರುವುದೇ ಒಳ್ಳೆಯದೆಂದು ನನ್ನ ಅನ್ನಿಸಿಕೆ.''

●

## ಹೊಸ ಬಟ್ಟೆ

ಒಬ್ಬಾತ ಜೀವನದಲ್ಲಿ ಪ್ರಥಮ ಬಾರಿಗೆ ಬೆಲೆಬಾಳುವ ಬಟ್ಟೆ ಧರಿಸಿಕೊಂಡ. ಅವನು ಉಳಿದವರು ತನ್ನನ್ನೂ ತನ್ನ ಬಟ್ಟೆಯನ್ನೂ ನೋಡಬೇಕೆಂದು ಭುಜ ಎತ್ತರಿಸಿ ನಡೆಯತೊಡಗಿದ.

ಸ್ವಲ್ಪ ಹೊತ್ತಿನ ನಂತರ ತನ್ನ ಜತೆಗಿದ್ದ ಕೆಲಸದ ಹುಡುಗನನ್ನು ಕೇಳಿದ: ''ಎಲ್ಲರೂ ನನ್ನನ್ನೇ ನೋಡುತ್ತಿದ್ದಾರೆಯೆ?''

ಹುಡುಗ 'ಸುತ್ತ ಯಾರೂ ಇಲ್ಲ'ವೆಂದ. ''ಹಾಗಾದರೆ ನಾನು ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳುತ್ತೇನೆ'' ಎಂದ ಹೊಸ ಬಟ್ಟೆಯವ ಭುಜಗಳನ್ನು ನಿರಾಳವಾಗಿ ಬಿಟ್ಟು ನಡೆಯತೊಡಗಿದ.

●

## ಸಲಹೆ

ಒಬ್ಬ ಶ್ರೀಮಂತ ನದಿಯಲ್ಲಿ ಮುಳುಗಿ ಸತ್ತುಹೋದ. ಅವನ ಹೆಣ ಒಬ್ಬ ಮೀನುಗಾರನಿಗೆ ಸಿಕ್ಕಿತು. ಶ್ರೀಮಂತನ ಕುಟುಂಬದವರು ಬಂದು ಹೆಣ ಕೇಳಿದಾಗ ಅದನ್ನು ಬಿಟ್ಟುಕೊಡಲು ಮೀನುಗಾರ ತುಂಬ ಚಿನ್ನ ಕೇಳಿದ. ಏನು ಮಾಡಬೇಕೆಂದು ತಿಳಿಯದೆ ಕುಟುಂಬದವರು ಡೆಂಗ್ ಕ್ಸಿಯನ್ನು ಕಂಡು ಅವನ ಸಲಹೆ ಕೇಳಿದರು.

ಡೆಂಗ್ ಕ್ಸಿ ಹೇಳಿದ: ''ಸುಮ್ಮನಿರಿ. ಸ್ವಲ್ಪ ಕಾದು ನೋಡಿ. ಆ ಹೆಣ ತಗೊಳ್ಳಲು ಬೇರೆ ಯಾರು ಬರುತ್ತಾರೆ?''

ಅವರು ಹಾಗೇ ಮಾಡಿದರು. ಮೀನುಗಾರನಿಗೆ ಆತಂಕವಾಗತೊಡಗಿತು. ಹೆಣವನ್ನೇನು ಮಾಡುವುದು? ಅವನೂ ಡೆಂಗ್ ಕ್ಸಿಯ ಬಳಿಗೆ ಹೋಗಿ ಸಲಹೆ ಕೇಳಿದ.

ಡೆಂಗ್ ಕ್ಸಿ ಹೇಳಿದ: ''ಸುಮ್ಮನಿರು. ಸ್ವಲ್ಪ ಕಾದು ನೋಡು. ಅವರು ನಿನ್ನಿಂದಲ್ಲದೆ ಬೇರೆ ಯಾರಿಂದ ಹೆಣ ಪಡೆಯಲು ಸಾಧ್ಯ?''

●

## ಮೀನುಗಳ ಸಂತೋಷ

ಜುವಾಂಗ್ ಜಿ ಮತ್ತು ಹುಯಿ ಜಿ ನದಿಯ ದಡದಲ್ಲಿ ತಿರುಗಾಡುತ್ತಿದ್ದರು. ನೀರಿನಲ್ಲಿ ಈಜುತ್ತಿದ್ದ ಮೀನುಗಳನ್ನು ಕಂಡು ಜುವಾಂಗ್ ಜಿ ಹೇಳಿದ: ''ನೋಡು, ಮೀನುಗಳು ಎಷ್ಟು ಸ್ವಚ್ಛಂದವಾಗಿ ಈಜಾಡುತ್ತಿವೆ! ಅವು ತುಂಬಾ ಸುಖಿಗಳಾಗಿರಬೇಕು.''

ಹುಯಿ ಜಿ ಹೇಳಿದ: ''ನೀನು ಮೀನಲ್ಲವಲ್ಲ. ಅವು ಸುಖಿಗಳೆಂದು ನಿನಗೆ ಹೇಗೆ ತಿಳಿಯುತ್ತದೆ?''

ಜುವಾಂಗ್ ಜಿ ಹೇಳಿದ: ''ನೀನು ನಾನಲ್ಲವಲ್ಲ. ಮೀನುಗಳ ಸಂತೋಷ ನನಗೆ ಅರ್ಥವಾಗುವುದಿಲ್ಲವೆಂದು ನಿನಗೆ ಹೇಗೆ ತಿಳಿಯುತ್ತದೆ?''

●

## ಬೇಸಗೆಯಲ್ಲಿ ಕೋಟು

ಒಬ್ಬ ಕಡು ಬೇಸಗೆಯಲ್ಲಿ ಕೂಡ ಕೋಟು ಹಾಕಿಕೊಂಡು ನಡೆಯುತ್ತಾ ಇದ್ದ. ಹಾಗಾಗಿ ಧಾರಾಳವಾಗಿ ಬೆವರಿದ. ಕೊನೆಗೆ ಒಂದು ಮರದಡಿ ಕುಳಿತುಕೊಂಡು ಕೋಟು ಬಿಚ್ಚಿ ಗಾಳಿಹಾಕಿಕೊಂಡ.

''ಈ ಕೋಟಲ್ಲದಿದ್ದರೆ ನನಗೆ ಗಾಳಿ ಹಾಕಿಕೊಳ್ಳಲು ಏನೂ ಇಲ್ಲದೆ ಸೆಖೆಯಲ್ಲಿ ಸತ್ತು ಹೋಗುತ್ತಿದ್ದೆ'' ಎಂದುಕೊಂಡ.

## 'ಕಸ್ತೂರಿ'ಯ ಅರ್ಧವಾರ್ಷಿಕ ಪರಿವಿಡಿ

**ಮಾರ್ಚ್ 1992ರಿಂದ ಅಗಸ್ಟ್ 1992ರ ವರೆಗೆ**

ಕ್ರಮ: ಲೇಖನದ ಹೆಸರು, ಮೂಲ ಲೇಖಕರ ಹೆಸರು, ಅನುವಾದಕರ ಹೆಸರು, ತಿಂಗಳು, ಪುಟ ಸಂಖ್ಯೆ.

ಮಾ-ಮಾರ್ಚ್, ಎ-ಎಪ್ರಿಲ್, ಮೆ-ಮೇ, ಜೂ-ಜೂನ್, ಜು-ಜುಲೈ, ಅ-ಅಗಸ್ಟ್.

## ಜೀವ-ಜಗತ್ತು



## ನಾಸ್ಟಾಲ್ಜಿಯಾ



## ನಿಮ್ಮ ಶಬ್ದಭಾಂಡಾರ ಬೆಳೆಯಲಿ



## ನೀತಿಕಥೆ



## ನೆನಪು ನೆರಳಿನಲ್ಲಿ



## ಪದಾರ್ಥ ಚಿಂತಾಮಣಿ



## ಪುಸ್ತಕ ವಿಭಾಗ



## ರಹಸ್ಯ-ಸಾಹಸ-ಸೋಜಿಗ

**ವಿಜ್ಞಾನ - ತಂತ್ರಜ್ಞಾನ**



**ಸತ್ಯ ಕಥೆ**



**ಸಾಮಾನ್ಯ**

**ಹರಟೆ - ಲಘು ಬರಹ - ಪ್ರಬಂಧ**



●

## ಗೋಸುಂಬೆ ಗೊತ್ತೆ?

*ಗೋಸುಂಬೆಯ ಎರಡೂ ಕಣ್ಣುಗಳು ಪ್ರತ್ಯೇಕ ಸ್ವಯಂ ಚಾಲನೆಯನ್ನು ಹೊಂದಿರುತ್ತವೆ. ಇದರಿಂದಾಗಿ ಈ ಪ್ರಾಣಿ ಏಕಕಾಲಕ್ಕೆ ಒಂದು ಕಣ್ಣಿನಿಂದ ತನ್ನೆದುರಿನದನ್ನೂ ಇನ್ನೊಂದು ಕಣ್ಣಿನಿಂದ ಹಿಂದಿನದನ್ನೂ ನೋಡಬಲ್ಲದು.*

*ಗೋಸುಂಬೆಯ ನಾಲಗೆ ಅದರ ದೇಹಕ್ಕಿಂತಲೂ ಉದ್ದವಾಗಿರುತ್ತದೆ. ಅಂತೆಯೇ ಇದು ದೂರದ ಬೇಟೆಯನ್ನೂ ತನ್ನ ನೀಳನಾಲಗೆಯಿಂದ ಬಾಚಿ ಜಗಿದು ಹಾಕುತ್ತದೆ.*

● ವಿಜಯಕುಮಾರ್ ಜೈನ್

●

## ಹುಟ್ಟು-ಸಾವು-ಧೂಮಕೇತು

*ಅಮೆರಿಕದ ಪ್ರಖ್ಯಾತ ಬರಹಗಾರ 'ಮಾರ್ಕ್‌ಟ್ವೈನ್'ನ ಬದುಕಿನಲ್ಲಿ ಅತಿ ಸೋಜಿಗದ, ಘಟನೆಯೊಂದು ನಡೆಯಿತು.*

*ಆತ 1835ರಲ್ಲಿ ಜನಿಸಿದಾಗ ಆಕಾಶದಲ್ಲಿ ಧೂಮಕೇತುವೊಂದು ಕಾಣಿಸಿಕೊಂಡಿತು. ಮಾರ್ಕ್ ಟ್ವೈನ್ ಆಗಾಗ, ''ತಾನು 1910ರಂದು ಈ ಲೋಕದಿಂದ ನಿರ್ಗಮಿಸುವುದಾಗಿಯೂ, ಆಗ ಮತ್ತೊಮ್ಮೆ ಧೂಮಕೇತು ಕಾಣಿಸಿಕೊಳ್ಳುವುದಾಗಿಯೂ,'' ಭವಿಷ್ಯ ನುಡಿಯುತ್ತಿದ್ದ. ಕಾಕತಾಳೀಯವೆನ್ನಿ ಅಥವಾ ಇನ್ನೇನಾದರೂ ಅನ್ನಿ, ಮಾರ್ಕ್‌ಟ್ವೈನ್ ನುಡಿದದ್ದು ಸುಳ್ಳಾಗಲಿಲ್ಲ. ಮಾರ್ಕ್‌ಟ್ವೈನ್ 1910ರಲ್ಲಿ ಅಸುನೀಗಿದ. ಆಗ ಮತ್ತೊಮ್ಮೆ ಧೂಮಕೇತು ಕಾಣಿಸಿಕೊಂಡಿತು.*

ಸಂಗ್ರಹ: ಎಂ. ಜೆ. ನಾಯ್ಡು

ನಿಮ್ಮ ಆರೋಗ್ಯಕ್ಕಾಗಿ
'ಕಸ್ತೂರಿ'ಯ ಕಾಣಿಕೆ

# ತಾಯಿ ಮತ್ತು ಎದೆಹಾಲು ಎಂಬ ಜೀವಾಮೃತ






● ಡಾ. ಮಹಾಬಲರಾಜು ಡಿ.ಕೆ.

ಸಹಪ್ರಾಧ್ಯಾಪಕ,
ಜನಾರೋಗ್ಯ ವಿಭಾಗ,
ಜೆ.ಜೆ.ಎಂ. ವೈದ್ಯಕೀಯ ಕಾಲೇಜು,
ದಾವಣಗೆರೆ -577 006



# ತಾಯಿ ಮತ್ತು ಎದೆಹಾಲು ಎಂಬ ಜೀವದ್ರವ

ಜೀವ ಅಂಕುರಿಸುವುದು ಪ್ರಕೃತಿಯ ಒಂದು ಅದ್ಭುತವಾದರೆ ಅದು ಜೀವಕಳೆ ತುಂಬಿಕೊಂಡು ಅರಳುವ ಬಗೆ ವೈಚಿತ್ರ್ಯದ ಮತ್ತೊಂದು ಮಜಲು. ಕೇವಲ ಒಂಬತ್ತು ಪೌಂಡು ತೂಕದ ಎಳಸು ಅಂಗಾಂಗಗಳ ಹಸುಳೆಯೊಂದು ಧರೆಗಿಳಿದು ಬಂದ ಗಳಿಗೆಯಿಂದ ಅಮ್ಮನ ಅಮೃತ ಕಳಶಗಳಿಗೆ ಅಂಟಿಕೊಳ್ಳುವ ಪರಿಯಲ್ಲಿಯೇ ಅದರ ಪಾಲಿನ ಬದುಕು ಬಿಚ್ಚಿಕೊಳ್ಳತೊಡಗುತ್ತದೆ. ಗೋಲಿ ಕಂಗಳಿಂದ ಪ್ರಪಂಚವನ್ನು ನಿರುಕಿಸಲಾರಂಭಿಸುವ ಖಾಲಿ ಹೊಟ್ಟೆಯ ನವಜಾತ ಶಿಶುವಿಗೆ ಅಮ್ಮನ ಮೊಲೆಹಾಲೇ ಜೀವದ್ರವ; ಅಲ್ಲಿಂದಲೇ ಅದು ತನ್ನ ಹಾಲುಗೆನ್ನೆ ತುಂಬಿಕೊಂಡು ನಳನಳಿಸತೊಡಗುವುದು. ಆದರೆ ಈ ಹಾಲಿನ ಬಗ್ಗೆಯೇ ಎಷ್ಟೊಂದು ಅಪಕಲ್ಪನೆಗಳು! ಹತ್ತಾರು ಅಸತ್ಯಗಳ ಎಳೆಗಳಿಂದ ನಮ್ಮ ನಿಲುವುಗಳನ್ನು ಬಂಧಿಸಿಕೊಂಡು ತೊಳಲಾಡುವ ಬದಲು ವೈದ್ಯವಿಜ್ಞಾನದ ಮೊನಚು ಕತ್ತರಿಯಿಂದ ಅಂಥವುಗಳನ್ನೆಲ್ಲ ಕಡಿದುಹಾಕುವುದು ಬುದ್ಧಿವಂತಿಕೆಯ ಲಕ್ಷಣ. ಅಮೂಲ್ಯ ಜೀವದ್ರವದ ಉತ್ಪಾದನೆ ಹಾಗೂ ಊಡುವಿಕೆಗೆ ಕಾರಣವಾದ ಸ್ತನ ರಚನೆಯ ಪರಿಚಯದೊಂದಿಗೆ ಈ ದೆಸೆಯ ಪ್ರಯತ್ನವನ್ನು ಆರಂಭಿಸೋಣ.

**ಸ್ತನ ರಚನೆ:**

ಹಾಲು ಉತ್ಪಾದಿಸುವ ಪುಟ್ಟ ನೈಸರ್ಗಿಕ ಕಾರ್ಖಾನೆಯಂತಿರುವ ಸ್ತನಗಳು ಬೇರೇನೂ ಅಲ್ಲ; ಅತ್ಯಂತ ಮುತುವರ್ಜಿಯಿಂದ ವ್ಯವಸ್ಥಿತವಾಗಿ ರೂಪಿಸಲ್ಪಟ್ಟ ಗ್ರಂಥಿಗಳು. ಕೊಬ್ಬು ಹಾಗೂ ಹಾಲು ಉತ್ಪಾದಕ ಗ್ರಂಥಿಗಳನ್ನಿವು ಒಳಗೊಂಡಿವೆ. ಹಾಲು ಉತ್ಪಾದಕ ಗ್ರಂಥಿಗಳನ್ನು ದ್ರಾಕ್ಷಿಗೊಂಚಲಿಗೆ ಹೋಲಿಸಬಹುದು (ಚಿತ್ರ ನೋಡಿ). ಪ್ರತಿಯೊಂದು ಗ್ರಂಥಿಯೂ ಒಂದು ದ್ರಾಕ್ಷಿ ಹಣ್ಣಿದ್ದಂತೆ. ಇಲ್ಲಿಯೇ






ಜೀವದ್ರವ ತಯಾರಾಗುವುದು.

ಉತ್ಪಾದಕ ಗ್ರಂಥಿಗಳಲ್ಲಿ ಉತ್ಪಾದನೆಗೊಂಡ ಹಾಲು ಅಲ್ಲಿಂದ ಮುಂದೆ ಸಂಗ್ರಾಹಕ ನಳಿಕೆಗಳ ಮೂಲಕ ಮೊಲೆತೊಟ್ಟಿನ ತುದಿಯನ್ನು ತಲುಪುವ ವ್ಯವಸ್ಥೆ ಇದೆ. ಮೊಲೆತೊಟ್ಟಿನ ತುದಿಯಲ್ಲಿರುವ 10-11 ನಳಿಕೆಗಳು ತಮಗೆ ಸಂಬಂಧಿಸಿದ ಗ್ರಂಥಿಗಳೊಂದಿಗೆ ಸಂಪರ್ಕ ಹೊಂದಿರುತ್ತವೆ. ಅಲ್ಲಿನ ಹಾಲನ್ನು ತೊಟ್ಟಿನವರೆಗೆ ತಂದುಬಿಡುವ ಕರ್ತವ್ಯ ಇವುಗಳದು. ಇದಿಷ್ಟು ಸ್ತನಗಳ ಒಳರಚನೆಯ ಸಂಕ್ಷಿಪ್ತ ವಿವರ.

ಮಗು ತನ್ನ ಜೇನು ತುಟಿಗಳನ್ನು ಜೀವದ್ರವ ಜಿನುಗಿಸುವ ತೊಟ್ಟುಗಳಿಗಿರಿಸಿ ಚೀಪಿದಾಗ ಎಲ್ಲಾ ನಾಳಗಳ ಮೂಲಕ ಹರಿದು ಬರುವ ಹಾಲು ಅದರ ಹೊಟ್ಟೆ ಸೇರುತ್ತದೆ. ಬಾಣಂತಿಯರು ತಮ್ಮ ಮೊಲೆಯನ್ನು ಮೇಲಿನಿಂದ ಕೆಳಕ್ಕೆ ಕ್ರಮಬದ್ಧವಾಗಿ ಹಿಚುಕಿದರೆ ಮೊಲೆತಟ್ಟಿನ ನಾಳಗಳ ಮೂಲಕ ಹಾಲು ಹೊರಚಿಮ್ಮುವುದನ್ನು ನೋಡಬಹುದು.

ಸಾಮಾನ್ಯವಾಗಿ, ಎಲ್ಲರೂ ನಂಬುವ ಒಂದು ಸುಳ್ಳನ್ನು ಈ ಹಂತದಲ್ಲಿಯೇ ಕಳಚಿ ಎಸೆಯುವುದು ಒಳ್ಳೆಯದು. ಸಣ್ಣಗಾತ್ರದ ಮೊಲೆಗಳು ಕಡಿಮೆ ಹಾಲನ್ನೂ, ದೊಡ್ಡ ಗಾತ್ರದ ಸ್ತನಗಳು ಅಧಿಕ ಹಾಲನ್ನೂ ಉತ್ಪಾದಿಸುತ್ತವೆ ಎಂಬುದೇ ಆ ತಪ್ಪು ಕಲ್ಪನೆ. ಇಂಥ ನಿಷ್ಕಾರಣ ನಂಬಿಕೆಯಿಂದಾಗಿ ಅನೇಕ ತಾಯಂದಿರು ತಮ್ಮ ಹಾಲು ಮಗುವಿಗೆ ಸಾಕಾಗಲಿಕ್ಕಿಲ್ಲವೆಂದು ಭಾವಿಸಿ ಬಾಟಲಿ ಹಾಲಿನ ಮೊರೆ ಹೋಗುತ್ತಾರೆ. ಸ್ತನಗಳ ಗಾತ್ರಕ್ಕೂ ಉತ್ಪತ್ತಿಯಾಗುವ ಹಾಲಿನ ಪ್ರಮಾಣಕ್ಕೂ ಸಂಬಂಧವಿಲ್ಲವೆನ್ನುವುದನ್ನು ಅರಿಯುವುದುತ್ತಮ. ಹಾಲು ಉತ್ಪತ್ತಿಯಾಗುವುದು ಗ್ರಂಥಿಗಳಲ್ಲಿ; ಸ್ತನಗಳ ಗಾತ್ರದ ಹೆಚ್ಚಳಕ್ಕೆ ಕೊಬ್ಬಿನಂಶ ಕಾರಣ. ಆದುದರಿಂದ ಅತಿ ಸಣ್ಣಗಾತ್ರದ ಸ್ತನವುಳ್ಳವರೂ ಅತ್ಯಂತ ದೊಡ್ಡಗಾತ್ರದ ಸ್ತನಹೊಂದಿದವರೂ ಒಂದೇ ಪ್ರಮಾಣದಲ್ಲಿ ಹಾಲು ಉತ್ಪಾದಿಸಬಲ್ಲರು. ನಮ್ಮ ದೇಶದ ಮಹಿಳೆ ಪ್ರತಿದಿನ 500ರಿಂದ 700ಮಿ.ಲೀ, ಅಂದರೆ ಅರ್ಧದಿಂದ ಮುಕ್ಕಾಲು ಲೀಟರು ಹಾಲು ಉತ್ಪಾದಿಸಬಲ್ಲಳು. ಇಷ್ಟು ಹಾಲು ಮಗುವಿಗೆ ಸಾಕಾಗುತ್ತದೆ.

ಮೊಲೆಹಾಲಿನ ಮಹತ್ವ:

ಪ್ರಕೃತಿದತ್ತ ಕೊಡುಗೆಯಾದ ಮೊಲೆಹಾಲಿನ ಮಹತ್ವವನ್ನು ಸಂಕ್ಷಿಪ್ತವಾಗಿ ಪಟ್ಟಿಮಾಡಲಾಗದಾದರೂ ಕೆಲವು ಮುಖ್ಯಾಂಶಗಳನ್ನು ನೀಡುತ್ತಿದ್ದೇನೆ.

★ ನಾಲ್ಕು ತಿಂಗಳವರೆಗೆ ಮಗುವಿಗೆ ಅಗತ್ಯವಿರುವ ಸಕಲ ಪೋಷಕಾಂಶಗಳನ್ನೂ ತಾಯಿಹಾಲು ಪೂರೈಸುತ್ತದೆ; ನಂತರವೂ ಇತರ ಆಹಾರದೊಂದಿಗೆ ಹಾಲು ಪೂರಕವಾಗಿರುತ್ತದೆ.

★ ಮಗುವಿನ ದೈಹಿಕ, ಮಾನಸಿಕ, ಸಾಮಾಜಿಕ ಬೆಳವಣಿಗೆಗೆ ಸೂಕ್ತವಾದ ತಾಯಿಹಾಲು ಅಜೀರ್ಣ, ಮಲಬದ್ಧತೆಯಂತಹ ತೊಂದರೆಗಳನ್ನು ಆಹ್ವಾನಿಸುವುದಿಲ್ಲ. ಯಾವ ಡಬ್ಬಿಹಾಲು ಸಹ ಕೊಡಮಾಡದ ರೋಗನಿರೋಧಕ ಶಕ್ತಿಯನ್ನು ತಾಯಿಯ ಎದೆಹಾಲು ಒದಗಿಸಬಲ್ಲದು. ಎಲ್ಲ ಮಕ್ಕಳಿಗೂ ಒಗ್ಗುವ ಈ ಜೀವದ್ರವ



ಅಲರ್ಜಿಯಾಗುವ ಸಂಭವ ಅತಿ ಕಡಿಮೆ.

★ ತಾಯಿಯ ಹಾಲಿನಲ್ಲಿ ಮಗುವಿಗೆ ಬೇಕಾದಷ್ಟೇ ಲವಣ ಮತ್ತು ನೀರು ಇರುವುದರಿಂದ ಇವುಗಳ ಕೊರತೆ ಅಥವಾ ಹೆಚ್ಚಳದ ಸಾಧ್ಯತೆಯಿರುವುದಿಲ್ಲ.

★ ಮಕ್ಕಳ ಮೂಳೆ ಮತ್ತು ಹಲ್ಲುಗಳ ಬೆಳವಣಿಗೆಗೆ ಅಗತ್ಯವಾದ ಕ್ಯಾಲ್ಸಿಯಂ ತಾಯಿಹಾಲಿನಿಂದ ದೊರಕುತ್ತದೆ; ದಂತಕ್ಷಯವನ್ನು ತಡೆಗಟ್ಟುವ ಫ್ಲೋರಿನ್ ಸಹ ಇದರಲ್ಲಿ ಸೇರಿರುತ್ತದೆ.

★ ಮೊಲೆಹಾಲು ಕುಡಿದು ಬೆಳೆದ ಮಗುವಿಗೆ ಬೆರಳು ಚೀಪುವ ಅಭ್ಯಾಸ ಕಡಿಮೆ ಹಾಗೂ ಮಗುವಿನ ಬೆಳವಣಿಗೆಯ ಹಂತಗಳು ಕ್ರಮಬದ್ಧವಾಗಿರುತ್ತವೆ.

★ ಮಗು ಇಷ್ಟಪಡುವ ರುಚಿ, ವಾಸನೆ, ಬಿಸಿ ಇರುವ ಈ ಹಾಲು ಸದಾ ತಾಜಾ ಇರುತ್ತದೆ: ರೋಗಾಣುಗಳಿರುವ ಸಾಧ್ಯತೆಯಿಲ್ಲ. ಇದನ್ನು ಸೇವಿಸಿದ ಮಗು ನಡಿಗೆಯನ್ನು ಬೇಗನೆ ಕಲಿಯುತ್ತದೆ.

★ ಮಗು ತಾಯಿಯ ಹಾಲನ್ನು ಚೀಪಿ ಚೀಪಿ ಕುಡಿಯುವ ಕ್ರಿಯೆಯಿಂದಾಗಿ ಮುಖದ ಮಾಂಸಖಂಡಗಳಿಗೆ ಒಳ್ಳೆಯ ವ್ಯಾಯಾಮ ಸಿಗುವುದರಿಂದ ಮಗುವಿನ ಮುಖ ಸುಂದರವಾಗಿ ರೂಪುಗೊಳ್ಳಲು ಸಹಾಯಕವಾಗುತ್ತದೆ. ಇಂಥ ಮಗುವಿನ ಧ್ವನಿ

ಮತ್ತು ಭಾಷೆ ಕೂಡ ಉತ್ತಮವಾಗಿರುತ್ತದೆ.

**ಹುಟ್ಟಿದ ಕ್ಷಣದಿಂದಲೇ ಹಾಲು ಬೇಕೆ?**

ಮೊಲೆಹಾಲು ಊಡುವುದನ್ನು ಯಾವಾಗಿನಿಂದ ಪ್ರಾರಂಭಿಸಬೇಕೆಂಬುದು ಅನೇಕರಿಗೆ ಗೊತ್ತಿರುವುದಿಲ್ಲ. ನವಜಾತ ಶಿಶು ಮೊದಲ ಕೆಲವು ದಿನ ಮೊಲೆಯನ್ನು ಚೀಪಲಾರದು ಮತ್ತು ಅದಕ್ಕೆ ಆಹಾರದ ಅಗತ್ಯವೂ ಇರುವುದಿಲ್ಲ ಎಂದು ಬಹಳಷ್ಟು ಜನ ಭಾವಿಸುತ್ತಾರೆ. ಜನನದ ನಂತರ ಒಂದೆರಡು ದಿನ ಕೆಲವರು ಮಗುವಿಗೆ ಏನನ್ನೂ ಕೊಡುವುದಿಲ್ಲ; ಮತ್ತೆ ಕೆಲವರು ಗ್ಲೂಕೋಸ್‌ನೀರು, ಸಕ್ಕರೆನೀರು ಕುಡಿಸುತ್ತಾರೆ. ಹುಟ್ಟಿದ ಮಗುವಿಗೆ ಚೆನ್ನಾಗಿ ಬೇಧಿ ಆಗಲೆಂದು ಹರಳೆಣ್ಣೆ ಕೊಡುವುದೂ ಉಂಟು. ಜೇನುತುಪ್ಪ ನೆಕ್ಕಿಸುವುದೂ ಕೆಲವು ಕಡೆ ರೂಢಿಯಲ್ಲಿದೆ. ಇವೆಲ್ಲ ನಂಬಿಕೆ, ರೂಢಿಗಳು ಅರ್ಥಹೀನವಷ್ಟೇ ಅಲ್ಲ ಅಪಾಯಕಾರಿಯೂ ಹೌದು.

ಹುಟ್ಟಿದ ದಿನದಿಂದಲೇ ಮಗು ಅಮ್ಮನ ಮೊಲೆಹಾಲನ್ನು ಚೀಪಿ ಒಡಲು ತುಂಬಿಸಿಕೊಳ್ಳಬಲ್ಲದು. ಇದನ್ನು ಸರಳ ಪರೀಕ್ಷೆಯೊಂದರಿಂದ ಮನಗಾಣಬಹುದು. ಹುಟ್ಟಿದ ಮಗುವಿನ ಗಲ್ಲವನ್ನು ಸ್ಪರ್ಶಿಸಿರಿ. ಮಗು ತಕ್ಷಣ ನಿಮ್ಮ ಕೈಗಳೆಡೆ ತಿರುಗುತ್ತದೆ. ನಿಮ್ಮ ಬೆರಳು ಅದರ ಬಾಯಿಗೆ ಸಿಗುವಂತಾದರೆ ಅದು ಸೀಪಲು ಪ್ರಾರಂಭಿಸುತ್ತದೆ.

ಹೆರಿಗೆಯ ತರುವಾಯದ ಎರಡು-ಮೂರು ದಿನ ನಸು ಹಳದಿ ವರ್ಣದ ಮಂದ ಹಾಲು ಬರುತ್ತದೆ. ಹಸುವಿನಲ್ಲಿಯೂ ಕಾಣಿಸುವ ಈ ಹಾಲು ಗಿಣ್ಣದ ಹಾಲೆಂದು ನಮಗೆಲ್ಲ ಪರಿಚಯ. ಇದನ್ನು ಗಿಣ್ಣ ಮಾಡಿಕೊಂಡು ಚಪ್ಪರಿಸುತ್ತೇವೆ. ಆದರೆ ತಾಯಿಯ ಮೊಲೆಯಿಂದ ಬರುವ ಈ ಕೊಲೊಸ್ಟ್ರಮ್ ಹಾಲನ್ನು ಅನೇಕರು ಮಗುವಿಗೆ ಕುಡಿಸುವುದಿಲ್ಲ. ಇದು ಮಗುವಿಗೆ ಸೂಕ್ತವಲ್ಲವೆಂದು ತಪ್ಪಾಗಿ ಭಾವಿಸಿ ಮೊದಲ ದಿನಗಳಲ್ಲಿ ಬಂದ ಗಟ್ಟಿಹಾಲನ್ನು ಹಿಂಡಿ ಚೆಲ್ಲುತ್ತಾರೆ. ಇದು ಶುದ್ಧ ಮೂರ್ಖತನ.

*ಒಬ್ಬ ತಾಯಿ ಪ್ರತಿನಿತ್ಯ ಸುಮಾರು ಅರ್ಧ ಲೀಟರಿನಿಂದ ಮುಕ್ಕಾಲು ಲೀಟರಿನಷ್ಟು ಹಾಲು ಉತ್ಪಾದಿಸಿ ಮಗುವಿಗೆ ಕುಡಿಸಬಲ್ಲಳು. ಅರ್ಧ ಲೀಟರೆಂದು ಲೆಕ್ಕಹಾಕಿದರೂ ನಿತ್ಯ ನಾಲ್ಕು ರೂಪಾಯಿಯ ಉಳಿತಾಯ. ಹೀಗೆ ವರ್ಷಕ್ಕೆ 1460ರೂ. ಉಳಿತಾಯವಾದರೆ ಕುಟುಂಬದ ಆರ್ಥಿಕಸ್ಥಿತಿಗೆ ಅನುಕೂಲವಲ್ಲವೆ?*

*ನಮ್ಮ ದೇಶದಲ್ಲಿ ಪ್ರತಿವರ್ಷ ಎರಡೂವರೆ ಕೋಟಿ ಮಹಿಳೆಯರು ತಾಯಂದಿರಾಗುತ್ತಾರೆ. ವರೆಲ್ಲರೂ ಮಕ್ಕಳಿಗೆ ಎದೆಹಾಲು ಕುಡಿಸಿದರೆ ದೇಶಕ್ಕೆ ಎಷ್ಟು ಕೋಟಿ ರೂಪಾಯಿಯ ಆರ್ಥಿಕಲಾಭವಾಗುತ್ತದೆಂಬುದರೆಡೆ ಒಂದಿಷ್ಟು ಲಕ್ಷ್ಯವಹಿಸಿ. ಮಕ್ಕಳ ದೈಹಿಕ ಆರೋಗ್ಯ, ದೇಶದ ಆರ್ಥಿಕ ಆರೋಗ್ಯ ತಾಯಿಯ ಸೌಂದರ್ಯ ಮೂರನ್ನೂ ಕಟ್ಟಿಕೊಡುವ ಎದೆಹಾಲಿನ ಮಹತ್ವವನ್ನು ಕಡೆಗಣಿಸಲಾದೀತೆ?*

ಏಕೆಂದರೆ ಕೊಲೊಸ್ಟ್ರಮ್ ಹಾಲಿನಲ್ಲಿ ಅಧಿಕ ಪ್ರೋಟೀನು 'ಎ' ಜೀವಸತ್ವಗಳಲ್ಲದೆ ಮಗುವಿಗೆ ರೋಗಾಣುಗಳ ವಿರುದ್ಧ ರಕ್ಷಣೆ ನೀಡುವ ವಸ್ತುಗಳೂ ಇವೆ. ಆದುದರಿಂದ ಶಿಶು ಜನಿಸಿದ ದಿನದಿಂದಲೇ ಆದಷ್ಟು ಬೇಗ ಮೊಲೆ ಚೀಪಿಸಲು ಪ್ರಾರಂಭಿಸಬೇಕು. ಇದರಿಂದ ಉಪಯುಕ್ತ ದ್ರವವಾದ ಕೊಲೊಸ್ಟ್ರಮ್ ಸ್ವಲ್ಪವೂ ವ್ಯರ್ಥವಾಗದೆ ಪೂರ್ಣವಾಗಿ ಮಗುವಿಗೆ ಲಭಿಸುವಂತಾಗುತ್ತದೆ.

ಇದಲ್ಲದೆ ಹೆರಿಗೆಯಾದ ಮೊದಲ ದಿನದಿಂದಲೇ ಹಾಲುಣಿಸುವುದರಿಂದ ಮತ್ತೊಂದು ಮಹತ್ವದ ಪ್ರಯೋಜನವುಂಟು. ಮಗು ಹಾಲು ಚೀಪಿದಾಗ ಉಂಟಾಗುವ ಪ್ರಚೋದನೆಯಿಂದ ತಾಯಿಯ ದೇಹದಲ್ಲಿ ಕೆಲವು ಹಾರ್ಮೋನುಗಳು ಬಿಡುಗಡೆ ಹೊಂದುತ್ತವೆ. ಈ ಹಾರ್ಮೋನುಗಳು ತಾಯಿಯ ಗರ್ಭಕೋಶ ಸದ್ಯಃಥವಾದ ಸಹಜಸ್ಥಿತಿಗೆ ಮರಳಲು ಹಾಗೂ ರಕ್ತಸ್ರಾವ ತಡೆಗಟ್ಟಲು ಸಹಾಯಕವಾಗಿದೆ. ಅಲ್ಲದೆ ಈ ಪ್ರಚೋದನೆ ಅಧಿಕ ಹಾಲು ಉತ್ಪಾದನೆಗೂ ನೆರವಾಗುತ್ತದೆ.

## ಸ್ತನಪಾನದ ಅವಧಿ ಪ್ರಮಾಣ

ಹುಟ್ಟಿದ ಮಗುವಿಗೆ ಆದಷ್ಟು ಶೀಘ್ರವಾಗಿ ಮೊಲೆ ಚೀಪಿಸುವುದರ ಮಹತ್ವ, ಪ್ರಯೋಜನಗಳನ್ನು ಈಗಾಗಲೇ ವಿವರಿಸಿದ್ದೇನೆ. ಜನಿಸಿದ ಆರು ತಾಸುಗಳ ನಂತರ ಮಗುವನ್ನು ಮೊಲೆಗೆ ಹಾಕಿಕೊಳ್ಳುವುದು ಸೂಕ್ತ. ಪ್ರಾರಂಭದಲ್ಲಿ ಮಗು ಎರಡರಿಂದ ರಿಂದ ಐದು ನಿಮಿಷಗಳವರೆಗೆ ಹಾಲು ಕುಡಿಯುತ್ತದೆ. ಕ್ರಮೇಣ ಸ್ತನಪಾನದ ಅಭ್ಯಾಸವಾದಂತೆ ಈ ಅವಧಿ ಐದು ರಿಂದ 15 ನಿಮಿಷಗಳಿಗೇರುತ್ತದೆ. ಕೆಲವು ಮಕ್ಕಳು ಹಾಲು ಕುಡಿಯುವಾಗ ಅವಸರಿಸಿದರೆ ಇನ್ನು ಕೆಲವು ತುಂಬಾ ನಿಧಾನವಾಗಿ ಉದರ ಭರ್ತಿ ಮಾಡಿಕೊಳ್ಳುತ್ತವೆ. ವೇಳಾಪಟ್ಟಿಯನ್ನಿಟ್ಟುಕೊಂಡು ಹಾಲು ಕುಡಿಸುವ 'ಅತಿ ಶಿಸ್ತು' ಅಪೇಕ್ಷಣೀಯವಲ್ಲ. ನವಜಾತ ಶಿಶುವಿಗೆ ಹಗಲು ರಾತ್ರಿಗಳ ವ್ಯತ್ಯಾಸ ತಿಳಿದಿರುವುದಿಲ್ಲವಾದ್ದರಿಂದ ಪ್ರತಿ ಎರಡು ಗಂಟೆಗೊಮ್ಮೆ ನಿರಂತರವಾಗಿ ಹಾಲು ಉಣಿಸಬೇಕಾಗುತ್ತದೆ. ಮಗು ಬೆಳೆದಂತೆ ಹಾಲು ಕುಡಿಸುವಿಕೆಯ ಸಂಖ್ಯೆ ಕಡಿಮೆಯಾಗುತ್ತಾ ಬರುತ್ತದೆ. ಪ್ರತಿಸಾರಿ ಐದು ನಿಮಿಷಗಳ ಕಾಲ ಎರಡು ಮೊಲೆಗಳಿಂದಲೂ ಹಾಲೂಡಬೇಕು. ಹುಟ್ಟಿದ ಮಗುವಿನ ಪುಟ್ಟ ಗಾತ್ರದ ಹೊಟ್ಟೆ ನಿಮ್ಮ ಗಮನದಲ್ಲಿರಲಿ.

ಮೂರ್ನಾಲ್ಕು ತಿಂಗಳು ಗತಿಸಿದ ನಂತರ ಮಗುವಿಗೆ ಹಗಲಿನಲ್ಲಿ ನಾಲ್ಕೈದು ಸಾರಿ ಮತ್ತು ರಾತ್ರಿ ಒಮ್ಮೆ ಹಾಲು ಕುಡಿಸಿದರೆ ಸಾಕು. ಮಗು ಹಸಿವೆಯಿಂದ ಅಳತೊಡಗಿದರೆ ಮಾತ್ರ ಹಾಲು ಕುಡಿಸಲೇಬೇಕು. ಮಗು ಹಸಿವೆಯಿಂದ ಅಳುವಾಗಿನ ದನಿಯೇ ಬೇರೆ ಇರುತ್ತದೆ! ಹೆತ್ತ ತಾಯಿ ಇದನ್ನು ಅನುಭವದಿಂದ ಗ್ರಹಿಸಬಲ್ಲಳು.

ಮಗುವಿಗೆ ಎಷ್ಟು ದಿನಗಳ ಕಾಲ ಎದೆ ಹಾಲು ಕುಡಿಸಬೇಕು? ಇದು ಬಹಳಷ್ಟು ಜನ ಕೇಳುವ ಸಾಮಾನ್ಯ ಪ್ರಶ್ನೆ.

ಇತ್ತೀಚೆಗೆ ಅನೇಕ ತಾಯಂದಿರು ಮಗುವಿಗೆ ಒಂದು ವರ್ಷ ತುಂಬುವಷ್ಟರಲ್ಲಿ ಹಾಲು ಬಿಡಿಸುತ್ತಾರೆ. ವಿದ್ಯಾವಂತ, ಉದ್ಯೋಗಸ್ಥ ಮಹಿಳೆಯರಂತೂ ಮೂರು ತಿಂಗಳಲ್ಲೋ ಆರು ತಿಂಗಳಲ್ಲೋ ಹಾಲು ಕುಡಿಸುವ ಕರ್ತವ್ಯದಿಂದ 'ಬಿಡುಗಡೆ'

ಹೊಂದುತ್ತಾರೆ! ಇವು ನಿಜಕ್ಕೂ ಜಾಣ ನಿರ್ಧಾರಗಳಲ್ಲ. ತಾಯಿಯಿಂದ ಎಷ್ಟು ದಿನಗಳ ಕಾಲ ಹಾಲು ಕುಡಿಸಲು ಸಾಧ್ಯವೋ ಅಷ್ಟು ದಿನ ಹಾಲು ಕುಡಿಸಬೇಕೆನ್ನುವುದೇ ವೈದ್ಯರ ಪ್ರತಿಪಾದನೆ. ಮಗು ಒಂದೂವರೆ ಎರಡು ವರ್ಷದ್ದಾಗುವವರೆಗೆ ಸ್ತನಪಾನ ಮಾಡಿಸುವುದು ಸೂಕ್ತ.

ಹಾಲು ಕುಡಿಸುವ ತಾಯಿ ಮತ್ತೆ ಗರ್ಭ ಧರಿಸಿದರೆ ಮಗುವಿಗೆ ಹಾಲು ಉಣಿಸುವುದನ್ನು ನಿಲ್ಲಿಸಬಾರದು. ಮಗುವಿಗೆ ಹಾಲು ಬಿಡಿಸುವ ಅನೇಕ ತಪ್ಪು ವಿಧಾನಗಳು ಪ್ರಚಲಿತದಲ್ಲಿವೆ. ಇದ್ದಕ್ಕಿದ್ದಂತೆ ಒಂದೇ ದಿನದಲ್ಲಿ ಒಂದೇ ವಾರದಲ್ಲಿ ಮಗುವಿಗೆ ಮೊಲೆ ಬಿಡಿಸುವುದು ಸರಿಯಲ್ಲ. ಮೊಲೆತೊಟ್ಟಿಗೆ ವಿಷದ ಸೊಪ್ಪು, ಕಹಿ ರಸ ಸವರುವುದು ಮುಂತಾದ ಪ್ರಯೋಗಗಳು ತುಂಬಾ ಅವೈಜ್ಞಾನಿಕ. ನಿಜವೆಂದರೆ ಇಂಥ ಪ್ರಯತ್ನಗಳು ಅಗತ್ಯವೇ ಇಲ್ಲ. ಮಗು ಇತರ ಆಹಾರ ಸೇವಿಸುವುದನ್ನು ಚೆನ್ನಾಗಿ ಕಲಿತ ನಂತರ ತಾನೇ ಕ್ರಮೇಣ ಸ್ತನಪಾನ ತ್ಯಜಿಸುತ್ತದೆ. ಉದ್ಯೋಗಸ್ಥ ಮಹಿಳೆಯರು ಮೊಲೆಯಿಂದ ಶೇಖರಿಸಿದ ಹಾಲನ್ನು ಮಧ್ಯಾಹ್ನ ಮಗುವಿಗೆ ಕುಡಿಸುವ ವ್ಯವಸ್ಥೆ ಮಾಡಬಹುದು.

**ಹಾಲುಣಿಸುವ ತಾಯಿ ತಿಳಿಯಲೇಬೇಕಾದ ಸಂಗತಿಗಳು**

ಪ್ರಪಂಚದ ಪ್ರತಿಯೊಬ್ಬ ತಾಯಿಯೂ ಮಗುವಿಗೆ ಹಾಲು ಕುಡಿಸಲು ಸಮರ್ಥಳಾಗಿರುತ್ತಾಳೆ. ಅದು ಅವಳ ಹಕ್ಕು ಮತ್ತು ಹೊಣೆ ಎರಡೂ ಹೌದು. ಆದಾಗ್ಯೂ ಕೆಲವು ಅಮ್ಮಂದಿರು ಸ್ವತಃ ಸೃಷ್ಟಿಸಿಕೊಂಡ ಕಾರಣಗಳಿಂದಾಗಿ ಈ ಕಾರ್ಯದಲ್ಲಿ ವಿಫಲರಾಗುತ್ತಾರೆ. ಸಾಮಾನ್ಯವಾಗಿ ಮಾನಸಿಕ ಸಿದ್ಧತೆಯ ಕೊರತೆ ಇಂಥ ಸನ್ನಿವೇಶಕ್ಕೆ ನಿಮಿತ್ತವಾಗುತ್ತದೆ. ದೃಢ ನಿರ್ಧಾರ ಹಾಗೂ ಗಾಢ ಆತ್ಮವಿಶ್ವಾಸದಿಂದ ಈ ಅತಂತ್ರವನ್ನು ಯಶಸ್ವಿಯಾಗಿ ಮೆಟ್ಟಿನಿಲ್ಲಲು ಸಾಧ್ಯ. ಮಹಿಳೆ ಗರ್ಭಿಣಿಯಾಗಿರುವಾಗಲೇ ತಾಯ್ತನದ ಸಿದ್ಧತೆಯೆಡೆ ಹೆಜ್ಜೆ ಹಾಕಬೇಕು. ಅನುಭವಸ್ಥ ಅಜ್ಜಿ, ತಾಯಿ, ಸ್ನೇಹಿತೆಯರ ಸಲಹೆ, ಸಹಾಯವನ್ನು ಪಡೆಯಬಹುದು; ಗಂಡನ ಸಹಕಾರವೂ ಅತ್ಯಗತ್ಯ.

ಗ್ರಾಮೀಣ ಭಾಗದ ಅವಿಭಕ್ತ ಕುಟುಂಬದ ಹಿನ್ನಲೆ ಹೊಂದಿದವರಿಗೆ ಈ ರೀತಿಯ ಸಮಸ್ಯೆಯೇಳುವುದೇ ಇಲ್ಲ. ಆದರೆ ಪಟ್ಟಣದಲ್ಲಿನ ವಿಭಕ್ತ ಕುಟುಂಬದ ವಿದ್ಯಾವಂತ, ಹಣವಂತ ಮಹಿಳೆಯರು ಮೊಲೆಕುಡಿಸುವುದನ್ನು ಹೆಚ್ಚು ನೋಡಿರುವುದಿಲ್ಲವಾದ್ದರಿಂದ ಮಗುವಿಗೆ ಹಾಲು ಕುಡಿಸಲು ಸಾಕಷ್ಟು ತೊಂದರೆ ಅನುಭವಿಸುತ್ತಾರೆ.

ತಾಯಿ ಗರ್ಭಿಣಿಯಿದ್ದಾಗಲೇ ತನ್ನ ಸ್ತನಗಳ ಬಗ್ಗೆ ಗಮನ ಹರಿಸಿ, ಸ್ನಾನ ಮಾಡುವಾಗ ಮೊಲೆ ಮತ್ತು ತೊಟ್ಟನ್ನು ಶುಚಿಗೊಳಿಸಿಕೊಳ್ಳಬೇಕು. ಮೊಲೆತೊಟ್ಟನ್ನು ಸಾಬೂನಿನಿಂದ ತೊಳೆಯಕೂಡದು. ಏಕೆಂದರೆ ಇದರಿಂದ ಮೊಲೆತೊಟ್ಟನ್ನು ನುಣುಪಾಗಿಸುವ ಎಣ್ಣೆಯ ಅಂಶ ಇಲ್ಲದಂತಾಗಿ ಚರ್ಮ ಬಿರುಸಾಗಿ ಸೀಳುಬಿಡುತ್ತದೆ. ಹೀಗಾದಾಗ ತಾಯಿಯೂ ನೋವು ಅನುಭವಿಸುತ್ತಾಳೆ, ಮಗುವಿಗೂ ಹಾಲು ಚೀಪಲು ತೊಂದರೆಯಾಗುತ್ತದೆ. ಆದುದರಿಂದ ಮೊಲೆತೊಟ್ಟನ್ನು ಬರಿ ನೀರಿನಿಂದ ತೊಳೆದು ನಂತರ ತುಸು ಎಣ್ಣೆ ಸವರುವುದೊಳಿತು.



ಮಾಹಿತಿ, ಚಿತ್ರ: ಡಾ. ಸಿ. ಬಾಲಕೃಷ್ಣನ್

ಅತಿ ಬಿಗಿಯಾದ ಅಥವಾ ತೀರಾ ಸಡಿಲವಾದ ಬ್ರಾ ಧರಿಸಬಾರದು. ಕೆಲವರ ಮೊಲೆತೊಟ್ಟು ಚಿಕ್ಕದಾಗಿಯೋ ಚಪ್ಪಟೆಯಾಗಿಯೋ ಇರುವುದುಂಟು. ಹೀಗಿದ್ದಾಗ ಮಗುವಿಗೆ ಹಾಲುಣಿಸಲು ತೊಂದರೆಯಾಗುತ್ತದೆ. ಆರು ತಿಂಗಳ ಗರ್ಭಿಣಿಯಾಗಿದ್ದಾಲೇ ಇಂಥ ಸಾಧ್ಯತೆಯನ್ನು ಪರೀಕ್ಷಿಸಿಕೊಳ್ಳಬೇಕು. (ಚಿತ್ರ ನೋಡಿ)

ಚಿಕ್ಕ ಅಥವಾ ಚಪ್ಪಟೆ ಮೊಲೆತೊಟ್ಟನ್ನು ತುಸುಮಟ್ಟಿಗೆ ಸರಿಪಡಿಸಬಹುದು. ದಿನಂಪ್ರತಿ 10-15 ಬಾರಿ ಮೊಲೆತೊಟ್ಟನ್ನು ಎರಡು ಬೆರಳುಗಳಿಂದ ಹಿಡಿದು ಸಾವಧಾನವಾಗಿ ಹೊರಗೆಳೆಯಬೇಕು (ಚಿತ್ರ ನೋಡಿ) ಈ ಕ್ರಮ ಅನುಸರಿಸುವುದರಿಂದ ಯಶಸ್ವಿಯಾಗಿ ಹಾಲು ಕುಡಿಸಲು ಸಾಧ್ಯವಾಗುತ್ತದೆ.

ಸ್ತನಪಾನ ಮಾಡಿಸುವ ತಾಯಂದಿರಿಗೆ ಆಹಾರ, ನಿದ್ದೆ, ಪ್ರಶಾಂತ ಮನಸ್ಸು ಅತಿ ಮುಖ್ಯ. ಇವುಗಳೆಡೆ ನಿಗಾವಹಿಸುವುದನ್ನು ಕಡೆಗಣಿಸಕೂಡದು. ಹಾಲು ಕುಡಿಸುವ

ಮುನ್ನ ಮತ್ತು ತರುವಾಯ ಸ್ತನಗಳನ್ನು ನೀರಿನಿಂದ ತೊಳೆದುಕೊಳ್ಳಬೇಕು. ಹೆರಿಗೆಯಾದ ತಕ್ಷಣ ಆಯಾಸ ಮತ್ತು ನೋವು ಅನುಭವಿಸುವ ತಾಯಿಗೆ ಎದ್ದು ಕುಳಿತುಕೊಳ್ಳುವುದು ಸಾಧ್ಯವಾಗಲಿಕ್ಕಿಲ್ಲ; ಮಲಗಿದಲ್ಲಿಯೇ ಮಗುವಿಗೆ ಹಾಲು ಕುಡಿಸಬಹುದು. ತಾಯಿ ಮಲಗಿ ಹಾಲು ಕುಡಿಸುವಾಗ ತನ್ನ ತಲೆ ಹಾಗೂ ಬೆನ್ನಿನ ಕೆಳಗೆ ಎತ್ತರದ ದಿಂಬು ಇಟ್ಟುಕೊಂಡು ಮಗುವನ್ನು ಒಂದು ಪಕ್ಕಕ್ಕೆ ಮಲಗಿಸಿಕೊಳ್ಳಬೇಕು. ಅನಂತರ ಮಗುವಿನ ಮುಖದ ಬಳಿ ಎದೆಯನ್ನು ವಾಲಿಸಿ ನಿಧಾನವಾಗಿ ತೊಟ್ಟು ಬಾಯಿಗಿರಿಸಬೇಕು. ಮಗುವಿನ ಮೂಗಿನ ಮೇಲೆ ಬೀಳದಂತೆ ಮೊಲೆಯನ್ನು ಒಂದು ಕೈಯಲ್ಲಿ ಹಿಡಿದುಕೊಳ್ಳಲು ಮರೆಯಬಾರದು.

ಅನನುಭವಿ ಮಗು ಪ್ರಾರಂಭದಲ್ಲಿ ಹಾಲು ಚೀಪಲು, ಗುಟುಗರಿಸಲು ತುಸು ಪ್ರಯಾಸಪಡುವುದು ಸಹಜ. ಕ್ರಮೇಣ ಈ ಕ್ರಿಯೆಯಲ್ಲಿ ಪರಿಣತಿ ಸಾಧಿಸುತ್ತದೆ. ಆದ್ದರಿಂದ ಆರಂಭದ ದಿನಗಳಲ್ಲಿ ಮಗುವನ್ನು ಹೆಚ್ಚು ಸಾರಿ ಮೊಲೆಗೆ ಹಾಕಿಕೊಂಡಷ್ಟು ಒಳ್ಳೆಯದು.

ತಾಯಿ ತನ್ನೊಡಲ ಕುಡಿಗೆ ಹಾಲು ಕುಡಿಸಲು ಉತ್ತಮ ಗಾಳಿಬೆಳಕಿನ ವ್ಯವಸ್ಥೆಯಿರುವ ಪ್ರಶಾಂತ ಕೋಣೆಯನ್ನು ಆಯ್ದುಕೊಳ್ಳಬೇಕು. ಮನಸ್ಸಿಗೆ ಬೇಸರ, ಗಾಬರಿ, ದುಗುಡ, ಕೋಪ, ದುಃಖ ಆಗಿದ್ದಾಗ, ಇತರರೊಂದಿಗೆ ಜಗಳ ಕಾಯುವಾಗ ಹಾಲುಣಿಸಬಾರದು. ವಿಶ್ರಾಂತ ಸ್ಥಿತಿ ಹಾಗೂ ತಿಳಿಮನಸ್ಸಿನ ತಾಯಿ ಈ ಕಾಯಕವನ್ನು ಮಾಡುವಾಗ ಪ್ರೀತಿ-ಮಮತೆಯನ್ನು ತುಂಬಿಕೊಂಡಿರಬೇಕು.

ಮಗುವಿನ ಮುಖ ತಾಯಿಯ ಮೊಲೆಗೆ ಆದಷ್ಟು ಹತ್ತಿರವಾಗಿರುವಂತೆ ಮಗುವನ್ನು ಎತ್ತಿಕೊಳ್ಳಬೇಕು. ಇಲ್ಲದಿದ್ದರೆ ಮಗು ಮೊಲೆಯತೊಟ್ಟನ್ನು ಪದೇ ಪದೇ ತನ್ನ ಹತ್ತಿರಕ್ಕೆ ಎಳೆದುಕೊಂಡು ತೊಟ್ಟಿನ ಸೂಕ್ಷ್ಮ ಚರ್ಮಕ್ಕೆ ಗಾಯವಾಗುವ ಸಾಧ್ಯತೆಯಿದೆ.





ಕೇವಲ ಮೊಲೆತೊಟ್ಟು ಮಾತ್ರ ಮಗುವಿನ ಬಾಯಲ್ಲಿದೆ.





ಮೊಲೆ ತೊಟ್ಟು ಮತ್ತು ಅದರ ಹಿಂದಿನ ಭಾಗ ಮಗುವಿನ ಬಾಯಿಯಲ್ಲಿದೆ.

ಹಾಲುಣಿಸುವಾಗ ಮೊಲೆತೊಟ್ಟಿನ ಹಿಂದಿನ ಕಪ್ಪನೆಯ ಭಾಗವನ್ನೂ ಬಾಯಿಗಿರಿಸುವುದರಿಂದ ಮಗುವಿಗೆ ಸಾಕಷ್ಟು ಹಾಲು ದೊರಕುವಂತಾಗುತ್ತದೆ. ಮಗುವಿನ ಬಾಯಿಗೆ ಅವಸರದಿಂದ ಮೊಲೆ ತುರುಕುವುದು, ಅದಿನ್ನೂ ಕುಡಿಯುತ್ತಿರುವಾಗಲೆ ಬಿಡಿಸುವುದು ಸಲ್ಲದ ಕ್ರಮ. ಇದರಿಂದ ಮಗುವಿನ ಎಳೆಯ ಮನಸ್ಸು ಘಾಸಿಗೊಳ್ಳಬಹುದು.

ಕೆಲವು ಮಕ್ಕಳು ಮೊಲೆಯನ್ನು ಅವಸರವಸರವಾಗಿ ಚೀಪಿ ವಾಂತಿ ಮಾಡಿಕೊಂಡರೆ, ಇನ್ನೂ ಕೆಲವು ಅತಿ ನಿಧಾನವಾಗಿ ಹಾಲು ಹೀರುತ್ತವೆ. ಆದ್ದರಿಂದ ಮಗುವಿನ ಸ್ತನಪಾನದ ರೀತಿನೀತಿಗಳನ್ನು ಸೂಕ್ಷ್ಮವಾಗಿ ಗ್ರಹಿಸಿ ಅದರ ಇಷ್ಟಕ್ಕನುಗುಣವಾಗಿಯೇ ಹಾಲು ಕುಡಿಸಬೇಕು.

ಮೊಲೆತೊಟ್ಟು ತೀರಾ ಉದ್ದವಾಗಿದ್ದರೆ ಅದು ಬಾಯಿಯ ಅಂಗಳಕ್ಕೆ ತಾಗಿ ಮಗು ಹಾಲು ಚೀಪಲು ಕಷ್ಟವಾಗುತ್ತದೆ. ಇಂಥ ಸಂದರ್ಭದಲ್ಲಿ ತೊಟ್ಟಿನ ಸ್ವಲ್ಪ ಭಾಗವನ್ನು ಮಾತ್ರ ಮಗುವಿನ ಬಾಯಿಯಲ್ಲಿಟ್ಟು ತಾಯಿ ತನ್ನ ಕೈಯಿಂದ ಮೊಲೆಯನ್ನು ತೊಟ್ಟಿನ ಕಡೆಗೆ ಮೃದುವಾಗಿ ಹಿಚುಕಬೇಕು.

ಯಾವ ತಾಯಿಯೂ ತನ್ನಲ್ಲಿ ಮಗುವಿಗೆ ಸಾಕಾಗುವಷ್ಟು ಹಾಲು ದೊರಕುತ್ತಿಲ್ಲ

*ಎದೆಹಾಲಿನ ಮಹತ್ವವನ್ನು ಜನತೆಗೆ ಮನವರಿಕೆ ಮಾಡಿಕೊಡುವ ಮುಖ್ಯ ಉದ್ದೇಶದಿಂದ ಭಾರತದಲ್ಲಿ BPNI (Breast-feeding Promotion Network of India) ಎಂಬ ಸಂಸ್ಥೆ 1991ರಲ್ಲಿ ಪ್ರಾರಂಭವಾಗಿದೆ. ಯುನಿಸೆಫ್ ಮತ್ತಿತರ ಪ್ರಮುಖ ಸಂಸ್ಥೆಗಳ ಸಹಕಾರದೊಂದಿಗೆ ಕಾರ್ಯನಿರ್ವಹಿಸುತ್ತಿರುವ ಇದು ದೇಶಾದ್ಯಂತ ಹಲವು ಶಾಖೆಗಳನ್ನು ಹೊಂದಿದೆ. 'ಎದೆಹಾಲುಕುಡಿಸುವಿಕೆಯನ್ನು ಪ್ರೋತ್ಸಾಹಿಸುವ ಸಪ್ತಾಹ'ವನ್ನು ಪ್ರತಿ ಆಗಸ್ಟ್ ತಿಂಗಳಲ್ಲಿ ಜಗತ್ತಿನಾದ್ಯಂತ ಆಚರಿಸಲಾಗುತ್ತದೆ. BPNI ಬಗ್ಗೆ ಆಸಕ್ತಿಯುಳ್ಳವರು, ಸದಸ್ಯತ್ವ ಪಡೆಯಬಯಸುವವರು ಈ ಕೆಳಗಿನ ವಿಳಾಸಗಳೊಂದಿಗೆ ಸಂಪರ್ಕಿಸಬಹುದು :*

1. *ಡಾ. ಸಿ. ಬಾನಾಪುರಮಠ,*
   *ಅಧ್ಯಾಪಕ, ಚಿಕ್ಕಮಕ್ಕಳ ವಿಭಾಗ,*
   *ಜೆ.ಜೆ.ಎಂ. ಮೆಡಿಕಲ್ ಕಾಲೇಜು,*
   *ದಾವಗೆರೆ - 577 006*
2. *Central Co-ordinator,*
   *BPNI, Secretariate*
   *PB No. 33, Pitampura*
   *NEW DELHI - 110 034*

ವೆಂದು ಆತಂಕ ಪಡಬೇಕಿಲ್ಲ. ಮಗು ಸೇವಿಸಿದಂತೆ ಖಾಲಿಯಾಗುವ ಹಾಲು ಸಹಜ ಪ್ರಚೋದನೆಯಿಂದ ಪುನರುತ್ಪತ್ತಿಯಾಗುತ್ತಲೇ ಇರುತ್ತದೆ.

ಮಗು ಹುಟ್ಟಿದಾಗ ತೀರ ಚಿಕ್ಕದಿದ್ದರೆ, ಏಳು ತಿಂಗಳಲ್ಲಿ ಹುಟ್ಟಿದರೆ ಮೊಲೆ ಚೀಪಿಸುವುದು ಪ್ರಯಾಸದಾಯಕವಾಗುತ್ತದೆ. ಹುಟ್ಟಿದಾಗಲೇ ತುಟಿ ಹರಿದ ಮಗುವಿಗೂ ಸ್ತನಪಾನ ಕಷ್ಟ. ಹಾಗೆಯೇ ಬುದ್ಧಿಮಾಂದ್ಯ ಅಥವಾ ವಾಂತಿ ಶೀತ ಕೆಮ್ಮು ಜ್ವರಗಳಿಂದ ಬಳಲುವ ಮಗುವಿಗೆ ಜೀವದ್ರವದ ಸೇವನೆ ಕಷ್ಟದಾಯಕವಾಗುತ್ತದೆ. ಇಂತಹ ಪ್ರಕರಣಗಳಲ್ಲಿ ಮಗುವಿಗೆ ಹಾಲು ಕುಡಿಯಲು ಸಾಧ್ಯವಾಗದಿದ್ದಾಗ ಹಾಲನ್ನು ಹಿಂಡಿತೆಗೆದು ಚಮಚ, ಒಳಲೆ ಅಥವಾ ಇಂಕ್‌ಫಿಲ್ಲರ್ ಮೂಲಕ ಮಗುವಿಗೆ ನೀಡಬಹುದು. ಅವಳಿಜವಳಿ ಮಕ್ಕಳು ಹುಟ್ಟಿದಾಗ ಹಾಲಿನ ಕೊರತೆಯಾಗಬಹುದೆಂದು ಭಯಪಡುವದಕ್ಕೆ ಕಾರಣವಿಲ್ಲ. ಎರಡೂ ಮಕ್ಕಳಿಗೆ ಸಾಕಾಗುವಷ್ಟು ಹಾಲನ್ನು ತಾಯಿ ಉತ್ಪಾದಿಸಬಲ್ಲಳು. ಎರಡೂ ಮೊಲೆಗೆ ಒಂದೊಂದು ಮಗುವನ್ನು ಹಾಕಿಕೊಂಡು ಅವಳಿ ಮಕ್ಕಳಿಗೆ ಹಾಲು ಉಣಿಸಬೇಕಾಗುತ್ತದೆ. ಮಗುವಿಗೆ ಕಾಯಿಲೆ - ಅದರಲ್ಲೂ ಬೇಧಿ - ಆದಾಗ ಅನೇಕ ಅಮ್ಮಂದಿರು ಹಾಲು ಕುಡಿಸುವುದಿಲ್ಲ. ಹಾಲು ಕೊಟ್ಟರೆ ಮಗುವಿಗೆ ಅಜೀರ್ಣವಾಗುತ್ತದೆಂಬುದು ಅವರ ಅಭಿಮತ. ಇದು ಶುದ್ಧ ತಪ್ಪು. ಕಾಯಿಲೆಬಿದ್ದ ಮಗುವಿಗೆ ಅಗತ್ಯವಿರುವ ಶಕ್ತಿ ಹಾಲಿನಿಂದಲೇ ಪೂರೈಕೆಯಾಗಬೇಕಲ್ಲವೆ? ಹೊಟ್ಟೆ ಜಾಡಿಸುವ ಮಗುವಿಗಂತೂ ನೀರು ಮತ್ತು ಲವಣಗಳ ತೀವ್ರ ಕೊರತೆಯುಂಟಾಗಿರು


ಮಿದುಳು
ಪಿಟ್ಯುಟರಿ ಗ್ರಂಥಿ
ಮಗು ಮೊಲೆಯನ್ನು
ಚೀಪಿದಾಗ
ಉಂಟಾಗುವ
ಪ್ರಚೋದನೆ
ಬಿಡುಗಡೆಯಾದ
ಹಾರ್ಮೋನ್
ಹಾಲು
ಹೆಚ್ಚುತ್ತದೆ
ರಕ್ತಸ್ರಾವ ನಿಲ್ಲುತ್ತದೆ.
ಗರ್ಭಕೋಶ ತನ್ನ
ಸಹಜ ಸ್ಥಿತಿಗೆ ಬರುತ್ತದೆ.
ಗರ್ಭಧಾರಣೆ ಆಗುವುದಿಲ್ಲ

ತ್ತದೆ. ಇಂತಹ ಮಕ್ಕಳಿಗೆ ತಾಯಿಯ ಹಾಲಿನ ಅಗತ್ಯ ಇನ್ನೂ ಹೆಚ್ಚು. ಕೆಲವು ಸಲ ಅಧಿಕ ಹಾಲಿನ ಪೂರೈಕೆಯೊಂದಿಗೇ ಮಗುವಿನ ಬೇಧಿ ನಿಲ್ಲಲು ಸಾಧ್ಯವಿದೆ. ಆದ್ದರಿಂದ ಮಗು ಕಾಯಿಲೆಯಿಂದ ಚೇತರಿಸಿಕೊಳ್ಳುವ ಕೆಲದಿನಗಳವರೆಗೂ ಎದೆ ಹಾಲನ್ನು ಹೆಚ್ಚು ಹೆಚ್ಚಾಗಿ ಕುಡಿಸಬೇಕು.

ಮಗುವಿಗೆ ಇತರೆ ಹಾಲನ್ನು ಕೊಡುವಾಗ ಬಾಟಲಿಗಿಂತ ಲೋಟ, ಚಮಚೆ, ಒಳಲೆಯನ್ನು ಬಳಸುವುದು ಒಳ್ಳೆಯದು. ಈ ಕ್ರಮಕ್ಕೆ ಸಮರ್ಥನೆಯ ಎರಡು ಅಂಶಗಳುಂಟು. ಮೊದಲನೆಯದಾಗಿ, ಲೋಟ, ಚಮಚ, ಒಳಲೆಗಳನ್ನು ಸುಲಭವಾಗಿ ಶುಚಿಗೊಳಿಸಿ ರೋಗಾಣುರಹಿತಗೊಳಿಸಬಹುದು. ಎರಡನೆಯದಾಗಿ, ಬಾಟಲಿಹಾಲು ನಿಪ್ಪಲ್ ಮೂಲಕ ಸುನಾಯಾಸವಾಗಿ ಬಾಯಿ ಸೇರುವುದೇ ಮಗುವಿಗೆ ರೂಢಿಯಾಗಿ ಮುಂದೆ ತಾಯಿಯ ಮೊಲೆಹಾಲನ್ನು ಚೀಪಿಕುಡಿಯುವ ಶ್ರಮದಾಯಕ ವಿಧಾನವನ್ನು ಅದು ತಿರಸ್ಕರಿಸಬಹುದು.

ಎದೆಹಾಲು ಕುಡಿಯುವಾಗ ಮಗು ಸ್ವಲ್ಪ ಪ್ರಮಾಣದಲ್ಲಿ ಗಾಳಿಯನ್ನೂ ಸೇವಿಸುತ್ತದೆ. ಈ ಗಾಳಿಯನ್ನು ಹೊರತೆಗೆಯಲು ಮಗುವನ್ನು ಭುಜದ ಮೇಲೆ ಹಾಕಿಕೊಂಡು ಬೆನ್ನು ಸವರಿ ತೇಗಿಸಬೇಕು. ಎದೆಹಾಲಿಗಿಂತ ಬಾಟಲಿಹಾಲು ಕುಡಿಯುವ ಮಗು ಹೆಚ್ಚು ಗಾಳಿಯನ್ನು ಸೇವಿಸುವುದರಿಂದ ಈ ಮಗುವಿಗೆ ತೇಗಿಸಬೇಕಾದ್ದು ಅತ್ಯವಶ್ಯ.

**ತಾಯಿಯ ಆಹಾರ, ಔಷಧಿ**

ಹಾಲು ಉಣಿಸುವ ತಾಯಿಯರು ಆಹಾರ ಸೇವಿಸುವಾಗ ತಮ್ಮನ್ನು ಅವಲಂಬಿಸಿದ ಪುಟಾಣಿ ಜೀವವನ್ನು ಮರೆಯಬಾರದು. ಅವರ ಆಹಾರಾಭ್ಯಾಸದಲ್ಲಿ ಎರಡು ಜೀವಗಳ ಬೇಡಿಕೆ ಪರಿಗಣಿಸಲ್ಪಟ್ಟಿರಬೇಕು. ದೈನಂದಿನ ಆಹಾರ ಸೊಪ್ಪು, ತರಕಾರಿ ಹಣ್ಣುಗಳನ್ನು ಒಳಗೊಂಡು ಪೌಷ್ಟಿಕ ಸಮತೋಲನ ಸಾಧಿಸಬೇಕಾಗುತ್ತದೆ. ನಿತ್ಯ ಎರಡು ಲೋಟ ಹಾಲು, ಯಥೇಚ್ಛ ನೀರು ಸೇವಿಸುವುದೊಳಿತು. ಆಹಾರದ ಜೊತೆಗೆ ವಿಶ್ರಾಂತಿ ಮತ್ತು ನಿದ್ದೆಯೂ ಅತ್ಯಗತ್ಯ.

ಹಾಲು ಕುಡಿಸುವ ತಾಯಂದಿರು ಕೆಲವು ಪದಾರ್ಥಗಳನ್ನು ಸೇವಿಸಬಾರದೆಂಬ ನಿಷೇಧವೂ ಹಲವು ಕಡೆ ಪ್ರಚಲಿತದಲ್ಲಿದೆ. ದುರಾದೃಷ್ಟದ ಸಂಗತಿಯೆಂದರೆ ತಾಯಿಗೆ ಅತ್ಯವಶ್ಯವಾಗಿ ಬೇಕಾದ ಪೌಷ್ಟಿದಾಯಕ ಆಹಾರ ಪದಾರ್ಥಗಳೇ ಈ ತ್ಯಾಜ್ಯಪಟ್ಟಿಯಲ್ಲಿರುತ್ತವೆ. ಒಂದೇ ಮಾತಿನಲ್ಲಿ ಹೇಳುವುದಾದರೆ ಹಾಲುಣಿಸುವ ತಾಯಿ ತಿನ್ನಬಾರದು ಎನ್ನುವ ಯಾವ ಪದಾರ್ಥವೂ ಇಲ್ಲ.

ವೈದ್ಯರ ಸಲಹೆಯಿಲ್ಲದೆ ಯಾವ ಔಷಧಿಯನ್ನೂ ತಾಯಿ ಸೇವಿಸಕೂಡದು. ಗರ್ಭನಿರೋಧಕ ಮಾತ್ರೆಗಳನ್ನು ನುಂಗಬಾರದು. ಔಷಧಿ ತಾಯಿಹಾಲಿನ ಮೂಲಕ ಮಗುವಿನ ದೇಹದೊಳಗೆ ಸೇರಿಕೊಂಡು ತಾತ್ಕಾಲಿಕ ಹಾಗೂ ಶಾಶ್ವತ ದುಷ್ಪರಿಣಾಮಗಳನ್ನುಂಟು ಮಾಡುತ್ತದೆ ಎಂಬುದು ನಿಮ್ಮ ಗಮನದಲ್ಲಿರಲಿ.

**ತಾಯಿ-ಮಗುವಿನ ಬಾಂಧವ್ಯ:**

ಎದೆಹಾಲು ಕುಡಿಸುವುದರಿಂದ ತಾಯಿಗೆ ಮಗುವನ್ನು ಪೋಷಣೆ ಮಾಡಿದ

ಸಂತೃಪ್ತಿ, ಆತ್ಮವಿಶ್ವಾಸ ಲಭಿಸಿದರೆ ಮಗುವಿಗೆ ತಾನು ತಾಯಿ ಬಳಿ ಹೆಚ್ಚು ಸುರಕ್ಷಿತನಾಗಿದ್ದೇನೆಂಬ ವಿಶ್ವಾಸ ಮೂಡುತ್ತದೆ. ಇದರಿಂದ ತಾಯಿಯ ಉಸಿರು, ವಾಸನೆ, ಬಿಸಿ, ಹೃದಯಬಡಿತ ಎಲ್ಲವೂ ಮಗುವಿಗೆ ಪರಿಚಯವಾಗಿ ಅನ್ಯೋನ್ಯತೆಯ ಎಳೆಗಳು ಬೆಸೆದುಕೊಳ್ಳುತ್ತವೆ. ಮೊಲೆಕುಡಿಸುವ ಕ್ರಿಯೆಯೇ ತಾಯಿ-ಮಗು ನಡುವಿನ ಮಮತೆ, ಸಾಮೀಪ್ಯಕ್ಕೆ ಸಂಕೇತವೆನ್ನಿಸುತ್ತದೆ. ಎದೆಹಾಲು ಕುಡಿಸುವಾಗ ತಾಯಿ-ಮಗುವಿನ ಮಧ್ಯೆ ಹೆಚ್ಚು ಸಾಮೀಪ್ಯ ಏರ್ಪಟ್ಟಿರುತ್ತದೆ. ಬಾಟಲಿಹಾಲು ಕುಡಿಸುವ ತಾಯಿ ಹಾಗೂ ಎದೆಹಾಲು ಕುಡಿಸುವ ಮಾತೆಯರನ್ನು ಅವಲೋಕಿಸಿದರೆ ಈ 'ಸಾಮೀಪ್ಯ'ದ ಅಂತರ ಗೋಚರಿಸದಿರದು.

ಸ್ತನಪಾನದಿಂದ ಮಗುವಿಗಷ್ಟೇ ಅಲ್ಲ ತಾಯಿಗೂ ಹಲವು ಪ್ರಯೋಜನಗಳುಂಟು.

★ ಎದೆಹಾಲು ಕುಡಿಸುವುದರಿಂದ ತಾಯಿಗೆ ಮಾತೃತ್ವದ ಸಂಪೂರ್ಣ ತೃಪ್ತಿ ದೊರಕುತ್ತದೆ.

★ ಗರ್ಭಿಣಿಯಾಗಿದ್ದಾಗ ಹಿಗ್ಗಿದ ಗರ್ಭಕೋಶ ಶೀಘ್ರವಾಗಿ ತನ್ನ ಸಹಜಸ್ಥಿತಿಗೆ ತಲುಪುತ್ತದೆ.

★ ಹಾಲು ಕುಡಿಸುವ ಮಹಿಳೆಯರಲ್ಲಿ ಸ್ತನಕ್ಯಾನ್ಸರ್ ಅಪರೂಪ. ಸ್ತನಪಾನದಿಂದ ತಾಯಂದಿರ ಹಣ, ಸಮಯ, ಶ್ರಮ ಉಳಿತಾಯವಾಗುತ್ತದೆ.

★ ಮೊಲೆಕುಡಿಸುವ ಸ್ತ್ರೀಯರು ಬೇಗ ಗರ್ಭಧರಿಸುವುದಿಲ್ಲ. ಯಾವುದೇ ಕೃತಕ ಸಾಧನಗಳ ಬಳಕೆಯಿಲ್ಲದೇ ಎದೆಹಾಲೂಡುವ ತಾಯಿಯರು ಮೂರ್‍ನಾಲ್ಕು ತಿಂಗಳವರೆಗೆ ಕುಟುಂಬ ಯೋಜನೆ ಸಾಧಿಸಬಲ್ಲರು.

**ಎದೆಹಾಲು ಮತ್ತು ತಾಯಿಯ ಸೌಂದರ್ಯ:**

ಎಷ್ಟೋ ತಾಯಂದಿರು ಮಗುವನ್ನು ಎದೆಹಾಲಿನಿಂದ ವಂಚಿಸಲು ಕಾರಣವೆಂದರೆ ಹಾಲೂಡುವುದರಿಂದ ತಮ್ಮ ಸೌಂದರ್ಯ ಕ್ಷಯಿಸುತ್ತದೆಂಬ ತಪ್ಪು ಕಲ್ಪನೆ. ಇಂತಹ ಒಂದು ಆಧಾರರಹಿತ ನಂಬಿಕೆಯಿಂದಾಗಿ ತಾಯಿ ಮತ್ತು ಮಗು ನಷ್ಟ ಅನುಭವಿಸುವುದು ಸುಳ್ಳಲ್ಲ.

ಹಾಲು ಕುಡಿಸುವುದರಿಂದ ತಾಯಿಯ ದೇಹದಲ್ಲಿ ಶೇಖರಗೊಂಡ ಅಧಿಕ ಕೊಬ್ಬು ಕರಗಿ ತಾಯಿಯ ರೂಪ ಮತ್ತು ಆರೋಗ್ಯ ಎರಡೂ ವೃದ್ಧಿಸುತ್ತದೆ. ಆದ್ದರಿಂದ ಸೌಂದರ್ಯದ ಬಗೆಗೆ ಅತಿಯಾದ ಕಾಳಜಿ ಹೊಂದಿರುವ ಸ್ತ್ರೀಯರು ಮಗುವಿಗೆ ಹೆಚ್ಚು ಎದೆಹಾಲು ಕುಡಿಸಬೇಕೆಂಬ ಮರ್ಮ ಅರಿಯುವುದೊಳಿತು. ●

Printed and Published by N.H.WADAVI on behalf of Loka Shikshana Trust at 'Samyukta Karnataka Press', Koppikar Road, Hubli - 580020. (Phone: 64303): No. 2, Residency Road, Bangalore - 560025 (Phone: 213265)

Managing Editor: K. SHAMARAO

Registered with the Registrar of Newspapers for India under No.3633/57

KASTURI, Kannada Digest Reg.No. KRNG-43, Licence No.L 2120/WPP No.33 Price: Rs. 5.00




# ಲೋಕ ಶಿಕ್ಷಣ ಟ್ರಸ್ಟ್ ಗ್ರಂಥಮಾಲೆಯ ಪ್ರಕಟಣೆಗಳು ಹುಬ್ಬಳ್ಳಿ-ಬೆಂಗಳೂರು

| | | | ಬೆಲೆ |
|---|---|---|---|
| 1. | ಶ್ರೀ ರಾಮದಾಸರು ಹೇಳಿದ ಕಥೆಗಳು | ಶ್ರೀ ಬಸಪ್ಪ ದಾನಪ್ಪ ಜತ್ತಿ | ರೂ. 12-00 |
| 2. | ಅಂತರಾತ್ಮನಿಗೆ | ಶ್ರೀ ರಂಗನಾಥ ದಿವಾಕರ | ರೂ. 5-00 |
| 3. | ಗೀತೆಯ ಗುಟ್ಟು | ಶ್ರೀ ರಂಗನಾಥ ದಿವಾಕರ | ರೂ. 15-00 |
| 4. | ಪುಟಾಣಿಗೆ ಶರಣರ ಕಥೆಗಳು | ಶ್ರೀಮತಿ ಜೆ.ವಿ.ಜಯಾ ರಾಜಶೇಖರ | ರೂ. 3-50 |
| 5. | ಮರಳಿ ಬಂದ ಮಧುರ ಮಾಸ | ಶ್ರೀಮತಿ ಜೆ.ವಿ.ಜಯಾ ರಾಜಶೇಖರ | ರೂ. 12-00 |
| 6. | ವಿಚಾರ ಜ್ಯೋತಿ | ಶ್ರೀ ಕೆ.ಟಿ.ಪಾಂಡುರಂಗಿ | ರೂ. 10-00 |
| 7. | ವಚನಗಳಲ್ಲಿ ಪ್ರತಿಮೆಗಳು | ಶ್ರೀಮತಿ ಉಷಾಕಿರಣ್ | ರೂ. 25-00 |
| 8. | ಶಿಶುನಾಳ ಶರೀಫ ಸಾಹೇಬರು | ಶ್ರೀ ಶಿವಾನಂದ ಗುಬ್ಬಣ್ಣವರ | ರೂ. 15-00 |
| 9. | ನನಗೆ ನಾನೇ ಮಾದರಿ (ಆತ್ಮಕಥನ) | ಶ್ರೀ ಬಿ.ಡಿ.ಜತ್ತಿ | ರೂ. 40-00 |
| 10. | ಕೋಟ್ಯಧೀಶ್ವರರ ಪ್ರಪಂಚದಲ್ಲಿ 60 ದಿನ | ಶ್ರೀ ಎಸ್.ಪಿ.ಭಟ್ಟ | ರೂ. 20-00 |

ಪುಸ್ತಕ ದೊರೆಯುವ ಸ್ಥಳ:

**ಸಂಯುಕ್ತ ಕರ್ನಾಟಕ ಪ್ರೆಸ್,**
**ಕೊಪ್ಪಿಕರ ರೋಡ್, ಹುಬ್ಬಳ್ಳಿ**

ವಿ.ಸೂ:- ಒಂದೊಂದು ಪುಸ್ತಕದ ಕನಿಷ್ಟ 10 ಪ್ರತಿ, ಅದಕ್ಕಿಂತಲೂ ಹೆಚ್ಚು ಖರೀದಿಸಿದಲ್ಲಿ ಶೇ. 15ರಂತೆ ಕಮೀಶನ್ ಕೊಡಲಾಗುವುದು. ಅಂಚೆ ವೆಚ್ಚ ಪ್ರತ್ಯೇಕ.

